# ರಾಷ್ಟ್ರನೇತಾರ

ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ

ಸ್ಮರಣ ಸಂಪುಟ



ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಿತಿ, ಚಿತ್ರದುರ್ಗ

# ರಾಷ್ಟ್ರನೇತಾರ

## ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ
## ಸ್ಮರಣ ಸಂಪುಟ

ಸಂಪಾದಕರು

ಪ್ರೊ. ಎಚ್. ಶ್ರೀಶೈಲ ಆರಾಧ್ಯ

ಪ್ರೊ. ಬಿ. ರಾಜಶೇಖರಪ್ಪ

ಪ್ರೊ. ಬಿ. ಪಿ. ವೀರೇಂದ್ರ ಕುಮಾರ್

ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಿತಿ

ಚಿತ್ರದುರ್ಗ - ೫೭೭ ೫೦೧

RĀSHTRANĒTĀRA : A Commemoration Volume on the occasion of the Birth Centenary Celebration of S. Nijalingappa
Edited by : Prof. H. Srishila Aradhya, Prof. B. Rajashekharappa
and Prof. B. P. Veerendra Kumar

Pages : XII + 164 + 16 ಪುಟ ಚಿತ್ರಗಳು

2003



ಬೆಲೆ : ರೂ. ೧೦೦

ರಕ್ಷಾಕವಚ ವಿನ್ಯಾಸ : ಎಸ್. ಮಂಜುನಾಥ್

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA

ಚಾಮರಾಜಪೇಟೆ, ಬೆಂಗಳೂರು - ೧೮
✆ : ೬೬೧೩೧೨೩, ೬೬೧೮೭೫೨

# ನಿವೇದನೆ

ನಮ್ಮ ರಾಜ್ಯ ಕಂಡಂತಹ ಒಂದು ಮಹಾಚೇತನ, ಸ್ಫಟಿಕಸದೃಶ ನಿರ್ಮಲ ವ್ಯಕ್ತಿ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು. ಅವರ ಜನ್ಮಶತ ಮಾನೋತ್ಸವಕ್ಕಾಗಿ ಹೊರತಂದ ಸಂಪುಟ ಈ "ರಾಷ್ಟ್ರ ನೇತಾರ".

ಗಾಂಧೀಜಿಯವರ ಕರೆಗೆ ಓಗೊಟ್ಟು ಇದ್ದುದನ್ನು ಇದ್ದಂತೆಯೇ ಬಿಟ್ಟು ಹೋರಾಟದ ಕಂಕಣ ಕಟ್ಟಿಕೊಂಡ ದೇಶಭಕ್ತರಲ್ಲಿ ನಿಜಲಿಂಗಪ್ಪನವರೂ ಒಬ್ಬರು. ಬರೀ ಒಬ್ಬರಲ್ಲ, ಲಕ್ಷಾಂತರ ಜನರನ್ನು ಈ ಚಳುವಳಿಗೆ, ಸಂಘರ್ಷಕ್ಕೆ ಸಾಣೆ ಹಿಡಿದು ಸಿದ್ಧಪಡಿಸಿದ ಶಕ್ತಿವಂತರು.

ಒಬ್ಬ ಆಡಳಿತಗಾರನಾಗಿ, ಮುತ್ಸದ್ದಿಯಾಗಿ, ಶುದ್ಧ ಹಸ್ತದವರಾಗಿ, ಕಟ್ಟಕಡೆಗೆ ಒಬ್ಬ ಮನುಷ್ಯನಾಗಿ ಎಸ್ಸೆನ್ ಪ್ರಶ್ನಾತೀತರು, ಅವರ ವಿರೋಧಿಗಳೂ ಮೆಚ್ಚಿದಂತಹವರು.

ಎಸ್ಸೆನ್ ಜನ್ಮಶತಮಾನೋತ್ಸವದ ಈ ಸಂದರ್ಭದಲ್ಲಿ ಅವರ ಬದುಕು ಸಾಧನೆಗಳ ಬಗ್ಗೆ ಪುಸ್ತಕಗಳನ್ನು ಹೊರತರಬೇಕು ಮತ್ತು ಕೇವಲ ಛಾಯಾಚಿತ್ರಗಳ ಮೂಲಕ ಅವರನ್ನು ಪರಿಚಯಿಸುವಂತಹ ಫೋಟೋ ಆಲ್‌ಬಮ್ ಆಗಬೇಕು ಇತ್ಯಾದಿ ಯೋಚನೆಗಳು ನಮಗೆ ಸಹಜವಾಗಿಯೇ ಬಂದುವು. ಈಹಿಂದೆ ಅವರ ಬಗ್ಗೆ ಬೇರೆ ಬೇರೆ ವರ್ಷದ ಜನ್ಮದಿನಾಚರಣೆಯ ಸಂಚಿಕೆಗಳೂ, ಬೇರೆ ಬೇರೆ ಪುಸ್ತಕಗಳೂ ಪ್ರಕಟವಾಗಿವೆ. ಆದರೆ ಅವು ಯಾವುವೂ ಸದ್ಯಕ್ಕೆ ಮಾರುಕಟ್ಟೆಯಲ್ಲಿಲ್ಲ. ಈ ವಿಶೇಷ ಸಂದರ್ಭದಲ್ಲಿ ಜನ್ಮಶತಮಾನೋತ್ಸವ ಸಮಿತಿಯಿಂದಲೇ ಒಂದು ಅಡಕವಾದ ಸಂಪುಟವನ್ನು ತರಬೇಕು; ಅದರಲ್ಲಿ ಹಿಂದೆ ಅವರ ಬಗ್ಗೆ ಪ್ರಕಟವಾದ ಕೆಲವು ಲೇಖನಗಳು ಪುನರ್ ಮುದ್ರಣವಾಗಬೇಕು ಮತ್ತು ಕುವೆಂಪು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮತ್ತು ಪದವಿ ಕಾಲೇಜು ವಿದ್ಯಾರ್ಥಿಗಳಿಗೆ ಪ್ರಬಂಧ ಸ್ಪರ್ಧೆ ಏರ್ಪಡಿಸಿ, ಆಯ್ಕೆಯಾದವುಗಳನ್ನು ಈ ಸಂಪುಟದಲ್ಲಿ ಸೇರಿಸಬೇಕು ಎನ್ನುವ ಆಲೋಚನೆಯೂ ನಮ್ಮದಾಗಿತ್ತು. ಅದಕ್ಕಾಗಿ ಎಸ್ಸೆನ್ ಅಭಿಮಾನಿಗಳ ಸಭೆ ಕರೆದು ಇದನ್ನೆಲ್ಲ ಬಹಿರಂಗಪಡಿಸಿದಾಗ ಒಂದು ಸಮಿತಿ ಆಯಿತು ; ಪ್ರಸ್ತುತ ಸಂಪುಟಕ್ಕೆ ಸಂಪಾದಕರನ್ನು ಆರಿಸಿ ಒಪ್ಪಿಸಿಕೊಂಡು ಕೆಲಸ ಪ್ರಾರಂಭಿಸಿದ್ದೂ ಆಯಿತು.

ಸ್ಫರ್ಧೆಗೆ ನಾವು ನಿರೀಕ್ಷಿಸಿದ ಸಂಖ್ಯೆಯಷ್ಟು ಲೇಖನಗಳು ಬಾರದೆ

ಹೋದುವು. ಆದರೆ ಬಂದಿರುವಷ್ಟು ಲೇಖನಗಳೆಲ್ಲಾ ಗಂಭೀರ ಪ್ರಯತ್ನಗಳೇ ಸರಿ. ಬಹುಮಾನ ಪಡೆದ ಮೊದಲ ಮೂರು ಲೇಖನಗಳೊಡನೆ, ಸಮಾಧಾನಕರ ಬಹುಮಾನಕ್ಕೆ ಆಯ್ಕೆಯಾದ ಅನಂತರದ ಮೂರು ಲೇಖನಗಳನ್ನು ಸೇರಿಸಿ ವಿದ್ಯಾರ್ಥಿಗಳ ಒಟ್ಟು ಆರು ಲೇಖನಗಳನ್ನು ಇಲ್ಲಿ ಪ್ರಕಟಿಸಿದ್ದೇವೆ. ಪ್ರಕಟಿತ ಸಂಚಿಕೆಗಳ ಕೆಲವು ಲೇಖನಗಳು, ಹೊಸದಾಗಿ ಎರಡು ಸಂದರ್ಶನಗಳು ಮತ್ತು ಕೆಲವು ಛಾಯಾಚಿತ್ರಗಳು ಇಲ್ಲಿವೆ.

ಸಂಪುಟ ಚೆನ್ನಾಗಿ ಹೊರಬರಲೆಂದು ರಾಷ್ಟ್ರದ ಉನ್ನತೋನ್ನತರು, ಪೂಜ್ಯರು ಹಾರೈಕೆ ಕಳುಹಿಸಿದ್ದಾರೆ. ಇದಲ್ಲದೆ ಇದಕ್ಕೆ ಅನೇಕರು ತಮ್ಮ ತನುಮನಧನಗಳಿಂದ ನೆರವಾಗಿದ್ದಾರೆ. ಇದೂ ಸಹ ಎಸ್ಸೆನ್ ಬಗೆಗಿನ ಅವರೆಲ್ಲರ ಅಭಿಮಾನಕ್ಕೆ, ಅಂತೆಯೇ ಎಸ್ಸೆನ್ ಅವರ ನಿಷ್ಕಳಂಕ ಬದುಕಿಗೆ ಸಾಕ್ಷಿಯಾಗಿದೆ. ಅವರೆಲ್ಲರಿಗೂ ನಮ್ಮ ಕೃತಜ್ಞತೆಗಳು.

ಸಂಪುಟದ ಹೊರಬರಲು ಶ್ರಮಿಸಿದ ಸಂಪಾದಕರಾದ ಪ್ರೊ. ಎಚ್. ಶ್ರೀಶೈಲ ಆರಾಧ್ಯ, ಪ್ರೊ. ಬಿ. ರಾಜಶೇಖರಪ್ಪ ಮತ್ತು ಪ್ರೊ. ಬಿ. ಪಿ. ವೀರೇಂದ್ರ ಕುಮಾರ್ ಇವರುಗಳಿಗೆ ಹಾಗೂ ಈ ಕೆಲಸದ ಆರಂಭದಿಂದ ಈಗಿನವರೆಗೂ ಆಯಾಸವೆನ್ನದೆ ದುಡಿದಿರುವ, ಅಷ್ಟೇ ಅಲ್ಲ, ಮತ್ತೆ ಮುಂದಕ್ಕೂ ಉಳಿದ ಕೆಲಸಗಳನ್ನು ಆಗು ಮಾಡುವಲ್ಲಿ ಶ್ರದ್ಧೆ ತೋರಿರುವ ಶ್ರೀಯುತರಾದ ಎಸ್. ಜಿ. ಮಂಜುನಾಥ್ ಮತ್ತು ಎಸ್. ಷಣ್ಮುಖಪ್ಪ ಇವರಿಗೆ ನಮ್ಮ ವಂದನೆಗಳು.

ಸಂಪುಟವನ್ನು ಸುಂದರವಾಗಿ ಹೊರತಂದಿರುವ ಬೆಂಗಳೂರಿನ ಲಕ್ಷ್ಮಿಮುದ್ರಣಾಲಯದವರಿಗೂ ನಮ್ಮ ಕೃತಜ್ಞತೆಗಳು. ಎಸ್ಸೆನ್ ಅಭಿಮಾನಿಗಳು ರಾಜ್ಯದಲ್ಲಿ ಮಾತ್ರವಲ್ಲ, ದೇಶ ವ್ಯಾಪ್ತಿಯಲ್ಲಿದ್ದಾರೆ. ಇವೆಲ್ಲಾ ಕೆಲಸಗಳಿಗೆ ಪ್ರತ್ಯಕ್ಷ, ಪರೋಕ್ಷ ಸಹಕಾರ ನೀಡಿದ ಎಲ್ಲ ಸಮಸ್ತರಿಗೂ ನಮ್ಮ ನಮಸ್ಕಾರ.

**ಹೆಚ್. ಹನುಮಂತಪ್ಪ**
*ಕಾರ್ಯಾಧ್ಯಕ್ಷರು*
**ಹೆಚ್. ಏಕಾಂತಯ್ಯ**
*ಗೌರವಾಧ್ಯಕ್ಷರು*

**ಚಿತ್ರದುರ್ಗ** — **ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರ**
**ದಿ. ೧೦.೧೨.೨೦೦೨** — **ಜನ್ಮ ಶತಮಾನೋತ್ಸವ ಸಮಿತಿ, ಚಿತ್ರದುರ್ಗ**

# ಈ ಸಂಪುಟ ಕುರಿತು

ಎಸ್ಸೆನ್ ಬದುಕಿದ್ದಿದ್ದರೆ ಈ ಹೊತ್ತಿಗೆ ಶತಮಾನ ಕಾಣುತ್ತಿದ್ದರು. ಇದು ಸಾಧ್ಯವಾಗಿದ್ದರೆ ನಮ್ಮ ರಾಷ್ಟ್ರದಲ್ಲಾಗಲಿ ರಾಜ್ಯದಲ್ಲಾಗಲಿ ಏನಾದರೂ ಬದಲಾವಣೆ, ವ್ಯತ್ಯಾಸ ಕಾಣುತ್ತಿತ್ತೇ? ಈ ಪ್ರಶ್ನೆಗೆ ಉತ್ತರ ಮಾತ್ರ ನಕಾರಾತ್ಮಕವೆನ್ನಬೇಕು. ನಿಜಲಿಂಗಪ್ಪನವರು ಮಾತ್ರವಲ್ಲ, ಯಾವ ಮಹನೀಯರು ತಾನೆ ತಾವು ನಿರೀಕ್ಷಿಸಿದ್ದ, ಕಲ್ಪಿಸಿಕೊಂಡಿದ್ದ ಸಮಾಜವನ್ನು, ಜನತೆಯನ್ನು ಕಾಣಲು ಸಾಧ್ಯವಾಗಿದೆ?

ಎಸ್ಸೆನ್ ನಿಧನರಾಗುವುದಕ್ಕೆ ಎರಡು ದಶಕಗಳ ಮೊದಲೇ ಪಕ್ಷ ರಾಜಕಾರಣವನ್ನು ಕೈಬಿಟ್ಟಿದ್ದರು. ಎಲ್ಲಾ ಪಕ್ಷದವರೂ ಅವರಲ್ಲಿಗೆ ಬರುತ್ತಿದ್ದರು. ಸರಿಯೆನಿಸಿದ್ದನ್ನು ದಾಕ್ಷಿಣ್ಯವಿಲ್ಲದೆ ಅವರು ಹೇಳಿಬಿಡುತ್ತಿದ್ದರು. ಎಲ್ಲಾ ರಾಜಕೀಯ ಸಂಬಂಧಗಳನ್ನು ಬಿಟ್ಟ ಇವರು ಇಷ್ಟೊಂದು ವರ್ಷಗಳು ಪ್ರಶ್ನಾತೀತರಾಗಿ, ಮಾನವೀಯವಾಗಿ ಉಳಿದಿದ್ದರೆನ್ನುವುದು ಸಣ್ಣ ವಿಷಯವಲ್ಲ. ಅವರ ಸ್ಮಾರಕ ನಿರ್ಮಾಣ, ಜನ್ಮ ಶತಮಾನೋತ್ಸವ ಆಚರಣೆ, ಪ್ರಬಂಧ ಸ್ಪರ್ಧೆ, ಗ್ರಂಥ ಪ್ರಕಟಣೆಗಳೇ ಮೊದಲಾದ ಕೆಲಸಗಳು ಜರುಗುತ್ತಿರುವುದು ಈಗಿನ ದಿನಗಳಲ್ಲಿ ಸೋಜಿಗವೆನ್ನಿಸೀತು. ಇದೆಲ್ಲ ನಡೆದಿರುವುದು ಕೇವಲ ಅವರ ಮೇಲಿನ ಗೌರವ ಮತ್ತು ಅಭಿಮಾನಗಳಿಂದ ಮಾತ್ರ.

ಎಸ್ಸೆನ್ ಅವರ ಬಗ್ಗೆ ಈಹಿಂದೆ ಕೆಲವು ಕೃತಿಗಳು ಪ್ರಕಟವಾಗಿವೆ. ಆದರೆ ಅವು ಯಾವುವೂ ದೊರೆಯುತ್ತಿಲ್ಲ. ಸ್ಮರಣ ಸಂಪುಟ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಹೆಚ್. ಹನುಮಂತಪ್ಪನವರು, ಗೌರವಾಧ್ಯಕ್ಷರಾದ ಶ್ರೀ ಹೆಚ್. ಏಕಾಂತಯ್ಯನವರು ಇಂಥದೊಂದು ಕೃತಿ ಆಗಲೇಬೇಕೆಂದು ಪಟ್ಟುಹಿಡಿದು ಅದರ ಸಂಪಾದಕತ್ವದ ಜವಾಬ್ದಾರಿ ನಿರ್ವಹಿಸಬೇಕೆಂದು ಹೇಳಿದಾಗ ನಮಗೆ ಏನೂ ಹೊಳೆಯದಾಯಿತು. ಇರುವ ಕಾಲ ಬಹಳ ಕಡಿಮೆ. ಇದಕ್ಕೂ ಮಿಗಿಲಾಗಿ ಎಸ್ಸೆನ್ ಜೊತೆಯಲ್ಲಿದ್ದವರು ಬಹುತೇಕ ಇಂದಿಲ್ಲ, ಇರುವ ಕೆಲವೇ ಜನ ಇಷ್ಟು ಅವಸರದಲ್ಲಿ ಬರೆದು ಕೊಟ್ಟಾರೆಂಬ ನಂಬಿಕೆ ಸಾಲದಾಯಿತು. ಹಾಗೆ ನೋಡುವಾಗ, ೧೯೭೩ರಲ್ಲಿ ನಿಜಲಿಂಗಪ್ಪನವರ ೭೦ನೇ ಜನ್ಮದಿನೋತ್ಸವದಂದು ದಾವಣಗೆರೆಯಲ್ಲಿ "ಕಣ್ಮಣಿ" ಎಂಬ ಸ್ಮರಣ ಸಂಚಿಕೆಯನ್ನೂ ೧೯೮೩ರಲ್ಲಿ ೮೦ನೇ ಜನ್ಮದಿನೋತ್ಸವದಂದು ಬೆಂಗಳೂರಿನಲ್ಲಿ "ಕರ್ನಾಟಕ ಶಿಲ್ಪಿ" ಎಂಬ ಸ್ಮರಣ ಸಂಚಿಯನ್ನೂ ಹೊರತಂದಿರುವುದು ಗಮನಕ್ಕೆ ಬಂದು ಅವುಗಳನ್ನು

ಹುಡುಕಿದ್ದಾಯಿತು. ಆ ಸಂಚಿಕೆಗಳಲ್ಲಿ ಎಸ್ಸೆನ್ ಅವರನ್ನು ಕುರಿತು ಈ ರಾಜ್ಯದ, ರಾಷ್ಟ್ರದ ಗಣ್ಯ ವ್ಯಕ್ತಿಗಳು ಲೇಖನಗಳನ್ನೂ ಟಿಪ್ಪಣಿಗಳನ್ನೂ ಬರೆದಿರುವುದು ಕಂಡು ಅನರ್ಘ್ಯ ನಿಧಿ ಸಿಕ್ಕಿದಂತಾಯಿತು. ಅವುಗಳಲ್ಲಿಯ ಎಲ್ಲಾ ಬರಹಗಳೂ ಸ್ವಾಗತಾರ್ಹವೆನಿಸಿದರೂ ನಮ್ಮ ದೃಷ್ಟಿಕೋನದ ಇತಿಮಿತಿಯೊಂದಿಗೆ ಕೆಲವನ್ನು ಮಾತ್ರ ಇಲ್ಲಿ ಎತ್ತಿ ಕೊಂಡಿದ್ದೇವೆ.

ಇದಲ್ಲದೆ ಕುವೆಂಪು ವಿಶ್ವವಿದ್ಯಾನಿಲಯ ವ್ಯಾಪ್ತಿಯ ಪದವಿ ಕಾಲೇಜು ವಿದ್ಯಾರ್ಥಿಗಳು ಸ್ಪರ್ಧೆಗೆ ಕಳಿಸಿದ್ದ ಲೇಖನಗಳಲ್ಲಿ ಆರು ಬಹುಮಾನಿತ ಲೇಖನಗಳನ್ನು ಸೇರಿಸಿದ್ದೇವೆ. ಚಿತ್ರದುರ್ಗದ ಬಾನುಲಿಯವರು ಮಾಡಿದ ಎಸ್ಸೆನ್ ಸಂದರ್ಶನ (ಪ್ರಕಟಿತ) ಹಾಗೂ ಅವರ ಇಬ್ಬರು ಒಡನಾಡಿಗಳ ಸಂದರ್ಶನಗಳನ್ನೂ ಸೇರಿಸಿದ್ದೇವೆ. ಇವೆಲ್ಲಾ ಸೇರಿ ಪ್ರಸ್ತುತ "ರಾಷ್ಟ್ರನೇತಾರ" ರೂಪುಗೊಂಡಿದೆ.

ಹಿಂದಿನ ಸ್ಮರಣ ಸಂಚಿಕೆಗಳ ಸಂಪಾದಕರು, ಸಮಿತಿಯ ಪದಾಧಿಕಾರಿಗಳು ಮತ್ತು ಲೇಖಕರಿಗೆ ಹಾಗೂ ಸಂದೇಶ ನೀಡಿದವರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ಆಸಕ್ತಿಯಿಂದ ಸ್ಪರ್ಧೆಯಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳಿಗೆ, ನಮ್ಮ ಶುಭಾಶಯಗಳು. ಇದನ್ನು ವ್ಯವಸ್ಥೆಗೊಳಿಸಿದ ಆಯಾ ಕಾಲೇಜಿನ ಪ್ರಾಂಶುಪಾಲರು, ಅಧ್ಯಾಪಕರುಗಳಿಗೆ ನಮ್ಮ ವಂದನೆಗಳು. ಈ ಪುಸ್ತಕದ ಕೆಲಸ, ಮಹಾತ್ಮಾಜಿಯಂಥವರ ಗಂಧ ಗಾಳಿಯಿಂದ ರೂಪುಗೊಂಡ ಮಹಾ ವ್ಯಕ್ತಿತ್ವದ ಚಿರಸ್ಮರಣೆಗಾಗಿ ಒಂದು ಪುಟ್ಟ ಸೇವೆ ಮಾಡಿದಂತಹ ತೃಪ್ತಿಯನ್ನು ನಮಗೆ ತಂದಿದೆ. ಸಮಿತಿಯವರು ಈ ಕೆಲಸವನ್ನು ನಮಗೆ ವಹಿಸಿರುವುದು ನಮಗೆ ತುಂಬ ಸಂತೋಷವನ್ನು ತಂದಿದೆ.

ಎಸ್ಸೆನ್ ಅಂಥವರ ಬದುಕು ಇಂದಿನ ಮತ್ತು ಮುಂದಿನ ಪೀಳಿಗೆಗೆ ಸ್ಫೂರ್ತಿಯಾಗಬೇಕೆಂಬ ಸದಾಶಯದಿಂದ ಇದರ ಪ್ರಕಟಣೆಯ ಕೆಲಸವನ್ನು ಕೈಗೆತ್ತಿಕೊಂಡು ಶ್ರಮಿಸಿದ ಸಮಿತಿಯವರು ಮತ್ತು ಇದಕ್ಕೆ ತುಂಬು ಸಹಕಾರ ನೀಡಿದ ಎಲ್ಲ ಹಿತೈಷಿಗಳು ನಮ್ಮ ಜನತೆಯ ಅಭಿನಂದನೆಗೆ ಪಾತ್ರರು ಎಂದರೆ ಅತಿಶಯೋಕ್ತಿಯಲ್ಲ.

ಇದಕ್ಕೆ ಅಗತ್ಯವೆನಿಸಿದ ಛಾಯಾಚಿತ್ರಗಳನ್ನು ನೀಡಿದವರು, ರಕ್ಷಾ ಕವಚದ ವಿನ್ಯಾಸವನ್ನು ಸಿದ್ಧಪಡಿಸಿದವರು, ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟವರು, ಇವರೆಲ್ಲರಿಗೂ ನಮ್ಮ ವಂದನೆಗಳು.

ಪ್ರೊ. ಎಚ್. ಶ್ರೀಶೈಲ ಆರಾಧ್ಯ
ಚಿತ್ರದುರ್ಗ
ಪ್ರೊ. ಬಿ. ರಾಜಶೇಖರಪ್ಪ
ದಿ. ೧೦.೧೨.೨೦೦೨
ಪ್ರೊ. ಬಿ. ಪಿ. ವೀರೇಂದ್ರ ಕುಮಾರ್

# ಎಸ್ಸೆನ್ ಅವರ ಬದುಕಿನ ಮೈಲುಗಲ್ಲುಗಳು

ಸಂಗ್ರಹ : **ನಿ. ರಾಜಶೇಖರ್**

| | | |
|---|---|---|
| ೧೦.೧೨.೧೯೦೨ | : | ಜನನ - ಹರಪನಹಳ್ಳಿ ತಾಲ್ಲೂಕಿನ ಹಲವಾಗಲು ಗ್ರಾಮ |
| ೧೯೧೯ | : | ಪ್ರಥಮ ಬಾರಿಗೆ ಗಾಂಧೀಜಿಯವರ ಭೇಟಿ |
| ೧೯೨೪ | : | ಬಿ. ಎ. ಪದವೀಧರ |
| ೧೯೨೬ | : | ಚಿತ್ರದುರ್ಗದಲ್ಲಿ ವಕೀಲಿವೃತ್ತಿ ಪ್ರಾರಂಭ |
| ೨೫.೫.೧೯೨೭ | : | ದಾವಣಗೆರೆಯ ಬೆಳ್ಳೂಡಿ ಮನೆತನದ ಮುರಿಗೆಮ್ಮನವರೊಂದಿಗೆ ವಿವಾಹ |
| ೧೯೨೮ | : | ಪ್ರಥಮ ಪುತ್ರಿ ಪಾರ್ವತಮ್ಮನವರ ಜನನ |
| ೧೯೩೬ | : | ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ಸಿನ ಉಪಾಧ್ಯಕ್ಷ |
| ೧೮.೯.೧೯೩೯ | : | ತುರುವನೂರಿನಲ್ಲಿ ''ಈಚಲುವನ ಸತ್ಯಾಗ್ರಹ'' ಮತ್ತು ಜೈಲುವಾಸ |
| ೧೯೪೦ | : | ಬ್ರಿಟಿಷ್ ಸರ್ಕಾರದಿಂದ ವಕೀಲಿ ಸನ್ನದು ರದ್ದು |
| ೯.೮.೧೯೪೨ | : | ''ಭಾರತ ಬಿಟ್ಟು ತೊಲಗಿ'' ಆಂದೋಲನದಲ್ಲಿ ಭಾಗವಹಿಸಿದಾಗ ಬಂಧನ |
| ೧೯೪೪ | : | ಮೈಸೂರು ಕಾಂಗ್ರೆಸ್ ಅಧ್ಯಕ್ಷ |
| ೧೯೪೬ | : | ಕಾನ್ಸಿಟ್ಯೂಟ್ ಅಸೆಂಬ್ಲಿ ಸದಸ್ಯ |
| ೧೯೪೬-೧೯೫೪ | : | ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷ |
| ೧೯೫೨-೧೯೫೬ | : | ಚಿತ್ರದುರ್ಗ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆ |
| ೧.೧೧.೧೯೫೬ | : | ವಿಶಾಲ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿ |
| ೧೯೫೭ | : | ಚುನಾವಣೆಯಲ್ಲಿ ಗೆದ್ದು, ಮುಖ್ಯಮಂತ್ರಿಯಾಗಿ ಮುಂದುವರಿಕೆ |
| ೧೫.೧೧.೧೯೫೯ | : | ಇಂಡಿಯನ್ ಆಯಿಲ್ ಕಾರ್ಪೊರೇಶನ್ ಅಧ್ಯಕ್ಷ |
| ೧೯೬೨ | : | ಹೊಸದುರ್ಗ ಚುನಾವಣೆಯಲ್ಲಿ ಸೋಲು ಮತ್ತು ಬಾಗಲಕೋಟೆಯಿಂದ ವಿಧಾನಸಭೆಗೆ ಆಯ್ಕೆ ಮುಖ್ಯಮಂತ್ರಿಯಾಗಿ ಮುಂದುವರಿಕೆ |
| ೧೯೬೭ | : | ಅವಿರೋಧವಾಗಿ ಶಿಗ್ಗಾಂವ್ ಕ್ಷೇತ್ರದಿಂದ ಆಯ್ಕೆ, ಮತ್ತೊಂದು ಬಾರಿ ಮುಖ್ಯಮಂತ್ರಿಯಾಗಿ ಮುಂದುವರಿಕೆ |

| | | |
|---|---|---|
| ೧೨.೩.೧೯೬೭ | : | ರಕ್ಷಣಾ ನಿಧಿಗೋಸ್ಕರ (ಚೀಣಾ ಯುದ್ಧ) ಬಿಜಾಪುರದಲ್ಲಿ ಬಂಗಾರದ ತುಲಾಭಾರ |
| ೭.೧೨.೧೯೬೭ | : | ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷ(ಕರ್ನಾಟಕದಿಂದ ಪ್ರಥಮ ಬಾರಿಗೆ ಆದವರು) |
| ೨೩.೭.೧೯೬೮ | : | ಜಪಾನ್ ಪ್ರವಾಸ |
| ೧೨.೫.೧೯೬೯ | : | ಯುರೋಪ್ ಪ್ರವಾಸ |
| ಜುಲೈ ೧೯೬೯ | : | ಬೆಂಗಳೂರಿನಲ್ಲಿ ಐತಿಹಾಸಿಕ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ |
| ಡಿಸೆಂಬರ್ ೧೯೬೯ | : | ಅಖಿಲ ಭಾರತ ಕಾಂಗ್ರೆಸ್ ಪಕ್ಷ ವಿಭಜನೆ |
| ೧೯೭೧ | : | ಅ.ಭಾ. ಕಾಂಗ್ರೆಸ್ (ಸಂಸ್ಥಾ) ವಿಧ್ಯುಕ್ತ ಸ್ಥಾಪನೆ |
| ೬.೩.೧೯೮೫ | : | ಜನತಾ ಪಕ್ಷದಿಂದ ಹೊರಕ್ಕೆ ಹಾಗೂ ರಾಜೀನಾಮೆ |
| ೧೦.೧೦.೧೯೮೮ | : | ಪತ್ನಿ ಮುರಿಗೆಮ್ಮ ಅವರ ದೇಹಾಂತ್ಯ |
| ೧೯೯೦ | : | ಸರ್ದಾರ ವಲ್ಲಭಭಾಯಿ ಪಟೇಲ್ ಸಂಸ್ಥೆಯ ಅಧ್ಯಕ್ಷ |
| ೨.೧೦.೧೯೯೯ | : | ''ಕರ್ನಾಟಕ ರತ್ನ'' ಪ್ರಶಸ್ತಿ |
| ೨೦.೬.೨೦೦೦ | : | ಕಾಲು ಮುರಿತದಿಂದಾಗಿ ಚಿಕಿತ್ಸೆಗೆ ಬೌರಿಂಗ್ ಆಸ್ಪತ್ರೆಗೆ ದಾಖಲು |
| ೨೫.೭.೨೦೦೦ | : | ಆಸ್ಪತ್ರೆಯಿಂದ ಚಿತ್ರದುರ್ಗದ ಮನೆಗೆ |
| ೮.೮. ೨೦೦೦ | : | ದೇಹಾಂತ್ಯ |



ಎಸ್. ನಿಜಲಿಂಗಪ್ಪನವರು

ಜನನ : ೧೦-೧೨-೧೯೦೨ ನಿಧನ : ೮-೮-೨೦೦೦



ಎಸ್ಸೆನ್ ಅವರ ತಾಯಿ ನೀಲಮ್ಮನವರು



ಎಸ್ಸೆನ್ ಅವರು ಚಿತ್ರದುರ್ಗದಲ್ಲಿ
ವಕೀಲಿ ವೃತ್ತಿಯಲ್ಲಿದ್ದಾಗ



ಎಸ್ಸೆನ್ ದಂಪತಿಗಳು ಮದುವೆಯಾದ ಹೊಸದರಲ್ಲಿ



ಎಸ್ಸೆನ್ ದಂಪತಿಗಳು ಕೆಲವು ದಶಕಗಳ ನಂತರದಲ್ಲಿ



ಜವಾಹರಲಾಲ್ ನೆಹರೂ, ವಿ. ಎಸ್. ಕೃಷ್ಣ ಅಯ್ಯರ್ ಜೊತೆಗೆ



ಜಯಚಾಮರಾಜ ಒಡೆಯರ್, ಬಾಬು ರಾಜೇಂದ್ರ ಪ್ರಸಾದ್ ಸಂಗಡ



ಸರ್. ಎಂ. ವಿಶ್ವೇಶ್ವರಯ್ಯ, ಸರ್ ಸಿ. ವಿ. ರಾಮನ್ ದಂಪತಿಗಳೊಂದಿಗೆ




ಎಸ್. ರಾಧಾಕೃಷ್ಣನ್, ಜಯಚಾಮರಾಜ ಒಡೆಯರ್ ಜೊತೆ ಒಂದು ಕಾರ್ಯಕ್ರಮದಲ್ಲಿ



ವೈ. ಬಿ. ಚವಾಣ್, ವಿ. ಪಿ. ನಾಯಕ್, ಲಾಲ್ ಬಹಾದುರ್ ಶಾಸ್ತ್ರಿ, ಕಾಮರಾಜ್ ನಾಡಾರ್
ಗುಲ್ಜಾರಿಲಾಲ್ ನಂದಾ ಅವರೊಟ್ಟಿಗೆ



ವಿನೋಬಾ ಭಾವೆ ಅವರ ಜೊತೆಗೆ ಸಮಾಲೋಚನೆಯಲ್ಲಿ



ಚಿತ್ರದುರ್ಗ ಬೃಹನ್ಮಠದ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು, ದಾವಣಗೆರೆಯ ಚಿಗಟೇರಿ ವೀರಭದ್ರಪ್ಪ ಅವರೊಂದಿಗೆ



ಉಡುಪಿಯ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಜೊತೆಗೆ




ಮೊರಾರ್ಜಿ ದೇಸಾಯಿ ಅವರೊಂದಿಗೆ ಒಂದು ಕಾರ್ಯಕ್ರಮದಲ್ಲಿ



ಬಿ. ಡಿ. ಜತ್ತಿ ಅವರೊಂದಿಗೆ ಮಾತುಕತೆಯಲ್ಲಿ



ಆರ್. ಎಂ. ಪಾಟೀಲ್, ಗುಬ್ಬಿವೀರಣ್ಣ ಮತ್ತು ಇತರರೊಂದಿಗೆ



ಜಪಾನ್ ಪ್ರವಾಸದಲ್ಲಿ ಜಪಾನಿ ಶಾಲಾಬಾಲಕಿಯರೊಂದಿಗೆ



ಇಂದಿರಾಗಾಂಧಿ ಅವರೊಂದಿಗೆ



ನಿಟ್ಟೂರು ಶ್ರೀನಿವಾಸರಾವ್, ಸಿ. ಸುಬ್ರಮಣ್ಯಂ ಅವರೊಂದಿಗೆ



ಕವಿ ಪು.ತಿ.ನರಸಿಂಹಾಚಾರ್ ಜೊತೆಗೆ ಒಂದು ರಸಸಂಭಾಷಣೆಯಲ್ಲಿ



ಎಸ್. ಆರ್. ಕಂಠಿ, ಕಡಿದಾಳ್ ಮಂಜಪ್ಪ ಅವರೊಂದಿಗೆ



ವೀರೇಂದ್ರ ಪಾಟೀಲರಿಗೆ ಅಧಿಕಾರ ಹಸ್ತಾಂತರಿಸುತ್ತಿರುವ ಸ್ಮರಣೀಯ ಸಂದರ್ಭದಲ್ಲಿ



ರಾಮಕೃಷ್ಣ ಹೆಗಡೆ ಅವರೊಂದಿಗೆ



ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ 'ನಾಡೋಜ' ಪ್ರಶಸ್ತಿ ಸ್ವೀಕರಿಸಿದ ಸಂದರ್ಭದಲ್ಲಿ
ಚಂದ್ರಶೇಖರ ಕಂಬಾರ, ಜಿ. ಎಸ್. ಶಿವರುದ್ರಪ್ಪ, ಎಚ್. ಡಿ. ದೇವೇಗೌಡ, ಡಿ. ಮಂಜುನಾಥ್ ಅವರೊಂದಿಗೆ



ಜೆ. ಎಚ್. ಪಟೇಲ್ ಅವರೊಂದಿಗೆ



ಅಟಲ್ ಬಿಹಾರಿ ವಾಜಪೇಯಿ ಅವರೊಂದಿಗೆ ಗಾಢ ಸಂಭಾಷಣೆಯಲ್ಲಿ



ಸೋನಿಯಾ ಗಾಂಧಿ ಅವರೊಂದಿಗೆ ಕುಶಲ ಸಂಭಾಷಣೆಯಲ್ಲಿ



ಹೆಚ್. ಏಕಾಂತಯ್ಯ, ಕೆ. ಶಿವರಾಮಕಾರಂತ, ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು, ಡಾ. ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು, ಎಸ್. ಎಂ.ಕೃಷ್ಣ ಎಂ. ಪಿ. ಪ್ರಕಾಶ್ ಅವರೊಂದಿಗೆ



ಶಾಮನೂರು ಶಿವಶಂಕರಪ್ಪ, ಹೆಚ್. ಹನುಮಂತಪ್ಪ, ಸಿ. ಕೆ. ಜಾಫರ್ ಶರೀಫ್, ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮಿಗಳು, ಡಾ. ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು, ಎಸ್. ಎಂ. ಕೃಷ್ಣ ಅವರೊಂದಿಗೆ

# ಅಂತರಂಗ

## ಬಹುಮಾನಿತ ಲೇಖನಗಳು

## ವಿಷಯ : ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು

# ಕರ್ನಾಟಕ ಶಿಲ್ಪಿ

**ಕುವೆಂಪು**

**ವಂದನೆಗಳು**

ನೀವು ೧೬.೧೧.೯೮೮೧ರಂದು ಬರೆದ ಪತ್ರ ತಲುಪಿದೆ. ಶ್ರೀ ನಿಜಲಿಂಗಪ್ಪನವರನ್ನು ಕುರಿತ ನನ್ನ ಕೆಲವು ಅನಿಸಿಕೆಗಳನ್ನು ಈ ಮುಂದಿನ ಪಂಕ್ತಿಗಳನ್ನು ಕಾಣಿಸಿದ್ದೇನೆ. ಅವನ್ನು ನೀವು ಸ್ಮರಣ ಸಂಚಿಕೆಗೆ ಬಳಸಿಕೊಳ್ಳಬಹುದೆಂದು ವಿನಂತಿಸಿಕೊಳ್ಳುತ್ತೇನೆ.

ಶ್ರೀಮಾನ್ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರನ್ನು ನೆನೆದಾಗ ಏಕೀಕೃತ ಕರ್ನಾಟಕವೂ, ಕರ್ನಾಟಕವನ್ನು ನೆನೆದಾಗ ನಿಜಲಿಂಗಪ್ಪನವರೂ ನೆನಪಿಗೆ ಬಂದರೆ ಆಶ್ಚರ್ಯವಿಲ್ಲ. ಕರ್ನಾಟಕ ಏಕೀಕರಣವನ್ನು ಸಾಧಿಸಿ, ಸಾವಿರಾರು ವರ್ಷಗಳ ಕನ್ನಡಿಗರ ಅಭೀಪ್ಸೆಯನ್ನು ಪೂರೈಸಿದವರಲ್ಲಿ ನಿಜಲಿಂಗಪ್ಪನವರು ಅಗ್ರಗಣ್ಯರು. 'ಕರ್ನಾಟಕ ಶಿಲ್ಪಿ' ಎಂಬ ಪ್ರಶಸ್ತಿ ಅವರಿಗೆ ಸಮುಚಿತವಾಗಿ ಸಲ್ಲುತ್ತದೆ.

ಅವರು ರಾಜಕಾರಣಿಯಾಗಿಯೂ ಸತ್ಯಸಂಧರು, ತತ್ತ್ವನಿಷ್ಠರು, ಮುಖ್ಯಮಂತ್ರಿಯಾಗಿಯೂ ದರ್ಪಾಹಂಕಾರ ವರ್ಜಿತರು ಹಾಗೂ ಸರಳ ಜೀವಿಗಳು, ಕಾಂಗ್ರೆಸ್ ಅಧ್ಯಕ್ಷರಾಗಿ ರಾಷ್ಟ್ರಮಟ್ಟದ ನಾಯಕರಾಗಿಯೂ ಅಧಿಕಾರ ಲಾಲಸೆಯಿಂದ ಅನ್ಯಾಯಕ್ಕೆ ಮಣಿದವರಲ್ಲ. ಬಸವೇಶ್ವರ, ಮಹಾತ್ಮ ಗಾಂಧೀಜಿಯವರ ತತ್ತ್ವವನ್ನು ಅರಗಿಸಿಕೊಂಡು, ಅದರ ಬೆಳಕಿನಲ್ಲಿ ಬದುಕನ್ನು ನೇರ್ಪಡಿಸಿಕೊಂಡು, ಆತ್ಮಗೌರವವನ್ನು ಬಿಟ್ಟು ಕೊಡದೆ, ಹಸನಾಗಿ ಸಮಾಧಾನ ದಿಂದ ಬಾಳಿದವರು. ಆ ಹಸನು ಸಮಾಧಾನಗಳು ಅವರ ನಡೆನುಡಿಗಳಲ್ಲಿ, ಅವರ ನಿಷ್ಕಪಟಮುಗ್ಧ ಮಂದಹಾಸದಲ್ಲಿ ಪ್ರತಿಬಿಂಬಿಸುತ್ತವೆ.

ಮುಂದೆ ಭಾರತೀಯ ಅಥವಾ ಕನ್ನಡನಾಡಿನ ಇತಿಹಾಸವನ್ನು ರಚಿಸುವವರು ನಿಜಲಿಂಗಪ್ಪನವರನ್ನು ಮರೆಯಲಾರರು. ಅವರು ಶತಾಯುಷಿಯಾಗಿ ಬಾಳಲೆಂದೂ, ಇನ್ನೂ ಹೆಚ್ಚಿನ ರಾಷ್ಟ್ರ ಸೇವೆಗೆ ಅವರ ಬಾಳು ಮುಡಿಪಾಗಿರಲೆಂದೂ, ಮುಂದಿನ ಪೀಳಿಗೆಗೆ ಅವರು ಧ್ರುವತಾರೆಯಾಗಲೆಂದೂ ಹಾರೈಸುತ್ತೇನೆ. ಆ ಹಾರೈಕೆ ಸಫಲವಾಗುವಂತೆ ಭಗವಂತನನ್ನು ಪ್ರಾರ್ಥಿಸುತ್ತೇನೆ.



# ಅಜಾತ ಶತ್ರು

ಬಾ. ರಾಘವೇಂದ್ರ
(ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮೀಜಿ)

ರಾಷ್ಟ್ರದಾದ್ಯಂತ ಸ್ವಾತಂತ್ರ ಹೋರಾಟದ ಕಾಡ್ಗಿಚ್ಚು ಭುಗಿಲೆದ್ದು ಉರಿಯುತ್ತಿತ್ತು. ಕಾಂಗ್ರೆಸ್ ತತ್ತ್ವ ಪ್ರಚಾರ, ಜನಜಾಗ್ರತೆ, ಸಂಘಟನೆಗಾಗಿ ರಾಷ್ಟ್ರಮಟ್ಟದ ಜನನಾಯಕರು ಹಗಲಿರುಳೆನ್ನದೆ ದುಡಿಯುತ್ತಿದ್ದರು. ಈ ಕಾರ್ಯದಲ್ಲಿ ಕರ್ನಾಟಕವೂ ಹಿಂದುಳಿದಿರಲಿಲ್ಲ. ೧೯೪೧ನೆಯ ಇಸವಿ ಎಂದು ನೆನಪು. ಕೆ. ಟಿ. ಭಾಷ್ಯಂ, ಟಿ. ಸಿದ್ದಲಿಂಗಯ್ಯ, ಟಿ. ಸುಬ್ರಹ್ಮಣ್ಯ, ಪಟ್ಟಾಭಿರಾಮನ್, ಎಚ್. ಸಿ. ದಾಸಪ್ಪನವರೇ ಮೊದಲಾದ ಕರ್ನಾಟಕದ ಗಣ್ಯವ್ಯಕ್ತಿಗಳು ಚಿತ್ರದುರ್ಗಕ್ಕೆ ಬರುವವರಿದ್ದರು. ದಿವಂಗತ ಕೊಟ್ರೆ ನಂಜಪ್ಪನವರು ಚಿತ್ರದುರ್ಗದ ಗಣ್ಯ ಕಾಂಗ್ರೆಸ್ ನಾಯಕರ ಆದೇಶದಂತೆ ದೊಗ್ಗನಾಳಿನ ನನ್ನ ಶಿಕ್ಷಣ ಶಿಬಿರದಲ್ಲಿ ತರಬೇತಿ ಪಡೆದ ಇಪ್ಪತ್ತನಾಲ್ಕು ಹೆಣ್ಣು ಮಕ್ಕಳೊಡನೆ ನನ್ನನ್ನೂ ಅಲ್ಲಿಗೆ ಕರೆದೊಯ್ದಿದ್ದರು. ಸಂಜೆಯ ಭಾಷಣಕ್ಕೆ ಮೊದಲು ಮಕ್ಕಳ ವ್ಯಾಯಾಮ ಮತ್ತು ನನ್ನ ಯೋಗ ಪ್ರದರ್ಶನವಿತ್ತು. ಜನ ಕಿಕ್ಕಿರಿದು ಸೇರಿದ್ದರು. ನಂತರ ಮುಖಂಡರುಗಳ ಭಾಷಣ ಅಮೋಘವಾಗಿ ನೆರವೇರಿತು. ಅಂದೇ ನನಗೆ ಶ್ರೀ ನಿಜಲಿಂಗಪ್ಪನವರ ಪರಿಚಯ. ಆಗವರು ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿದ್ದರೆಂದು ನೆನಪು. ರಾತ್ರೆ ನಮಗೆಲ್ಲಾ ಅವರ ಮನೆಯಲ್ಲೇ ಊಟ ವಸತಿ; ಅಂದು ನನಗವರು ಹಾಲುಣಿಸಿದ್ದಾರೆ.

ಅಂದಿನಿಂದ ಅನೇಕ ಬಾರಿ ನಾನು ನಿಜಲಿಂಗಪ್ಪನವರನ್ನು ಸಂಧಿಸಿದ್ದೇನೆ. ನಾವು ಕೂಡಿ ಮಾತನಾಡಿದ್ದೇವೆ; ಸಭೆ ಸಮಾರಂಭಗಳಲ್ಲಿ ಭಾಗವಹಿಸಿದ್ದೇವೆ; ಹೋರಾಟ ನಡೆಯಿಸಿದ್ದೇವೆ. ಆದರೆ ನಾನು ಮಲ್ಲಾಡಿಹಳ್ಳಿಯಲ್ಲಿ ಈ ಅನಾಥ ಸೇವಾಶ್ರಮವನ್ನು ಸ್ಥಾಪನೆ ಮಾಡಿದ ನಂತರ ನನ್ನ ಕಾರ್ಯರಂಗ ಬದಲಾಗಿ ನಾನು ರಚನಾತ್ಮಕ ಕಾರ್ಯಕ್ಕೆ ತೊಡಗಿದೆ; ಉಳಿದವರ ಹೋರಾಟ ರಾಜಕೀಯ ಕ್ಷೇತ್ರದಲ್ಲಿ ಮುಂದುವರಿಯಿತು, ಆದರೂ ಸ್ವಾತಂತ್ರ್ಯ ಪೂರ್ವದವರೆಗೆ ಎಷ್ಟೋ

ವೇಳೆ ಅನೇಕ ಜನನಾಯಕರು ಸರಕಾರದಿಂದ ತಲೆ ಮರೆಸಿಕೊಂಡು ಗುಪ್ತವಾಗಿ ಆಶ್ರಮಕ್ಕೆ ಬಂದು ಹತ್ತೆಂಟು ದಿನ ಇರುತ್ತಿದ್ದುದುಂಟು ; ಆದರೆ ಇದರ ಸುಳಿವು ಕೂಡ ಸರಕಾರಕ್ಕೇ ಯಾಕೆ, ಯಾವೊಂದು ವ್ಯಕ್ತಿಗೂ ಸಿಗದಂತೆ ನಾನು ನೋಡಿಕೊಳ್ಳುತ್ತಿದೆ. ಸ್ವಾತಂತ್ರ್ಯಾನಂತರ ನಾನು ರಾಜಕೀಯ ಸಲ್ಲದೆಂದು ಅದರಿಂದ ದೂರವಾಗಿ ಕೇವಲ ರಚನಾತ್ಮಕ ಕಾರ್ಯದಲ್ಲೇ ತೊಡಗಿದೆ.. ಅಷ್ಟೇ ಅಲ್ಲದೆ ಆಶ್ರಮದ ಮಹಾದ್ವಾರದಲ್ಲೇ 'ರಾಜಕೀಯಕ್ಕೆ ಪ್ರವೇಶವಿಲ್ಲ' ಎಂಬ ದೊಡ್ಡ ಫಲಕವನ್ನಿರಿಸಿ ಅದರಿಂದ ಸಂಪೂರ್ಣ ನಿವೃತ್ತನಾದೆ. ಈಗ ದಿನವೂ ರಾಷ್ಟ್ರಮಟ್ಟದಿಂದ ಹಿಡಿದು ರಾಜ್ಯ ಮಟ್ಟದವರೆಗೆ ವಿವಿಧ ರಾಜಕೀಯ ಗುಂಪುಗಳಿಗೆ ಸೇರಿದ ಜನನಾಯಕರು ಇಲ್ಲಿಗೆ ಸಂದರ್ಶನವೀಯುತ್ತಿದ್ದಾರೆ. ಆಶ್ರಮದ ಕಾರ್ಯಕ್ರಮಗಳಲ್ಲಿ ಭಾಗ ವಹಿಸುತ್ತಿದ್ದಾರೆ; ಉಟೋಪಚಾರ ಮಾಡುತ್ತಿದ್ದಾರೆ-ಆದರೆ ರಾಜಕೀಯದ ಹೊಲಸು ಕಂತೆಯನ್ನ್ಯಾರೂ ಬಿಚ್ಚಿಲ್ಲ- ಮಾತನಾಡಲಿಲ್ಲ. ಆಶ್ರಮ ಆಶ್ರಮ ವಾಗಿಯೇ ಉಳಿದುಕೊಂಡು ಬಂದಿದೆ: ನಾನು ನಾನಾಗಿಯೇ ನಿಂತಿದ್ದೇನೆ. ಈ ನನ್ನ ರೀತಿಯನ್ನು ಕಂಡು ಸಂತಸಪಟ್ಟವರಲ್ಲಿ ಶ್ರೀ ನಿಜಲಿಂಗಪ್ಪನವರೂ ಒಬ್ಬರು. ಹಲವು ಬಾರಿ ಅವರು ಸ್ವಾಮಿಜಿ-ನಿಮ್ಮ ಆಚರಣೆ ನಿಜವಾಗಿಯೂ ನನಗೆ ತೀರ ಸಂತೋಷವೆನಿಸಿದೆ; ನಮ್ಮಲ್ಲಿಯ ಮಠಾಧೀಶರೆಲ್ಲ ರಾಜಕೀಯದಿಂದ ನಿಮ್ಮಂತೆಯೇ ದೂರ ಸರಿದು ಮಠಗಳನ್ನು ಮಠಗಳ ನ್ನಾಗಿರಿಸಿಕೊಂಡಿದ್ದರೆ ರಾಷ್ಟ್ರಕ್ಕೆ ಮಹದುಪಕಾರ ವಾಗುತ್ತಿತ್ತು. ಎಂದು ಉದ್ಗರಿಸಿದ್ದಾರೆ. ಅಂದರೆ ಅವರಿಗೆ ಮಠಾಧೀಶರಲ್ಲಿ ದ್ವೇಷ ಅಥವಾ ಅಗೌರವವೆಂದೇನೂ ಅರ್ಥವಲ್ಲ.... ಮಠದ ಪವಿತ್ರ ವಾತಾವರಣದಲ್ಲಿ ರಾಜಕೀಯದ ಹೊಲಸು ಬೇಡ ಎಂದು ಅವರ ಅಭಿಪ್ರಾಯ ಅಷ್ಟೇ.... ಆದುದರಿಂದಲೇ ಹಲವು ಕಡೆಗಳಲ್ಲಿ ಹಲವು ಬಾರಿ ಅವರು ಸ್ವಾಮಿಗಳೆಂದರೆ ಮಲ್ಲಾಡಿಹಳ್ಳಿಯ ಸ್ವಾಮಿಗಳಂತಿರಬೇಕು; ನನಗೆ ಅವರಲ್ಲಿ ತುಂಬಾ ಗೌರವ ಎಂದು ಹೃದಯ ತುಂಬಿ ಹೇಳಿದುದುಂಟು; ಸಾಲದೇ?

ಶ್ರೀ ನಿಜಲಿಂಗಪ್ಪನವರು ಚಿತ್ರದುರ್ಗದಲ್ಲಿ ನೆಲೆ ನಿಂತಿರುವರಾದರೂ ಕೇವಲ ಅವರು ಚಿತ್ರದುರ್ಗಕ್ಕಷ್ಟೇ ಸೀಮಿತ ವಾದವರಲ್ಲ. ಅವರು ಕರ್ನಾಟಕದ ಗಡಿಯನ್ನು ದಾಟಿ ರಾಷ್ಟ್ರಮಟ್ಟಕ್ಕೆ ಏರಿದ ಮಹದ್ವ್ಯಕ್ತಿ. ಕರ್ನಾಟಕದ ಏಕೀಕರಣಕ್ಕಾಗಿ ಅವರು ಸಲ್ಲಿಸಿದ ಸೇವೆ ಅಪಾರ.... ಅವಿಸ್ಮರಣೀಯ. ಛಿದ್ರ ವಿಚ್ಛಿದ್ರವಾಗಿ ಹರಿದು ಹಂಚಿಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸಲು ಹೆಣಗಿದ ಮಹಾಶಿಲ್ಪಿ. ಇದರಿಂದ ಅವರಿಗೆ ಬಂದ ಭಾಗ್ಯ? ಕಷ್ಟಪಟ್ಟು ಸೇವೆ ಸಲ್ಲಿಸಿದವರೊಬ್ಬರು : ಸುಖ ಪಡುವವರು ಹಲವರು. ಇದು ನಿಯತಿಯ ನಿಯಮ. ಆದರೆ ಶ್ರೀ ನಿಜಲಿಂಗಪ್ಪನವರ ಕೀರ್ತಿ ಮಾತ್ರ ಕುಂದಣದಲ್ಲಿ ಕಟ್ಟಿದ ವಜ್ರದಂತೆ ದೇದೀಪ್ಯಮಾನ... ಪ್ರಜ್ವಲಿತ..... ಇದನ್ನು ಸರಳವಾಗಿ, ಸಹಜವಾಗಿ, ಕವಿಯ ವರ್ಣನೆ ಇಲ್ಲದೆ ಹೇಳುವುದಾದರೆ 'ನಿಜಲಿಂಗಪ್ಪನವರು ನಿಜಲಿಂಗಪ್ಪನವರೇ-ಅವರು ಅಜಾತ ಶತ್ರು. ದ್ವೇಷ, ಅಸೂಯೆ, ಸಣ್ಣತನ, ಕೀಳು ಮನೋಭಾವ-ಹುಡುಕಿದರೂ ಅವರ ಹೃದಯದಲ್ಲಿ ಕಾಣುವುದು ದುರ್ಲಭ. ಅವರಿಂದಲೇ ಉಪಯೋಗ ಪಡೆದು, ಅವರಿಂದಲೇ ಪ್ರವೃದ್ಧ ಮಾನಕ್ಕೆ ಬಂದ ಎಷ್ಟೋ ವ್ಯಕ್ತಿಗಳು ಅವರನ್ನೇ ವಂಚಿಸಿ ದೂರ ತಳ್ಳಿದ್ದಾರೆ: ಎಷ್ಟೋ ಜನರು ಅವರನ್ನು ಅಧಿಕಾರ ಚ್ಯುತರನ್ನಾಗಿಸಲು ಹೆಣಗಿ ಕೃತಕೃತ್ಯರಾಗಿದ್ದಾರೆ; ದೂಷಿಸಿದ್ದಾರೆ, ತೆಗಳಿದ್ದಾರೆ ಬಂಡಾಯ ವೆದ್ದಿದ್ದಾರೆ; ಆದರೆ ಈ ಯಾರ ವಿಷಯದಲ್ಲೂ ಅವರು ಪ್ರತೀಕಾರ

ಮಾಡಿಲ್ಲ. ಕೊನೆಗೊಂದು ಕೆಟ್ಟ ಮಾತನ್ನೂ ಆಡಿಲ್ಲ: ಆದುದರಿಂದಲೇ- ನಾನೆಂದೆ, ಅವರು ಅಜಾತ ಶತ್ರುಗಳೆಂದು. ಅವರದು ಚಿಕ್ಕ ಮಗುವಿನ ಸ್ವಭಾವ : ಹುಸಿನಗೆಯಲ್ಲೇ ಎಲ್ಲವನ್ನೂ ತೇಲಿ ಬಿಡುತ್ತಿದ್ದರು; ಇತ್ತೀಚೆಗೆ ಆಶ್ರಮದ ಯೋಗ ಶಿಕ್ಷಣ ಶಿಬಿರದ ಬೆಳ್ಳಿಹಬ್ಬದಲ್ಲಿ ಪಾಲ್ಗೊಳ್ಳಲು ಬಂದ ಅವರು ವಿಶ್ವಯೋಗ ಮಂದಿರ ಕಟ್ಟಡದ ಮುಂದೆ ನಿಂತು "ಸ್ವಾಮೀಜಿ ಈಗ ನನಗೆ ೭೯ ವರ್ಷ. ಆದರೆ ಇದನ್ನು ನೋಡಿ ಕುಣಿಯಬೇಕೆಂದೆನಿಸಿದೆ" ಎಂದರು: ಎಂತಹ ಅಭಿಮಾನ! ತನ್ನ ಆತ್ಮೀಯರೊಬ್ಬರು ಇಷ್ಟೆಲ್ಲಾ ಸಾಧಿಸಿದರಲ್ಲಾ! ಎಂಬ ಹೆಮ್ಮೆ. ಇದು ಅವರ ದೊಡ್ಡತನ. ಆದರೆ ಇಲ್ಲಿಯ ಕೆಲಸವನ್ನು ಕಂಡು ಕರುಬುವವರೂ ಇದ್ದಾರೆಂದರೆ ಅದರಲ್ಲೇನೂ ಆಶ್ಚರ್ಯವಿಲ್ಲ.

ಮೊದಲೇ ನಾನೆಂದಂತೆ ಶ್ರೀ ನಿಜಲಿಂಗಪ್ಪನವರಿಗೂ ನನಗೂ ತೀರಾ ಆತ್ಮೀಯತೆ. ಆದರೆ ಈ ಆತ್ಮೀಯತೆಯನ್ನು ನಾನು ಎಂದೂ ದುರುಪಯೋಗ ಪಡಿಸಿಕೊಳ್ಳಲಿಲ್ಲ. ಅವರೂ ಹೆಚ್ಚಿನದೇನನ್ನೂ ಮಾಡಿಲ್ಲ. ಆದರೂ ಅವರು ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದಾಗ ಸರಕಾರದಿಂದ ನನಗೆ ರಾಜ್ಯ ಪ್ರಶಸ್ತಿಯನ್ನು ನೀಡಿದ್ದರು; ಕೇಂದ್ರ ಪ್ರಶಸ್ತಿಗೂ ವ್ಯವಸ್ಥೆ ಪಡಿಸಿದ್ದರು.... "ತಿರುಕನಿಗೆ ಪ್ರಶಸ್ತಿಯಿಂದೇನು? ಖಿಲ್ಲತ್ತಿನಿಂದೇನು? ಕೊಡುವುದಾದರೆ ಆಶ್ರಮದ ಅಭಿವೃದ್ಧಿಗೆ ಗ್ರ್ಯಾಂಟನ್ನು ಕೊಡಿಸಿ" ಎಂದು ನಾನು ಅದನ್ನು "ರಿಟರ್ನ್ಡ್ ವಿಥ್ ಥ್ಯಾಂಕ್ಸ್" ಎಂದು ಬರೆದು ಹಾಕಿದೆ. ಅವರು "ಅದನ್ನೂ ಕೊಡುವ, ಈಗಿದನ್ನು ತೆಗೆದುಕೊಳ್ಳಿ" ಎಂದರು, ನಾನದನ್ನು ಸ್ವೀಕರಿಸಲಿಲ್ಲ... ಅವರು ನಾನು ಕೇಳಿದುದನ್ನು ಕೊಡಲಿಲ್ಲ... ಕೊಡುತ್ತಿದ್ದರೋ ಏನೋ. ಆದರೆ ಈ ತಿರುಕನ (ತಿರುಕ) ಭಾಗ್ಯದ ಕೋಟೆಯ "ದಿಡ್ಡಿಯ ಬಾಗಿಲು ಆಗಲೇ ಹಾಕಿತ್ತು. ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿ ಪದವಿಯಿಂದಾಗಲೇ ಇಳಿದುಬಿಟ್ಟಿದ್ದರು. ಅಧಿಕಾರ ಯಾವಾಗಲೂ ಅಶಾಶ್ವತ; ಪ್ರೇಮ ಮಾತ್ರ ಶಾಶ್ವತ. ಈಗಲೂ ನಾನೂ ಶ್ರೀ ನಿಜಲಿಂಗಪ್ಪನವರೂ ಆತ್ಮೀಯ ಬಂಧುಗಳು. ಅದೆಂದೆಂದೂ ನಾಶವಾಗದು. ಅದು ಚಿರನೂತನ; ಚಿರಂತನ; ಶಾಶ್ವತ. ಶ್ರೀ ಗುರುವು ಶ್ರೀ ನಿಜಲಿಂಗಪ್ಪನವರನ್ನು ಚಿರಕಾಲ ನಮ್ಮೆಲ್ಲರ ಮಧ್ಯೆ ಸುಖ ಸಮೃದ್ಧತೆಯಿಂದ ಬಾಳುವಂತಿರಿಸಲಿ ಎಂದು ನನ್ನ ಪ್ರಾರ್ಥನೆ.



# ನೇರ ನಡೆ-ನುಡಿಯ ನಾಯಕ

**ಖಾದ್ರಿ ಶಾಮಣ್ಣ**

೧೯೪೬ರ ಒಂದು ರಾತ್ರಿ, ಬೆಂಗಳೂರಿನ ಕೇಂದ್ರೀಯ ಸೆರೆಮನೆಗೆ ಕೋಲಾರದ ಚಿನ್ನದಗಣಿ ಸೆರೆಮನೆಯಿಂದ ಒಬ್ಬ ಸ್ಥಾನಬದ್ಧ ಕೈದಿ ಬಂದರು. ಸೆರೆಮನೆಯಲ್ಲಿ ನಮ್ಮ ಪದ್ಧತಿಯಂತೆ ಅವರಿಗೆ ಸ್ವಾಗತ ಕೋರಿದೆವು. ಆ ಕೈದಿ ಮತ್ತಾರೂ ಅಲ್ಲ- ಸಿದ್ಧವನಹಳ್ಳಿ ನಿಜಲಿಂಗಪ್ಪನವರೇ.

ಸೆರೆಮನೆಯಲ್ಲಿ ರಾಜಕೀಯ ಬಂದಿಗಳಲ್ಲೂ ಎರಡು ವರ್ಗ, ನಾಯಕರು ಹಾಗೂ ಕಾರ್ಯಕರ್ತರು. ಮುಖಂಡರಿಗೆ ಪ್ರತ್ಯೇಕತೆ ಇಷ್ಟ. ಕೆಲವರಿಗಂತೂ ತಮ್ಮಷ್ಟಕ್ಕೆ ತಾವು ಇರುವುದೇ ರೂಢಿ. ಯಾರೊಡನೆಯೂ ಬೆರೆಯದವರೂ ಉಂಟು. ಈ ನಿಯಮಕ್ಕೆ ಅಪವಾದವಾಗಿದ್ದವರು ಇಬ್ಬರು ಮುಖಂಡರು. ನಿಜಲಿಂಗಪ್ಪನವರೊಬ್ಬರು, ತಾಳಕೆರೆ ಸುಬ್ರಹ್ಮಣ್ಯ ಅವರು ಮತ್ತೊಬ್ಬರು. ಇವರಿಬ್ಬರ ಸ್ವಭಾವವೂ ಸರಳ, ನೇರ. ತಾಳಕೆರೆ ಸುಬ್ರಹ್ಮಣ್ಯ ಅಕಾಲ ಮರಣಕ್ಕೆ ಈಡಾದರು. ಅವರು ಇಂದು ಇದ್ದಿದ್ದರೆ ಕರ್ನಾಟಕದ ಪ್ರತಿಪಕ್ಷಗಳಿಗೆ ಒಂದು ದಿಗ್ಗಜದಂತೆ. ಸುದೈವದಿಂದ ನಿಜಲಿಂಗಪ್ಪನವರು ಇದ್ದಾರೆ. ಅವರು ನಿಜಕ್ಕೂ ಮತ್ತೊಂದು ದಿಗ್ಗಜ. ಇಂದು ಅವರು ಎಂಬತ್ತರ ಗಡಿಯಲ್ಲಿ ಅಡಿಯಿಡುತ್ತಿದ್ದಾರೆ. ಸಮಗ್ರ ಕರ್ನಾಟಕದ ಶುಭಾಶಯ ಅವರ ಪಾಲಿಗೆ.

ನಿಜಲಿಂಗಪ್ಪನವರ ಬಾಲ್ಯ ಬಡತನದಲ್ಲಿ. ಕಷ್ಟದಲ್ಲಿರುವವರ ನೋವು ಅವರಿಗೆ ಅರಿವಾಗುವುದು ಸುಲಭ. ಹಳ್ಳಿಯಲ್ಲಿ ಹುಟ್ಟಿದವರು. ನಮ್ಮ ಹಳ್ಳಿಗಳ ಸ್ಥಿತಿಗತಿಯೂ ಅವರಿಗೆ ಚಿರಪರಿಚಿತ.

**ಉಪಕಾರ**

ಚಿತ್ರದುರ್ಗ ಜಿಲ್ಲೆಯ ತುರುವನೂರಿನ ಅರಣ್ಯ ಸತ್ಯಾಗ್ರಹ ಇತಿಹಾಸ

ಪ್ರಸಿದ್ಧ. ಆದರಲ್ಲಿ ನಿಜಲಿಂಗಪ್ಪನವರ ಅಗ್ರಪಾತ್ರ, ಅದರ ಫಲವಾಗಿ ಸೆರೆಮನೆ ವಾಸ. ವಕೀಲ ವೃತ್ತಿಯಿಂದಲೂ ಕಡ್ಡಾಯವಾಗಿ ಹೊರಕ್ಕೆ. ಅಂದಿನ ದಬ್ಬಾಳಿಕೆ ಸರಕಾರ ಮಾಡಿದ ಒಂದು ಒಳ್ಳೆಯ ಕೆಲಸ ಕಾಂಗ್ರೆಸ್ ಮುಖಂಡರನೇಕರ ವಕೀಲಿ ಸನ್ನದನ್ನು ಕಿತ್ತು ಕೊಂಡಿತು. ಆ ನಾಯಕರೆಲ್ಲ ಪೂರ್ಣಸಮಯದ ರಾಷ್ಟ್ರಸೇವಕರಾದರು. ನಿಜಲಿಂಗಪ್ಪನವರೂ ಹಾಗೆಯೇ.

'ಭಾರತ ಬಿಟ್ಟು ತೊಲಗಿ' ಚಳವಳಿಯ ಸಂದರ್ಭ. ಎರಡನೆಯ ಮಹಾಯುದ್ಧ ಯಾವಾಗ ಮುಗಿದೀತೆಂಬ ಅಂದಾಜು ಯಾರಿಗೂ ಇರಲಿಲ್ಲ. ಸೆರೆಮನೆಯಲ್ಲೇ ಜೀವಮಾನಪರ್ಯಂತ ಕೊಳೆಯಲೂಬಹುದೆಂಬ ಭೀತಿ. ಕೆಲವು ನಾಯಕರಿಗೆ ಏನೇನೋ ಆತಂಕ. ನಿಜಲಿಂಗಪ್ಪನವರು ಮಾತ್ರ ಎದೆಗುಂದಿದವರಲ್ಲ.

ಎಣಿಕೆಗೆ ಮುನ್ನವೇ ನಾಯಕರ ಬಿಡುಗಡೆ. ಎಲ್ಲರಿಗಿಂತ ಮುಂಚೆ ಗಾಂಧೀಜಿಯ ಬಿಡುಗಡೆ. ಮೈಸೂರು ಕಾಂಗ್ರೆಸ್ ಪ್ರತಿ ಸಲವೂ ಅಧಿವೇಶನ ನಡೆಸುತ್ತಿತ್ತು. ಸೆರೆಮನೆಯಿಂದ ಬಿಡುಗಡೆ ಹೊಂದಿದ ಕೂಡಲೇ ತುಮಕೂರಿನಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನ. ಅದಕ್ಕೆ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರೇ ಅಧ್ಯಕ್ಷರು. ಅದು ನಡೆದುದು ೧೯೪೫ರಲ್ಲಿ.

ಈ ಅಧಿವೇಶನದಲ್ಲಿ ನಿಜಲಿಂಗಪ್ಪನವರ ಭಾಷಣ ತುಂಬಾ ಗಮನಾರ್ಹ. ಸ್ವಾತಂತ್ರ್ಯಕ್ಕಾಗಿ ಅಂತಿಮ ಹೋರಾಟ ನಡೆಯಬಹುದೆಂಬ ನಿರೀಕ್ಷೆ. ಗಾಂಧೀಜಿ ಪ್ರತಿಪಾದಿಸಿದ ರಚನಾತ್ಮಕ ಕಾರ್ಯಗಳಲ್ಲಿ ತೊಡಗಲು ಕಾರ್ಯಕರ್ತರಿಗೆ ಕರೆ. ರಚನಾತ್ಮಕ ಕಾರ್ಯಕ್ರಮ ಎರಡು ಹೋರಾಟಗಳ ನಡುವಣ ಸಿದ್ಧತೆಯ ಕೆಲಸ, ಸತತ ಜನಸಂಪರ್ಕಕ್ಕೆ ಹಾದಿ. ಅದನ್ನು ಚೊಕ್ಕವಾಗಿ ಪ್ರತಿಪಾದಿಸಿದರು- ಅಧಿವೇಶನದ ಅಧ್ಯಕ್ಷರು. ಆಗ ಅವರು ಮಾಡಿದ ಭಾಷಣದ ಪ್ರತಿ ಸಿಕ್ಕಿದರೆ ಈಗಲೂ ಓದಲು, ನೆನಪಿಡಲು ಅರ್ಹ ದಾಖಲೆ.

## ಅವಳಿ ಗುರಿ

ಸ್ವತಂತ್ರ ಭಾರತ-ಏಕತಂತ್ರ ಕರ್ನಾಟಕ ಈ ಅವಳಿ ಗುರಿಗಳು ನಮ್ಮ ಎದುರು. ಸ್ವರಾಜ್ಯ ಬಂದಕೂಡಲೇ ಭಾಷಾವಾರು ಪ್ರಾಂತ ರಚನೆ ಆಗಬೇಕೆಂಬ ಕಲ್ಪನೆ. ಅಂತಲೇ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಂಗಸಂಸ್ಥೆಯಾಗಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ. ಅದರ ಅಧ್ಯಕ್ಷರೂ ಆದರು ನಿಜಲಿಂಗಪ್ಪನವರು. ಇಡೀ ಕರ್ನಾಟಕವೇ ಅವರ ಕಾರ್ಯಕ್ಷೇತ್ರ. ಕರ್ನಾಟಕ ಏಕೀಕರಣಕ್ಕಾಗಿ ಬಹುವಾಗಿ ಶ್ರಮಿಸಿದವರು ಯಾರಾದರೂ ಇದ್ದರೆ ನಿಜಲಿಂಗಪ್ಪನವರು ಅಗ್ರಗಣ್ಯರು.

ಸ್ವರಾಜ್ಯ ಬಂದಿತ್ತು. ಅಧಿಕಾರ ಸ್ಥಾನಗಳೂ ಕೂಗಿ ಕರೆಯುತ್ತಿದ್ದವು. ಹರಿದು ಹಂಚಿಹೋಗಿದ್ದ ಕನ್ನಡ ನಾಡು ಒಂದಾಗುವವರೆಗೆ ನಿಜಲಿಂಗಪ್ಪನವರು ಅತ್ತ ಗಮನವನ್ನೇ ನೀಡಲಿಲ್ಲ. ಉಳಿದ ಎಷ್ಟೋ ಮುಂದಾಳುಗಳಿಗೆ ಆಮಿಷ ತಡೆದುಕೊಳ್ಳಲಾಗಲಿಲ್ಲ. ಅದರಲ್ಲೂ "ಉಕ್ಕಿನ ಮನುಷ್ಯ" ಸರದಾರ್ ವಲ್ಲಭಭಾಯಿ ಪಟೇಲರ ಗಡಸುತನ ಇತಿಹಾಸ ಪ್ರಸಿದ್ಧ. ಎಷ್ಟೋ ಜನ ನಡುಗಿ ಹೋಗುತ್ತಿದ್ದರು. ನಿಜಲಿಂಗಪ್ಪನವರಿಗೆ ಮಾತ್ರ ಅಂಥ ಭಯ ಎಂದೂ ಕಾಡಲಿಲ್ಲ.

ಕನ್ನಡ ನಾಡು ಒಂದಾಗಿಯೇ ತೀರಬೇಕು. ಅದಕ್ಕಾಗಿ ಎಂಥ ತ್ಯಾಗಕ್ಕಾದರೂ ಅವರು ಸಿದ್ಧರಿದ್ದರು. ಹಿಡಿದ ಪಟ್ಟು ಬಿಡಲಿಲ್ಲ. ಸಾಧಿಸಿಯೇ ತೀರಿದರು. ಕರ್ನಾಟಕದ ಮೊಟ್ಟಮೊದಲ ಮುಖ್ಯಮಂತ್ರಿ ಎಂಬ ಕೀರ್ತಿ ಇವರಿಗೆ ಅರ್ಹವಾಗಿಯೇ ಸಂದಿತು.

ಸೋಲು-ಗೆಲವು ನಿಜಲಿಂಗಪ್ಪನವರಿಗೆ ಸದಾ ಸಮಾನ. ಗೆದ್ದಾಗ ಹಿಗ್ಗಲಿಲ್ಲ. ಸೋತಾಗ ಕುಗ್ಗಲಿಲ್ಲ. ೧೯೬೨ರ ಚುನಾವಣೆಯಲ್ಲಿ ಹೊಸದುರ್ಗದಲ್ಲಿ ಅವರಿಗೆ ಸೋಲು. ಅದೂ ಕಂಡು ಕೇಳರಿಯದ ವ್ಯಕ್ತಿಯ ಕೈಲಿ. ಪ್ರಜಾಪ್ರಭುತ್ವದಲ್ಲಿ ಇದೂ ಸಾಮಾನ್ಯ. ಆ ರೀತಿಯೇ ಭಾವಿಸಿದವರು.

೧೯೬೮. ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದುದು ಹೆಮ್ಮೆಯೇ. ಅನಂತರದ ಘಟನೆಗಳೆಲ್ಲ ಕಣ್ಣಿಗೆ ಕಟ್ಟಿದಂತೆ. ೧೯೬೯ರಲ್ಲಿ ರಾಷ್ಟ್ರಪತಿ ಸ್ಥಾನಕ್ಕೆ ಚುನಾವಣೆ. ನೀಲಂ ಸಂಜೀವರೆಡ್ಡಿ ಕಾಂಗ್ರೆಸ್ಸಿನ ಅಧಿಕೃತ ಅಭ್ಯರ್ಥಿ. ಪ್ರಧಾನ ಮಂತ್ರಿ ಇಂದಿರಾ ಗಾಂಧಿ ಅವರಿಗೆ ಅಂತಃಸಾಕ್ಷಿಯ ತಾಕಲಾಟ. ವರಾಹಗಿರಿ ವೆಂಕಟಗಿರಿಯವರನ್ನು ಎತ್ತಿಕಟ್ಟಿದರು. ಕಾಂಗ್ರೆಸ್ ಇಬ್ಭಾಗಕ್ಕೆ ಮುಖ್ಯ ಕಾರಣ. ಸಂಜೀವರೆಡ್ಡಿಯವರ ಸೋಲು ನೀತಿ ಮೌಲ್ಯಗಳಿಗೆ ಆದ ಸೋಲು. ಅಂದಿನಿಂದಲೇ ಭಾರತದ ರಾಜಕೀಯ ಅಧಃಪತನ ಪ್ರಾರಂಭ.

**ನೀತಿಬಲ**

೭೦ರ ದಶಕ. ಏನೆಲ್ಲ ನಡೆದು ಹೋಯಿತು. ಅದಕ್ಕೆಲ್ಲ ಸಾಕ್ಷಿಯಾಗಿಯೇ ನಿಜಲಿಂಗಪ್ಪನವರು ನಿಂತಿದ್ದಾರೆ. ಪಾತ್ರ ವಹಿಸಬೇಕಾದಾಗ ಹಿಂಜರಿದಿಲ್ಲ. ಧೈರ್ಯವಾಗಿ ಮಾತಾಡ ಬೇಕಾದಾಗ ಅಳುಕಿಲ್ಲ. ಕಳೆದ ದಿನಗಳಲ್ಲಿ ಮಂಗಳೂರಿನಲ್ಲಿ ಅವರು ಆಡಿದ ಮಾತುಗಳೇ ಸಾಕ್ಷಿ. ಅವನ್ನು ಆಡಲೂ ನೀತಿಬಲ ಬೇಕು. ನಿಜಲಿಂಗಪ್ಪನವರಲ್ಲಿ ಅದು ಸಾಕಷ್ಟು ಉಂಟು.

ಜನತಾ ಪಕ್ಷ ಅಧಿಕಾರಕ್ಕೆ ಬಂತು. ಯಾವ ಗದ್ದುಗೆಯ ಸುತ್ತಲೂ ಅವರು ಸುಳಿಯಲಿಲ್ಲ. ಮಾಡಬೇಕಾದ ಕೆಲಸ ಮಾಡುತ್ತಲೇ ಇದ್ದರು. ಎಲ್ಲವನ್ನೂ ನಿರೀಕ್ಷಿಸುವ ಪಹರೆಗಾರನಂತೆ ಅವರ ಪಾತ್ರ.

ನಮ್ಮ ಅನೇಕ ಮುಂದಾಳುಗಳು ಗಾಂಧೀ ಪ್ರತಿಪಾದಿಸಿದ ಮೌಲ್ಯಗಳಿಗೆ ತಿಲಾಂಜಲಿ ಇತ್ತಿದ್ದಾರೆ. ನಿಜಲಿಂಗಪ್ಪನವರು ಹಾಗಲ್ಲ. ಅವರಿಗೆ ಗಾಂಧಿ ಮೌಲ್ಯಗಳೆಂದರೆ ಇಂದಿಗೂ ಅಷ್ಟೇ ಅಚಲ ನಂಬಿಕೆ. ಅವುಗಳಲ್ಲೇ ಭಾರತದ ಭವಿಷ್ಯ ಎಂಬಂಥ ನೆರೆನಂಬಿಕೆ.

ಬಿಂಕ ಬಿಗುಮಾನಗಳಿಗೆ ಬಲಿಯಾದವರಲ್ಲ. ಕ್ಷುದ್ರ ಸಂಕುಚಿತತೆಗೆ ಎಂದೂ ಸಿಕ್ಕಿಬೀಳಲಿಲ್ಲ. ಸ್ವಾತಂತ್ರ್ಯ ಸಮರದ ಕಾಲದಲ್ಲಿ ಎಷ್ಟು ಸ್ವಚ್ಛ ಆಗಿದ್ದರೋ ಇಂದಿಗೂ ಅಷ್ಟೇ ಸ್ವಚ್ಛ. ಅದೇ ಧವಳ ಚರಿತ್ರೆ. ಎಷ್ಟೋ ಮಂದಿ ಅಧಿಕಾರಸ್ಥರ ವಿಷಯದಲ್ಲಿ ಗುಲ್ಲುಗಳು, ಆಪಾದನೆಗಳು. ನಿಜಲಿಂಗಪ್ಪನವರ ವಿಷಯದಲ್ಲಿ ಅಂಥ ಯಾವ ಶಂಕೆಗೂ ಎಡೆಯಿಲ್ಲ.

ಹರಿಜನರ ಏಳಿಗೆ, ಜಾತೀಯತೆಯ ನಿರ್ಮೂಲನ, ರಾಷ್ಟ್ರಭಾಷೆ ಹಿಂದೀ ಆಗಬೇಕೆಂಬ ಸಂಕಲ್ಪ-ಇವಾವುದರಲ್ಲೂ ಮೀನ-ಮೇಷ ಅವರಿಗೆ ಇಲ್ಲ. ಹರಿಜನ ಕೇರಿಗಳು ಪ್ರತ್ಯೇಕ ಇರತಕ್ಕದ್ದಲ್ಲ

ಎಂಬ ಖಚಿತ ಅಭಿಪ್ರಾಯ ಇಡೀ ಸಮಾಜ ಏಕರಸ ಆಗಬೇಕೆಂಬ ಕಲ್ಪನೆ. ಎಷ್ಟು ಮಂದಿ ನಮ್ಮ ನಾಯಕರಿಗೆ ಇಂಥ ನಂಬಿಕೆ ಇದ್ದೀತು?

ಸಹನೆ ನಿಜಲಿಂಗಪ್ಪನವರ ಅತ್ಯಂತ ಶ್ರೇಷ್ಠ ಗುಣ. ಶತ್ರುಗಳನ್ನೂ ಸಹಿಸಿದ್ದಾರೆ, ಮೂರ್ಖರನ್ನೂ ಸಹಿಸಿದ್ದಾರೆ, ದ್ರೋಹಿಗಳನ್ನೂ ಸಹಿಸಿದ್ದಾರೆ. ಅವರ ಹೆಸರು ಹೇಳಿಕೊಂಡು ಏನೆಲ್ಲ ಮಾಡಿಕೊಂಡವರು ಎಷ್ಟೋ ಮಂದಿ. ಅಂಥವರನ್ನೂ ಮನ್ನಿಸಿ ಬಿಡುವ ದೊಡ್ಡ ಗುಣ ಅವರದು.

ವಿಶಾಲ ಹೃದಯ, ಉದಾರ ಮನೋಧರ್ಮ, ನೇರ ನಡೆ-ನುಡಿ, ಇವುಗಳೆಲ್ಲದರ ಮೊತ್ತವೇ ಸಿದ್ದನವಹಳ್ಳಿ ನಿಜಲಿಂಗಪ್ಪ ಅವರು.



# ಎಸ್. ಎನ್. ಜೀವನ ದರ್ಶನ

ಬಿ. ಪುಟ್ಟಸ್ವಾಮಯ್ಯ

"ನಮ್ಮ ಇತಿಹಾಸ ಬಹಳ ಮಹತ್ತ್ವದ್ದು. ನಮ್ಮ ಸಂಸ್ಕೃತಿ ಬಹಳ ಪ್ರಾಚೀನ ಕಾಲದ್ದು. ನಮ್ಮ ಜನಜೀವನ ಮಹದಾಶಯಗಳಿಂದ ಪ್ರೇರಣೆ ಪಡೆದದ್ದು. ನಮ್ಮ ಇತಿಹಾಸ ಇಷ್ಟು ಮಹತ್ತ್ವದ್ದಾಗುವಂತೆ, ನಮ್ಮ ಸಂಸ್ಕೃತಿ ಇನ್ನೂ ಹೆಚ್ಚಿನ ಘನತೆಗೇರುವಂತೆ, ಜನಜೀವನ ಇನ್ನೂ ಉದಾತ್ತವಾಗುವಂತೆ, ನಾವು ಪ್ರಯತ್ನಿಸಬೇಕು.

ಪ್ರಾಂತೀಯ ಭಿನ್ನಭಾವನೆಗಳನ್ನು ಬಿಟ್ಟು ಒಬ್ಬರನ್ನೊಬ್ಬರು ಅರಿತು ಕೊಳ್ಳಬೇಕು. ಒಂದಾಗಿ ಬಾಳಿ ಕಷ್ಟ ಸುಖಗಳನ್ನು ಒಂದಾಗಿ ಅನುಭವಿಸಬೇಕು. ಆಗ ನಮ್ಮ ಬದುಕು ಸಮೃದ್ಧವಾಗುತ್ತದೆ.

ಅದಮ್ಯ ಸಂಸ್ಕಾರದ ಫಲ ಕರ್ನಾಟಕ ವಿಜಯನಗರದ ಕೃಷ್ಣದೇವರಾಯರ ಕಾಲದಲ್ಲಿ ಸಾಮ್ರಾಜ್ಯ ಸ್ಥಾಪನೆಯಾಗಿ, ಮೈಸೂರು ಅರಸರ ಕಾಲದಲ್ಲಿ ಕ್ರೋಡೀಕರಿಸಲ್ಪಟ್ಟು, ಏಕೀಕರಣವಾದಿ ಸಾಹಿತಿಗಳ, ರಾಜಕಾರಣಿಗಳ, ಜನನಾಯಕರ, ಜನ ಸಾಮಾನ್ಯರ ಅವಿಶ್ರಾಂತ ಪರಿಶ್ರಮ, ತ್ಯಾಗ ಬಲಿದಾನಗಳಿಂದ (೧-೧೧-೧೯೫೬ರಲ್ಲಿ) ರಚಿತವಾಗಿ, ೧೭ ವರ್ಷಗಳ ಅನಂತರ ಶ್ರೀ ದೇವರಾಜ ಅರಸು ಮುಖ್ಯಮಂತ್ರಿ ಯಾಗಿರುವ ಕಾಲದಲ್ಲಿ ಅಧಿಕೃತವಾಗಿ "ಕರ್ನಾಟಕ" ಎಂದು ನಾಮಕರಣವಾದದ್ದು ಒಂದು ವೈಶಿಷ್ಟ ಪೂರ್ಣ ಘಟನೆ. ಕನ್ನಡ ಜನತೆಯ ಅದಮ್ಯ ಸಂಸ್ಕಾರ, ದೈವೀಬಲ ಮತ್ತು ಆಶೀರ್ವಾದಗಳು ಇದಕ್ಕೆ ಕಾರಣ."

– ಶ್ರೀ ಜಯಚಾಮರಾಜ ಒಡೆಯರ್

ಮೈಸೂರು ಸಂಸ್ಥಾನದ ಮಾಜಿ ಅರಸರೂ, ವಿಸ್ತೃತ ಮೈಸೂರು ರಾಜ್ಯದ ಮಾಜಿ ರಾಜ್ಯಪಾಲರೂ ಇತಿಹಾಸ ಸಂಸ್ಕೃತಿ ತತ್ತ್ವ ಶಾಸ್ತ್ರಗಳಲ್ಲಿ ಪರಿಣತರೂ

ಆದ ಶ್ರೀ ಜಯಚಾಮರಾಜ ಒಡೆಯರು ಕೆಲವೇ ದಿನಗಳ ಹಿಂದೆ ನಡೆದ ಕರ್ನಾಟಕ ರಾಜ್ಯ ನಾಮಕರಣೋತ್ಸವ ಸಂದರ್ಭದಲ್ಲಿ ಸಾಮ್ರಾಜ್ಯ ವೈಭವದ ಚಿರ ಸಂಕೇತವಾದ ವಿಜಯನಗರದ ನವರಾತ್ರಿ ದಿಬ್ಬದ ಮೇಲೆ ನಿಂತು, ಹಂಪೆಯ ವಿರುಪಾಕ್ಷದೇವರ ಸಮಕ್ಷಮ ಮಾಡಿದ ಈ ಘೋಷಣೆ ಅರ್ಥಪೂರ್ಣವೂ, ಕರ್ನಾಟಕ ಏಕೀಕರಣ ಇತಿಹಾಸದ ಬಗೆಗೆ ಜನತೆಯ ಗಮನವನ್ನು ಸೆಳೆಯುವ ಸ್ಮೃತಿಸೂತ್ರವೂ ಆಗಿರುತ್ತದೆ. ಆನಂದೋತ್ಸವದಲ್ಲಿ ಮೈಮರೆತ ಜನರನ್ನು ಒಡೆಯರು ಸಮಯೋಚಿತವಾದ ಹಿತವಚನಗಳಿಂದ ಎಚ್ಚರಿಸಿದ್ದಾರೆ.

ವೇದ ಪುರಾಣ ಇತಿಹಾಸಗಳಲ್ಲಿ ಕರ್ನಾಟಕದ ಉಲ್ಲೇಖ ಅಲ್ಲಲ್ಲಿ ದೊರೆಕುವುದಾದರೂ "ಕಾವೇರಿಯಿಂದಮಾ ಗೋದಾವರಿವರೆಗ" ಎಂದು ಕರ್ನಾಟಕದ ಪ್ರಾದೇಶಿಕ ವಿಸ್ತಾರ ರೂಪರೇಷೆಗಳನ್ನು ಮೊದಲು ಗುರುತಿಸಿದ ಕೀರ್ತಿ ರಾಷ್ಟ್ರಕೂಟ ಅರಸು ಅಮೋಘವರ್ಷ ನೃಪತುಂಗನಿಗೆ ಸಲ್ಲುತ್ತದೆ. ಆಮೇಲೆ ಈ ಪ್ರದೇಶವನ್ನು ಆಳಿದ ಚಾಲುಕ್ಯ, ಹೊಯ್ಸಳ, ವಿಜಯನಗರಗಳ ಅರಸರು, ಈ ಗಡಿಗಳನ್ನು ದಾಟಿ ರಾಜ್ಯ ಕಟ್ಟಿ ದಕ್ಷಿಣಾಪಥೇಶ್ವರ ಎಂದು ವಿಖ್ಯಾತರಾದರು. ನೆರೆಯ ರಾಜ್ಯಗಳಾದ ಆಂಧ್ರ, ಕೇರಳ, ತಮಿಳುನಾಡುಗಳೊಡನೆ ಕರ್ನಾಟಕದ ಸಂಬಂಧ ಸೌಹಾರ್ದದಿಂದ ಕೂಡಿ ಸಮೀಪವರ್ತಿಯಾಯಿತು.

ವಿಜಯನಗರದ ಪತನಾನಂತರ ನಡೆದ ರಾಜಕೀಯ ವಿಪ್ಲವದಲ್ಲಿ ಸಾಮ್ರಾಜ್ಯ ಒಡೆಯಿತು. ಕರ್ನಾಟಕದ ತಿರುಳಾದ ಉತ್ತರದ ಪ್ರದೇಶಗಳು ಘಟನಾಕ್ರಮದಲ್ಲಿ ಮರಾಠರ ಮತ್ತು ಡಿಲ್ಲಿ ಬಾದಷಹರ ಪ್ರತಿನಿಧಿಗಳ ವಶವಾಯಿತು, ಯದುವಂಶದ ಒಡೆಯ ಅರಸರ ರಾಜಕೀಯ ಚತುರತೆ ಸಾಹಸಗಳಿಂದ ಕರ್ನಾಟಕದ ದಕ್ಷಿಣಭಾಗ ಕ್ರೋಡೀಕರಿಸಲ್ಪಟ್ಟು, ಮೈಸೂರು ಸಂಸ್ಥಾನವೆಂದು ಕರೆಯಲ್ಪಟ್ಟಿತು. ಆ ತರುವಾಯ ಹೈದರಾಲಿಯಿಂದ ನಡೆದ ರಾಜ್ಯಾಪಹಾರ, ಮರಾಠ ಮತ್ತು ಬ್ರಿಟಿಷರು ಮೈಸೂರಿನ ಮೇಲೆ ನಡೆಸಿದ ದಾಳಿಗಳು, ಬ್ರಿಟಿಷರಿಂದ ಮೈಸೂರು ಹುಲಿ ಟಿಪ್ಪೂಸುಲ್ತಾನನ ಪರಾಭವ, ವಿಜಯಶಾಲಿಗಳಿಂದ ರಾಜ್ಯದ ಹಂಚಿಕೆ, ಈ ದುರ್ಘಟನೆಗಳ ಫಲವಾಗಿ ಕರ್ನಾಟಕ ಶತಚ್ಛಿದ್ರವಾಗಿ ಮದ್ರಾಸ್, ಹೈದರಾಬಾದ್, ಬೊಂಬಾಯಿ ಪ್ರಾಂತಗಳೊಡನೆ ಕರ್ನಾಟಕದ ಬಹುಭಾಗ ವಿಲೀನವಾಯಿತು. ಒಂದರ ಮೇಲೊಂದರಂತೆ ಎರೆಗಿದ ಈ ವಿಪ್ಲವ ಪರಂಪರೆಯಿಂದ ಕರ್ನಾಟಕದಲ್ಲಿ ಏಕಮಾತ್ರ ಘಟಕವಾಗಿ ಉಳಿದ ತಿರುಳೆಂದರೆ ಮೈಸೂರು ಸಂಸ್ಥಾನವೊಂದೇ ಎಂಬುದನ್ನು ಯಾರೂ ಮರೆಯಲಾರರು. ಈ ಸಂಕಷ್ಟ ಪರಿಸ್ಥಿತಿಯಲ್ಲಿ ಕರ್ನಾಟಕ ಸಂಸ್ಕೃತಿಯನ್ನು, ಕನ್ನಡಿಗರ ಪ್ರಾಣಜ್ಯೋತಿಯನ್ನು ಆರದಂತೆ ರಕ್ಷಿಸಿಕೊಂಡು ಬಂದವರು ಯದು ವಂಶದ ಮೈಸೂರು ಅರಸರೆಂಬುದನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದು ಕನ್ನಡಿಗರೆಲ್ಲರ ಕರ್ತವ್ಯವಾಗಿರುತ್ತದೆ.

ಈ ರೀತಿ ಹರಿದು ಹಂಚಿಹೋದ ಕರ್ನಾಟಕದ ಭಾಗಗಳನ್ನು ಪುನಃ ಒಂದು ಗೂಡಿಸುವ ಪ್ರಯತ್ನವು ಈ ಶತಮಾನದ ಮೊದಲ ದಶಕದಲ್ಲಿ ಪ್ರಾರಂಭವಾಧರೂ ಅದು ಒಂದು ನಿಶ್ಚಿತವಾದ ಚಳುವಳಿಯ ರೂಪತಾಳಿದುದು ಅಖಿಲ ಭಾರತ ಕಾಂಗ್ರೆಸ್ ಮಹಾಸಂಸ್ಥೆಯು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಭಾವಶಾಲಿ ಪ್ರಮುಖ ಪಾತ್ರವನ್ನು ವಹಿಸಿ ಕೇಂದ್ರದಲ್ಲಿ ಅಧಿಕಾರದಲ್ಲಿ ಬಂದ ಮೇಲೆಯೇ ಎಂಬುದನ್ನು ಇತಿಹಾಸಜ್ಞರು ಬಲ್ಲರು.

ಕಾಂಗ್ರೆಸ್ ಮಹಾಸಂಸ್ಥೆ ಸ್ವಾತಂತ್ರ್ಯಕ್ಕಾಗಿ ನಡೆಸಿದ ಚಳುವಳಿ ಸತ್ಯಾಗ್ರಹಗಳಲ್ಲಿ ಭಾಗವಹಿಸಿ, ಸೆರೆಮನೆ ವಾಸವನ್ನು ಅನುಭವಿಸಿದ ಕನ್ನಡಿಗರೆಲ್ಲರೂ ಏಕೀಕರಣವಾದಿಗಳು ಆಗಿದ್ದರೆಂಬುದು ವಾಸ್ತವದ ಮಾತು, ಅವರೆಲ್ಲರ ಸ್ವಾರ್ಥತ್ಯಾಗ, ನಿಚ್ಚಳವಾದ ದೇಶಭಕ್ತಿ, ಅವಿಶ್ರಾಂತ ಪರಿಶ್ರಮದ ಫಲವಾಗಿ ಕ್ರಿ.ಶ. ೧೯೫೬ನೆಯ ನವೆಂಬರ ೧ ನೆಯ ದಿನಾಂಕದಂದು ಕರ್ನಾಟಕದ ಪ್ರಮುಖ ಭಾಗಗಳು ಒಂದಾಗಿ ಮೈಸೂರು ರಾಜ್ಯ ರಚಿತವಾಯಿತು. ಹದಿನೇಳು ವರ್ಷಗಳ ಅನಂತರ ಅದೀಗ ತನ್ನ ಚಿರಂತನ ಪ್ರಾಚೀನ ನಾಮವನ್ನು ಪುನಃ ಪಡೆದಿರುತ್ತದೆ.

ಕನ್ನಡಿಗರ ಅದಮ್ಯ ಸಂಸ್ಕಾರ, ದೈವೀಬಲ, ಜನತೆಯ ಆಶೀರ್ವಾದ, ಇವುಗಳೇ ಈ ಮಹತ್ತ್ವದ ಘಟನೆಯ ಕಾರಣವೆಂದು ಶ್ರೀ ಜಯಚಾಮರಾಜ ಒಡೆಯರು ಘೋಷಿಸಿದುದು ಜನರ ಮನಸ್ಸಿನಿಂದ ಎಂದೆಂದಿಗೂ ಅಳಿಯದ ಚಿರಸತ್ಯ.

ಕರ್ನಾಟಕ ರಾಜ್ಯಸಾರಿಗೆ ಸಂಸ್ಥೆಯು ಸಾಂಸ್ಕೃತಿಕ ಅಂಗವಾದ "ಮಿತ್ರವೃಂದ"ವು ದಿನಾಂಕ ೭.೧೧.೭೩ರಂದು ಸನ್ಮಾನ್ಯ ರಾಜ್ಯಪಾಲ ಸುಖಾಡಿಯಾ ಅವರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ಸತ್ಕಾರಕೂಟ, ಈ ಸಂದರ್ಭದಲ್ಲಿ ಔಚಿತ್ಯ ಪೂರ್ಣವೂ ಮಾರ್ಗದರ್ಶಕವೂ ಆಗಿರುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ, ಏಕೀಕರಣ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಮಾಜಿ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರಿಗೆ "ಕರ್ನಾಟಕ ಕಣ್ಮಣಿ", ಮಾಜಿ ಮುಖ್ಯಮಂತ್ರಿ ಶ್ರೀ ಹನುಮಂತಯ್ಯನವರಿಗೆ "ಕರ್ನಾಟಕ ಶಿಲ್ಪಿ", ಮುಖ್ಯಮಂತ್ರಿ ಶ್ರೀ ದೇವರಾಜ ಅರಸು ಇವರಿಗೆ "ಕರ್ನಾಟಕ ಮಲ್ಲ" ಎಂಬ ಗೌರವ ಪ್ರಶಸ್ತಿಗಳನ್ನು ಆ ಸಂದರ್ಭದಲ್ಲಿ ನೀಡಲಾಯಿತು.

ಕರ್ನಾಟಕ ರಾಜ್ಯ ರಚನೆಯ ಇತಿಹಾಸದಲ್ಲಿ ತ್ರಿಮೂರ್ತಿ ಗಳಂತೆ ಬೆಳಗುತ್ತಿರುವ ಈ ಮೂವರು ಮಹನೀಯರಲ್ಲಿ ಒಬ್ಬರಾದ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಸಿದ್ಧಿ ಸಾಧನೆ ಆದರ್ಶಗಳ ಸಂಕ್ಷಿಪ್ತ ಪರಿಚಯವೇ ಈ ಲೇಖನದ ಉದ್ದೇಶ:

## ಜನನ, ಬಾಲ್ಯ, ವಿದ್ಯಾಭ್ಯಾಸ

ಶ್ರೀ ನಿಜಲಿಂಗಪ್ಪನವರು ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕು ಹಲುವಾಗಲು ಗ್ರಾಮದ ಒಂದು ಬಡರೈತ ಕುಟುಂಬದಲ್ಲಿ ಶ್ರೀ ಅಬ್ಬಲೂರು ಅಡಿವೆಪ್ಪ ಮತ್ತು ಶ್ರೀಮತಿ ನೀಲಮ್ಮ ದಂಪತಿಗಳ ಪುತ್ರರಾಗಿ ೧೯೦೨ನೇ ಇಸವಿಯ ಡಿಸೆಂಬರ್ ೧೦ ರಂದು ಜನ್ಮ ತಳೆದರು. ಎಳೆತನದಲ್ಲಿ ಅವರ ಚೆಲುವಾದ ದುಂಡು ಮುಖ ಹೊಂಬಣ್ಣದ ದೇಹಕಾಂತಿ, ತಂದೆತಾಯಿಗಳಂತೆ ನೆರೆಹೊರೆಯವರ ಪ್ರೇಮಾದರಗಳನ್ನು ಪಡೆದಿತ್ತೆಂದು ತಿಳಿದವರು ಹೇಳಿದ್ದನ್ನು ಕೇಳಿದ್ದೇನೆ. ನಿಜಲಿಂಗಪ್ಪ ನವರು ತಮ್ಮ ಎಳೆತನದ ಮೊದಲ ಮೂರು ವರ್ಷಗಳನ್ನು ಗ್ರಾಮವಾಸಿಗಳ ಕಣ್ಗೊಂಬೆಯಾಗಿ ಕಳೆದರು. ತಂದೆತಾಯಿಗಳಿಗೆ ಬಡತನದಲ್ಲಿಯೂ ಸಂತೃಪ್ತಿಯನ್ನು ತಂದರು ಆದರೆ ವಿಧಿವಿಲಾಸ! ಆ ಸಂತೃಪ್ತಿ ಹೆಚ್ಚು ದಿನ ಉಳಿಯಲಿಲ್ಲ.

ನಿಜಲಿಂಗಪ್ಪನವರು ಮೂರು ವರ್ಷದ ಮಗುವಾಗಿದ್ದಾಗ ಮನೆಯ ಆಧಾರಸ್ಥಂಭದಂತಿದ್ದ ಅವರ ತಂದೆ ಶಿವೈಕ್ಯರಾದರು. ವಾಸಕ್ಕೆ ಒಂದು ಸಾಮಾನ್ಯ ಮನೆ, ಒಂದೆರಡು ಎಕರೆ ಜಮೀನು ಅದರಲ್ಲಿ ತಾವೇ ಬೇಸಾಯ ಮಾಡಿ ಸಂಸಾರ ನಿರ್ವಹಿಸುತ್ತಿದ್ದ ಅಡಿವೆಪ್ಪನವರು ಹೆಂಡತಿ ಮಕ್ಕಳಿಗೆ

ಯಾವ ಆಸ್ತಿಯನ್ನೂ ಬಿಟ್ಟು ಹೋಗಿರಲಿಲ್ಲ. ಅವರ ತಾಯಿ ನೀಲಮ್ಮನವರು ಇದಕ್ಕಾಗಿ ಬೇಸರ ಪಡಲಿಲ್ಲ, ಧೈರ್ಯಗೆಡಲಿಲ್ಲ. ಮಳೆ ಬಿಸಿಲು ಗಾಳಿಯೆನ್ನದೆ ಹೊಲದಲ್ಲಿ ದುಡಿದು ಮಕ್ಕಳನ್ನು ಪೋಷಿಸಿದರು.

ಈ ಕಷ್ಟ ಪರಂಪರೆಯಲ್ಲಿಯೇ ನಿಜಲಿಂಗಪ್ಪನವರು ತಮ್ಮ ಪ್ರಾಥಮಿಕ ಶಾಲಾಭ್ಯಾಸವನ್ನು ಆರಂಭಿಸಿದರು. ಅರವತ್ತು ವರ್ಷಗಳ ಹಿಂದಿನ ಸಾಮಾನ್ಯ ಗ್ರಾಮಾಂತರ ಪಾಠಶಾಲೆ ಯೊಂದರಲ್ಲಿ ಅವರಿಗೆ ದೊರಕಬಹುದಾಗಿದ್ದ ವಿದ್ಯಾಭ್ಯಾಸ ಎಂತಹುದೆಂಬುದನ್ನು ಊಹಿಸಿ ತಿಳಿಯಬಹುದು. ಈ ಪರಿಸ್ಥಿತಿಯ ಬಿಡುಗಡೆ ಎಷ್ಟು ನಿರೀಕ್ಷಿತವೋ ಅಷ್ಟೇ ಸಹಜವಾಗಿ ಬಂದೊದಗಿತು ನಿಜಲಿಂಗಪ್ಪನವರಿಗೆ. ಅವರ ಚಿಕ್ಕಪ್ಪನವರಾದ ಶ್ರೀ ರುದ್ರಪ್ಪನವರು ಚಿತ್ರದುರ್ಗ ಜಿಲ್ಲೆಯ ಸಿದ್ದವ್ವನಹಳ್ಳಿ ಗ್ರಾಮದಲ್ಲಿ ರೈತರಾಗಿ ನೆಲಸಿದ್ದರು. ತಾಯಿ ಮಕ್ಕಳ ಕಠಿಣ ವ್ರತಗಳನ್ನು ಕಂಡು ಕೇಳಿದ ರುದ್ರಪ್ಪ ನವರು ಎಲ್ಲರನ್ನೂ ತಮ್ಮೆಡೆಗೆ ಕರೆಸಿಕೊಂಡರು. ಅಂದಿನಿಂದ ನಿಜಲಿಂಗಪ್ಪನವರು ಸಿದ್ದವ್ವನ ಹಳ್ಳಿಯವರಾದರು. ಚಿತ್ರದುರ್ಗ ಜಿಲ್ಲೆಯ ವ್ಯಾಪಾರೀ ಕೇಂದ್ರವಾದ ದಾವಣಗೆರೆಯಲ್ಲಿ ಅವರ ವಿದ್ಯಾಭ್ಯಾಸ ಮುಂದುವರೆದು ೧೯೧೬ರಲ್ಲಿ ಮಾಧ್ಯಮಿಕ ಶಿಕ್ಷಣಕ್ಕೆ ಚಿತ್ರದುರ್ಗದ ಹೈಸ್ಕೂಲನ್ನು ಸೇರಿದರು. ೧೯೧೮ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆಗ ಹಿರಿಯರೂ ಹಿತೈಷಿಗಳೂ ಅವರನ್ನು ಯಾವುದಾದರೊಂದು ನೌಕರಿಗೆ ಸೇರಿಸಲು ಅಥವಾ ವಾಣಿಜ್ಯದಲ್ಲಿ ತೊಡಗಿಸಲು ಪ್ರಯತ್ನಿಸಿದರು. ಆದರೆ ನಿಜಲಿಂಗಪ್ಪನವರ ಆಕಾಂಕ್ಷೆ ಮೆಟ್ರಿಕ್ಯುಲೇಷನ್ನಿಗೆ ಮುಗಿಯುವಂತಹು ದಾಗಿರಲಿಲ್ಲ. ವಿಜ್ಞಾನ, ಭೌತಶಾಸ್ತ್ರಗಳಲ್ಲಿ ಆಸಕ್ತಿ ಬೆಳಸಿಕೊಂಡಿದ್ದ ಅವರು ಕಾಲೇಜ್ ವ್ಯಾಸಂಗಕ್ಕಾಗಿ ಹಾತೊರೆದರು. ವಿಜ್ಞಾನವನ್ನು ಬೋಧಿಸುವ ಪ್ರೌಢಶಾಲೆ ಆಗ ಇದ್ದದ್ದು ಬೆಂಗಳೂರಲ್ಲಿ ಮಾತ್ರ. ಬೆಂಗಳೂರಿನಂತಹ ದೊಡ್ಡ ನಗರದಲ್ಲಿ ಕಾಲೇಜ್ ವಿದ್ಯಾಭ್ಯಾಸಕ್ಕೆ ಬೇಕಾಗುವ ಹಣ ನಿಜಲಿಂಗಪ್ಪನವರಲ್ಲಿ ಇರಲಿಲ್ಲ. ಈ ಪರಿಸ್ಥಿತಿಯಲ್ಲಿ ಚಿತ್ರದುರ್ಗದ ಬೃಹನ್ಮಠಾಧ್ಯಕ್ಷ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳೂ, ಸಾಹುಕಾರ್ ವೀರಭದ್ರಪ್ಪ ನವರೂ ನಿಜಲಿಂಗಪ್ಪನವರ ಸಹಾಯಕ್ಕೆ ಬಂದರು.

ಈ ಇಬ್ಬರು ಮಹಾನುಭಾವರ ಆಶೀರ್ವಾದ ಧನಸಹಾಯ ಗಳನ್ನು ಪಡೆದು ನಿಜಲಿಂಗಪ್ಪ ನವರು ಬೆಂಗಳೂರಿಗೆ ಬಂದು ಎಂಟ್ರೆನ್ಸ್ ತರಗತಿಗೆ ಸೇರಿದರು. ಕೆಲವು ವರ್ಷಗಳ ಹಿಂದೆ ಸ್ಥಾಪಿತವಾಗಿದ್ದ ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿ ನಿಲಯದಲ್ಲಿ ಊಟ ಹಾಗೂ ವಸತಿಗಳು ದೊರಕಿದವು.

ಆಗಿನ ಬೆಂಗಳೂರು ನಗರ ಈಗಿನಷ್ಟು ವಿಶಾಲವೂ ವೈಭವಪೂರ್ಣವೂ ಆಗಿಲ್ಲದಿದ್ದರೂ ವಿದ್ಯಾರ್ಥಿಗಳ ಮನಸೆಳೆಯುವ ಆಮಿಷ ಆಕರ್ಷಣೆಗಳಿಗೆ ಕೊರತೆಯಿರಲಿಲ್ಲ. ನಾಲ್ಕಾರು ಸಿನಿಮಾ ಮಂದಿರಗಳೂ ಉಪಾಹಾರಗೃಹಗಳೂ ಇದ್ದವು. ವಿದ್ಯಾರ್ಜನೆ ಯನ್ನೇ ಗುರಿಯಾಗಿಟ್ಟುಕೊಂಡಿದ್ದ ನಿಜಲಿಂಗಪ್ಪನವರು ಈ ಆಸೆ ಆಮಿಷಗಳಿಗೆ ಮನಸೋಲದೆ, ವಿದ್ಯಾರ್ಥಿ ನಿಲಯಗಳ ನಿಬಂಧನೆಗಳಿಗೆ ಅಧೀನರಾಗಿ ನಡೆದುಕೊಳ್ಳುತ್ತ ೧೯೨೦ರಲ್ಲಿ ಎಂಟ್ರೆನ್ಸ್ ಪರೀಕ್ಷೆ ಮುಗಿಸಿ ಸೆಂಟ್ರಲ್ ಕಾಲೇಜಿಗೆ ಸೇರಿದರು. ಪ್ರೊಫೆಸರ್ ಮೆಟ್ಕಾಫ್ ಎಂಬ ಆಂಗ್ಲ ವಿದ್ವಾಂಸರು ಆಗ ಕಾಲೇಜಿನ ಮುಖ್ಯಾಧಿಕಾರಿಯಾಗಿದ್ದರು. ಮೆಕಾಲ್ಪೈನ್, ಅಷರ್, ಟೇಟ್, ಸೆಲ್, ವೆಂಕಟನಾರಣಪ್ಪ,

ಶ್ರೀನಿವಾಸರಾವ್, ಸಂಜೀವರಾವ್, ವೆಂಕಟೇಶಾಚಾರ್, ನಾಗೇಶರಾವ್, ಮುಂತಾದವರು ಕಾಲೇಜಿನ ಇತರ ಪ್ರಾಧ್ಯಾಪಕರು, ಪಾಠ ಪ್ರವಚನಗಳಲ್ಲಿ ಏಕಾಗ್ರತೆ, ಶಿಸ್ತು, ಗೊತ್ತಾದ ಕಾಲದಲ್ಲಿ ಕೆಲಸ ಮಾಡುವ ನಿಯತಕಾಲಿಕತೆ, ಈ ವಿಶಿಷ್ಟ ಗುಣಗಳನ್ನು ನಿಜಲಿಂಗಪ್ಪನವರು ಅಳವಡಿಸಿಕೊಂಡಿದ್ದು ಕಾಲೇಜ್ ವ್ಯಾಸಂಗ ಕಾಲದಲ್ಲಿಯೇ.

ಆಗ ಅವರು ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿ ನಿಲಯವನ್ನು ಬಿಟ್ಟು ಆಗ ತಾನೆ ಹೊಸದಾಗಿ ನಿರ್ಮಾಣವಾಗಿದ್ದ ಶ್ರೀ ಜಯದೇವ ವಿದ್ಯಾರ್ಥಿನಿಲಯಕ್ಕೆ ಬಂದರು. ಅದರ ಸ್ಥಾಪಕರಾದ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳವರು ತರುಣ ವಯಸ್ಸಿನ ನಿಜಲಿಂಗಪ್ಪನವರ ಮೇಲೆ ಪ್ರಭಾವ ಬೀರಿದ ಘನವ್ಯಕ್ತಿಗಳಲ್ಲೊಬ್ಬರು. ವಿದ್ಯಾಭ್ಯಾಸದಿಂದ ಮಾತ್ರವೇ ದೇಶದ ಪ್ರಗತಿ ಸಾಧ್ಯವೆಂಬುದನ್ನು ಅರಿತು ಮೈಸೂರು ಸಂಸ್ಥಾನದ ಅನೇಕ ಕಡೆಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ವಿದ್ಯಾದಾನದಲ್ಲಿ ಗುರುಪೀಠಗಳ ಪಾತ್ರವನ್ನು ರೂಪಿಸಿದ ಕೀರ್ತಿ ಶ್ರೀ ಮುರುಘ ರಾಜೇಂದ್ರ ಮಹಾಸ್ವಾಮಿಗಳಿಗೆ ಸಲ್ಲುತ್ತದೆ. ಜಾತೀಯತೆಯ ಅಂಧಾನುಕರಣ ಪ್ರಬಲವಾಗಿದ್ದ ಆ ಕಾಲದಲ್ಲಿ ಮಹಾಸ್ವಾಮಿ ಗಳವರು ಜಾತಿ ಪಂಥಗಳ ಭೇದವಿಲ್ಲದೆ ಎಲ್ಲಾ ಮತೀಯರಿಗೂ ಮುಕ್ತ ಹಸ್ತದಿಂದ ವಿದ್ಯಾದಾನ ಮಾಡುವ ಕ್ರಾಂತಿಕಾರಕ ಆದರ್ಶವನ್ನು ಪ್ರಚಾರಕ್ಕೆ ತಂದರು. ಈ ಆದರ್ಶ ಯತಿವರ್ಯರ ಪ್ರಭಾವದಿಂದ ನಿಜಲಿಂಗಪ್ಪನವರಲ್ಲಿ ಹುಟ್ಟಿದ ಜಾತ್ಯಾತೀತವಾದ ಮನೋಭಾವನೆ ವ್ಯಾಪಕವಾಗಿ ಬೆಳೆದು ಆಮೇಲಿನ ಅವರ ಬದುಕಿನ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿಯೂ ತನ್ನ ಪರಿಮಳ ಹರಡಿದುದನ್ನು ನಾವು ಕಾಣುತ್ತೇವೆ.

೧೯೨೪ರಲ್ಲಿ ಅವರು ಕಾಲೇಜ್ ವ್ಯಾಸಂಗವನ್ನು ಯಶಸ್ವಿಯಾಗಿ ಮುಗಿಸಿ ಪದವೀಧರ ರಾದರು. ವಿಜ್ಞಾನ, ಭೌತಶಾಸ್ತ್ರಗಳಲ್ಲಿ ಅವರ ಒಲವು ಸ್ನಾತಕೋತ್ತರ ವಿದ್ಯಾಭ್ಯಾಸದ ಕಡೆಗೆ ಬೆಳೆಯಿತಾದರೂ ಗುರುಹಿರಿಯರ ಒತ್ತಾಯದಿಂದ ನ್ಯಾಯಶಾಸ್ತ್ರಾಭ್ಯಾಸಕ್ಕಾಗಿ ಪೂನಾ ನಗರದ ಫರ್ಗೂಸನ್ ಕಾಲೇಜನ್ನು ಸೇರುವುದು ಅನಿವಾರ್ಯವಾಯಿತು. ಎರಡು ವರ್ಷಗಳ ಅನಂತರ LL.B., ಪದವೀಧರರಾಗಿ ವಿದ್ಯಾಭ್ಯಾಸದ ಹಂತಗಳನ್ನು ಮುಗಿಸಿ ಬಾಳುವೆಯ ವಿಶಾಲ ಜಗತ್ತಿನಲ್ಲಿ ಪಾದಾರ್ಪಣೆ ಮಾಡಿದರು.

## ವಕೀಲರಾಗಿ ರಾಜಕೀಯದ ಹಾದಿಯಲ್ಲಿ

ಆಂಗ್ಲರ ರಾಜ್ಯಭಾರದೊಡನೆ ಕಾಯಿದೆ, ಕಾನೂನು ಘಟನೆ ಮುಂತಾದವುಗಳೂ ಸ್ಥಾಪಿತವಾದಾಗ, ನಾಡಿನ ಸ್ವಾತಂತ್ರ್ಯ ಸಾಧನೆಯೂ ಘಟನಾತ್ಮಕವಾಗಿ ನಡೆಯಬೇಕೆಂಬ ಇಚ್ಛೆಯಿಂದ ಆಂಗ್ಲ ವಿದ್ಯಾಭ್ಯಾಸಪಡೆದ ಹಿರಿಯ ರಾಜಕಾರಣಿಗಳಲ್ಲಿ ಹೆಚ್ಚು ಮಂದಿ ವಕೀಲರೇ ಆಗಿದ್ದರು. ವಕೀಲ ವೃತ್ತಿಯ ಸ್ವತಂತ್ರ ವೃತ್ತಿಯುಷ್ಟೇ ಅಲ್ಲದೆ ಸರ್ಕಾರವನ್ನು ಎದುರಿಸಲು ಬೇಕಾದ ಶಸ್ತ್ರಗಳನ್ನು ಪಡೆದಿತ್ತೆಂಬುದು ಇದರಿಂದ ವಿದಿತವಾಗುತ್ತದೆ.

ಸರ್ಕಾರದ ಉನ್ನತ ನೌಕರಿಗಳು ಕಾದಿದ್ದರೂ ನಿಜಲಿಂಗಪ್ಪನವರು ಅವೆಲ್ಲವನ್ನೂ ಕಡೆಗಣಿಸಿ ವಕೀಲ ವೃತ್ತಿಯನ್ನೇ ಅವಲಂಬಿಸಿದ್ದರು. ಯಾರಾದರೊಬ್ಬ ಹಿರಿಯ ವಕೀಲರ ಕಚೇರಿಯಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡುವುದು ಈಗಿನಂತೆ ಆಗಲೂ ವೃತ್ತಿಗಿಳಿಯುವ ಹೊಸಬರಿಗೆ

ಅಗತ್ಯವಾಗಿತ್ತು. ನಿಜಲಿಂಗಪ್ಪನವರು ಪರಾನುಕರಣದ ಈ ಸಂಪ್ರದಾಯದ ಮಾರ್ಗವನ್ನು ಹಿಡಿಯದೆ ಚಿತ್ರದುರ್ಗದ ಸಂತೇಪೇಟೆಯಲ್ಲಿ ಸ್ವತಂತ್ರರಾಗಿ ತಮ್ಮ ವೃತ್ತಿಯನ್ನು ಪ್ರಾರಂಭಿಸಿದರು. ಈ ತರುಣದಲ್ಲಿಯೇ ದಾವಣಗೆರೆಯ ಶ್ರೀಮಂತ ಮನೆತನದ ಶ್ರೀಮತಿ ಮುರಿಗೆಮ್ಮನವರೊಡನೆ ನಿಜಲಿಂಗಪ್ಪನವರ ವಿವಾಹ ನಡೆಯಿತು.

ವೃತ್ತಿಯನ್ನು ಪ್ರಾರಂಭಿಸಿದ ಕೆಲವೇ ವರುಷಗಳಲ್ಲಿ ನಿಜಲಿಂಗಪ್ಪನವರು ವಕೀಲ ವೃಂದದಲ್ಲಿ ಗಣ್ಯ ಸ್ಥಾನವನ್ನು ಪಡೆದರು. ಅವರ ವ್ಯವಹಾರದ ವ್ಯಾಪ್ತಿ ಸ್ಥಳೀಯ ನ್ಯಾಯಸ್ಥಾನ ಗಳನ್ನಷ್ಟೇ ಅಲ್ಲದೆ ಬೆಂಗಳೂರಿನ ಹೈಕೋರ್ಟಿಗೂ ಹರಡಿತು. ತಮ್ಮಲ್ಲಿಗೆ ಬಂದ ವ್ಯವಹಾರದ ವಿವರಗಳನ್ನು ಶ್ರದ್ಧೆಯಿಂದ ಓದಿ, ಮುಖ್ಯಾಂಶಗಳನ್ನು ಗ್ರಹಿಸಿ ನ್ಯಾಯಾಸ್ಥಾನಗಳಲ್ಲಿ ಪರಿಣಾಮಕಾರಿ ಯಾಗಿ ವಾದಿಸುವ ಜಾಣ್ಮೆ ಅವರಿಗೆ ಹಸ್ತಗತವಾಯಿತು. ಸರಳ ಜೀವನ, ಕಕ್ಷಿಗಾರರೊಡನೆ ಹಸನ್ಮುಖದ ಅನೌಪಚಾರಿಕ ಒಡನಾಟ, ವೈಚಾರಿಕ ಏಕಾಗ್ರತೆ, ಈ ಗುಣಗಳು ಅವರಿಗೆ ಶೀಘ್ರವಾಗಿ ಯಶಸ್ಸನ್ನು ತಂದಿತು. ಜಿಲ್ಲೆಯ ಜನತೆಯಲ್ಲಿ ನಿಜಲಿಂಗಪ್ಪನವರು "ದುರ್ಗದ ವಕೀಲರು" ಎಂದು ಹೆಸರಾದರು. ಕಕ್ಷಿ ಪ್ರತಿಕಕ್ಷಿಗಳಂತೆ ಸಹೋದ್ಯೋಗಿ ನ್ಯಾಯಾಧೀಶರನ್ನು ಬೆರಗುಗೊಳಿಸುವ ವಾಗ್ಮಿತ್ವ ಅವರದಾಗಿತ್ತು. ಕಠಿಣವಾದ ವ್ಯವಹಾರಗಳನ್ನು ಅವರು ಚಾಣಾಕ್ಷತೆಯಿಂದ ಗೆಲ್ಲುತ್ತಿದ್ದರು. ವ್ಯವಹಾರಕ್ಕಾಗಿ ಮೊಕದ್ದಮೆಗಳನ್ನು ಅವರು ಅಂಗೀಕರಿಸುವುದರಲ್ಲಿ ಅವರ ವಿವೇಚನೆ ಆದರ್ಶ ಪ್ರಾಯವಾಗಿತ್ತು. ನ್ಯಾಯನೀತಿಗಳಿಗೆ ಹೊರತಾದ ಮೊಕದ್ದಮೆಗಳನ್ನು ಅವರು ತಿರಸ್ಕರಿಸುತ್ತಿದ್ದರು. ಕಡುಬಡವರಾದ ಕಕ್ಷಿಗಾರರಿಂದ ಪ್ರತಿಫಲದ ನಿರೀಕ್ಷೆಯಿಲ್ಲದೆ ವ್ಯವಹಾರ ನಡೆಸುತ್ತಿದ್ದರು.

## ಕಾಂಗ್ರೆಸ್ ಸ್ವಯಂಸೇವಕ

ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯ ಅಧಿವೇಶನ ೧೯೨೪ರಲ್ಲಿ ಮಹಾತ್ಮಾ ಗಾಂಧಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನಡೆದಾಗ ನಿಜಲಿಂಗಪ್ಪನವರು ಸ್ವಯಂಸೇವಕರಾಗಿ ಅಲ್ಲಿಗೆ ಹೋಗಿದ್ದರು. ಕಾಂಗ್ರೆಸ್ಸಿನ ನಿಸ್ವಾರ್ಥ ಸೇವೆ, ಭಾರತ ಸ್ವಾತಂತ್ರ್ಯಕ್ಕೆ ಅದು ನಡೆಸುತ್ತಿದ್ದ ಅಹಿಂಸಾತ್ಮಕ ಹೋರಾಟ ಇವುಗಳಿಂದ ಪ್ರಭಾವಿತರಾಗಿ ನಿಜಲಿಂಗಪ್ಪನವರು ಚಿತ್ರದುರ್ಗಕ್ಕೆ ಹಿಂದಿರುಗಿದಾಗ ಅವರಲ್ಲಿ ಒಂದು ಬಗೆಯ ಪರಿವರ್ತನೆ ತಲೆದೋರಿತು.

ವಕೀಲರಾದ ಮೇಲೆ ಬಡತನದ ಬವಣೆಯಿಂದ ಪಾರಾಗಿ ಸುಖಜೀವನದ ನಡೆಸುವ ಭಾಗ್ಯ ಒದಗಿದ್ದರೂ ದೇಶದ ಪಾರತಂತ್ರ್ಯ, ಅದಕ್ಕಾಗಿ ಇದುವರೆಗೆ ತಮ್ಮಿಂದ ಯಾವ ಸೇವೆಯೂ ಸಂದಿಲ್ಲವೆಂಬ ಕೊರಗು, ನಿಜಲಿಂಗಪ್ಪನವರ ಬದುಕನ್ನು ನಿಸ್ತೇಜವಾಗಿ ಮಾಡಿತ್ತು. ಮಹಾತ್ಮಾ ಗಾಂಧಿಯವರ ಬರಹಗಳಿಂದ ಉತ್ಸಾಹಿತರಾಗಿದ್ದ ಅವರು ಕರ್ತವ್ಯ ಮತ್ತು ವೃತ್ತಿಯ ನಡುವಿನ ತಾಕಲಾಟದಲ್ಲಿ ಸಿಲುಕಿದ್ದರು. ಶುಭ್ರ ಖಾದಿಧಾರಿಗಳಾಗಿದ್ದರೂ ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಲಿಲ್ಲವೆಂಬ ಚಿಂತೆ ಅವರಲ್ಲಿ ಮನೆಮಾಡಿತ್ತು. ಗಾಂಧೀಜಿಯವರ ದಂಡೀಯಾತ್ರೆ, ತತ್ಫಲವಾಗಿ ಉದ್ಭವಿಸಿದ ಉಪ್ಪಿನ ಸತ್ಯಾಗ್ರಹ ವರದಿಗಳಿಂದ ಉದ್ಬೋಧಿತರಾಗಿ ನಿಜಲಿಂಗಪ್ಪನವರು ೧೯೩೧ರಿಂದಲೂ ಕಾಂಗ್ರೆಸ್ ಸಂಸ್ಥೆಯ ಸದಸ್ಯರೂ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗಿದ್ದರು.

ಕೆಲವು ವರ್ಷಗಳ ಅನಂತರ ಈ ಡೋಲಾಯಮಾನ ಪರಿಸ್ಥಿತಿ ಕೊನೆಮುಟ್ಟುವ ಕಾಲ ಬಂದಿತು. ಭಾರತ ಸೇವಾದಳದ ಸಂಸ್ಥಾಪಕರೂ, ಹಿರಿಯ ಕಾಂಗ್ರೆಸ್ ನಾಯಕರೂ ಆಗಿದ್ದ ಡಾ. ಹರ್ಡಿಕರ್ ನಾರಾಯಣರಾಯರು ಮೈಸೂರು ದೇಶದ ರಾಜಕೀಯ ಪರಿಸ್ಥಿತಿಯ ಅಭ್ಯಾಸಕ್ಕಾಗಿ ೧೯೩೬ರಲ್ಲಿ ಸಂಸ್ಥಾನಕ್ಕೆ ಭೇಟಿಯಿತ್ತರು. ಅವರ ಚಿತ್ರದುರ್ಗ ಜಿಲ್ಲೆಯ ಪ್ರವಾಸ ಸಮಯದಲ್ಲಿ ನಿಜಲಿಂಗಪ್ಪನವರು ಅವರೊಡನಿದ್ದರು. ಇದರ ಪರಿಣಾಮವಾಗಿ ಭಾರತದ ರಾಜಕೀಯಾಂದೋಳನ. ಮೈಸೂರಿನ ಪ್ರಚಲಿತ ರಾಜಕೀಯ ಸಂಸ್ಥಾನಗಳ ರಾಜಕೀಯ ಪರಿಸ್ಥಿತಿ ಮಹಾತ್ಮರ ಮನೋರಂಗ ಮುಂತಾದ ವಿಚಾರಗಳಲ್ಲಿ ನಿಷ್ಠಾವಂತರಾಗಿದ್ದ ನಿಜಲಿಂಗಪ್ಪನವರಿಗೆ ತಮ್ಮ ಕರ್ತವ್ಯದ ಪ್ರಚೋದನೆ ದೊರಕಿತು. ಇಲ್ಲಿಯವರೆಗೆ ಬಿರುಗಾಳಿಗೆ ಮುನ್ನಿನ ಪ್ರಶಾಂತ ಸಾಗರದಂತಿದ್ದ ನಿಜಲಿಂಗಪ್ಪನವರ ಜೀವನ ಮುಂದೆ ಕ್ರಾಂತಿಕಾರಕವಾಯಿತು. ಈ ರೀತಿ ಅವರು ರಾಜಕೀಯಕ್ಕೆ ಅಭ್ಯಾಗತರಂತೆ ಬಂದರು. ಸ್ವಾರ್ಥಸಾಧನೆಯ ಯಾವ ಬಗೆಯ ಅಪೇಕ್ಷೆಯೂ ಆಗ ಅವರಿಗಿರಲಿಲ್ಲ. ಸ್ವಾತಂತ್ರ್ಯ ಸಮರದ ಶಿಸ್ತಿನ ಸಿಪಾಯಿಯಂತೆ ಸ್ವರಾಜ್ಯ ಸಾಧನೆಗಾಗಿ ದುಡಿಯಲೆಂದೇ ಅವರು ರಾಜಕೀಯ ರಂಗವನ್ನು ಪ್ರವೇಶಿಸಿದರು.

ತಮ್ಮನ್ನೇ ನಂಬಿ ತಮ್ಮ ಆಶ್ರಯದಲ್ಲಿದ್ದ ಸಂಸಾರವನ್ನು ಕಷ್ಟದಲ್ಲಿ ಹಾಕಿ, ಅಸೀಮ ತ್ಯಾಗದಿಂದ ಸ್ವರಾಜ್ಯ ಸಾಧನೆಯ ಮುಳ್ಳಿನ ಹಾದಿಯಲ್ಲಿ ಹೆಜ್ಜೆಯಿಟ್ಟ ಅವರ ನಿಲುವು ಕೆಲವರಿಗೆ ಮಾತ್ರವೇ ಸಾಧ್ಯ.

ನಿಜಲಿಂಗಪ್ಪನವರು ಆ ಸಂದರ್ಭದಲ್ಲಿ ಕೈಕೊಂಡ ನಿಲುವಿನ ಬಗೆಗೆ ಯಾವಾಗಲೂ ಅವರು ಪರಿತಪಿಸಿದವರಲ್ಲ. ಅಡ್ಡಿ ಆತಂಕಗಳು ಎದುರಿಗೆ ನಿಂತಾಗಲೂ ಅವರು ತಮ್ಮ ಗುರಿಯಿಂದ ಚಲಿಸಲಿಲ್ಲ. ಉಪವಾಸ ವನವಾಸಗಳ ಜೊತೆಗಾರರಾದಾಗಲೂ ಅವರ ಮನಸ್ಥೈರ್ಯ ಮಸಕಾಗಲಿಲ್ಲ. ಆಸೆ ಆಮಿಷಗಳಿಗೆ ಬಲಿಯಾಗದೆ, ಅಧಿಕಾರಕ್ಕೆ ಹಾತೊರೆಯದೆ, ಸ್ಥಾನಮಾನಗಳ ದಾಪವಿಲ್ಲದ ನಿಷ್ಠುರವಾದಿ ನಿಜಲಿಂಗಪ್ಪನವರು.

"ನಿರ್ಧಾರ ತೆಗೆದುಕೊಳ್ಳುವುದು ನಿಧಾನ. ಆದರೆ ಒಂದು ಸಾರಿ ನಿರ್ಧಾರ ತೆಗೆದುಕೊಂಡರೆ ಮುಗಿಯಿತು. ಎಂತಹ ಸಂದರ್ಭದಲ್ಲಿಯೂ ಅಚಲರಾಗಿ ನಿರ್ಧಾರದಂತೆ ನಡೆಯುವರು". ಎಂದು ಜನ ನಿಜಲಿಂಗಪ್ಪನವರ ಬಗ್ಗೆ ಹೇಳುವ ಮಾತು ನೂರಕ್ಕೆ ನೂರು ಪಾಲು ಸತ್ಯ.

## ಮೈಸೂರು ಕಾಂಗ್ರೆಸ್ಸಿನ ಹೊಸ ನಿಲುವು

ದೇಶೀಯ ಸಂಸ್ಥಾನಗಳಲ್ಲಿ ಸ್ವಾತಂತ್ರ ಚಳುವಳಿಯನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಡೆಸುವುದು ಆಗಿನ ಕಾಲಕ್ಕೆ ಕಷ್ಟ ಸಾಧ್ಯವಾದ ಕೆಲಸವಾಗಿತ್ತು. ಸ್ವತಃ ಸ್ವಾತಂತ್ರ್ಯವನ್ನು ಕಳೆದುಕೊಂಡು ಬ್ರಿಟಿಷ್ ಸರ್ಕಾರದ ಅಡಿಯಾಳುಗಳಂತೆ ನಡೆದುಕೊಳ್ಳುತ್ತಿದ್ದ ಸಂಸ್ಥಾನಗಳ ಸರ್ಕಾರಗಳು ಬ್ರಿಟಿಷರ ಹಿತಾಸಕ್ತಿಗಳ ರಕ್ಷಣೆಯಲ್ಲಿ ಬ್ರಿಟಿಷ್ ಅಧಿಕಾರಿಗಳಿಗಿಂತ ಹೆಚ್ಚಿನ ಶ್ರದ್ಧಾಸಕ್ತಿಗಳನ್ನು ತೋರಿಸಲು ಪ್ರಯತ್ನಿಸುತ್ತಿದ್ದವು. ಸಂಸ್ಥಾನದ ಪ್ರಜೆಗಳು ಒಂದು ಕಡೆ ಬ್ರಿಟಿಷ್ ಸರ್ಕಾರ, ಇನ್ನೊಂದು ಕಡೆ ಸಂಸ್ಥಾನದ ಸರ್ಕಾರ, ಹೀಗೆ ಎರಡು ಪ್ರಭುತ್ವಗಳ ಒತ್ತಡ, ದಬ್ಬಾಳಿಕೆಗಳನ್ನು ಸಹಿಸಬೇಕಾಗಿತ್ತು. ಬ್ರಿಟಿಷರ ಆಡಳಿತದಲ್ಲಿದ್ದ ಪ್ರಾಂತಗಳ ಪ್ರಜೆಗಳಲ್ಲಿ ವೈಚಾರಿಕ ಸ್ವಾತಂತ್ರ್ಯ ಸ್ವಲ್ಪ ಮಟ್ಟಿಗಾದರೂ

ಉಳಿದಿತ್ತು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೂಡಲು ಅವರು ಶಕ್ತರಾಗಿದ್ದರು. "ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು" ಎಂದು ಲೋಕಮಾನ್ಯ ತಿಲಕರು ನ್ಯಾಯಾಸ್ಥಾನದಲ್ಲಿ ಘೋಷಿಸಿದ್ದುಂಟು. ಆದರೆ ಜನರ ವೈಚಾರಿಕ ಶಕ್ತಿಯನ್ನ ಕುಂಠಿತಗೊಳಿಸಿ ನಿರಂಕುಶವಾದ ಆಡಳಿತ ನಡೆಸುವುದು ಬ್ರಿಟಿಷರಲ್ಲಿ ತಮಗಿದ್ದ ಭಕ್ತಿಯ ಸೂಚಕವೆಂದು ಸಂಸ್ಥಾನಗಳ ಸರಕಾರಗಳು ತಿಳಿದಿದ್ದುವು. "ನಾಭಾ" ಎಂಬ ಹೆಸರಿನ ಒಂದು ಪುಟ್ಟ ಸಂಸ್ಥಾನದಲ್ಲಿ ತಾವು ಅನುಭವಿಸಿದ ಕಿರುಕುಳಯಾತನೆಗಳನ್ನು ಪಂಡಿತ ನೆಹರೂ ಅವರು ತಮ್ಮ ಆತ್ಮಕಥೆಯಲ್ಲಿ ವಿವರಿಸಿದ್ದಾರೆ. ಈ ದ್ವಿಮುಖ ದಬ್ಬಾಳಿಕೆಯ ಪರಿಸ್ಥಿತಿಯಲ್ಲಿ ಚಳುವಳಿ ಹೂಡುವ ಸ್ವಾತಂತ್ರ್ಯ ಯೋಧನಿಗೆ ಇರಬೇಕಾದ ಶಿಸ್ತು ಸಂಯಮ ಕರ್ತವ್ಯ ನಿಷ್ಠೆಗಳು ಉನ್ನತ ಮಟ್ಟದ್ದಾಗಿದ್ದರೆ ಮಾತ್ರವೇ ಚಳುವಳಿ ಯಶಸ್ವಿ ಆಗುವುದೆಂದು ನಿಜಲಿಂಗಪ್ಪನವರು ತಿಳಿದಿದ್ದರು.

ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯು ನೇರವಾಗಿ ಸಂಸ್ಥಾನಗಳ ರಾಜಕೀಯದಲ್ಲಿ ತಲೆಹಾಕಲು ನಿರಾಕರಿಸಿದ್ದುದರಿಂದ ಸಂಸ್ಥಾನಿಕರ ದಬ್ಬಾಳಿಕೆ ಸುಲಭವಾಗಿತ್ತು. ಬ್ರಿಟಿಷ್ ಪ್ರಾಂತ್ಯಗಳಲ್ಲಿದ್ದಂತೆ ಸ್ವತಂತ್ರ ನ್ಯಾಯಾಸ್ಥಾನಗಳಾಗಲೀ. ರಾಜಕೀಯ ಕೈದಿಗಳ ಹಿತರಕ್ಷಣೆಯ ಕಾನೂನು ರಿಯಾಯಿತಿಗಳಾಗಲೀ ಸಂಸ್ಥಾನಗಳಲ್ಲಿ ಜಾರಿಯಲ್ಲಿರಲಿಲ್ಲ. ಈ ಬಗೆಯ ಕಠಿಣ ಸನ್ನಿವೇಶದಲ್ಲಿ ಚಳುವಳಿಗಾರರು ಎಲ್ಲಾ ಬಗೆಯ ಕಷ್ಟಕಾರ್ಪಣ್ಯಗಳಿಗೂ, ತ್ಯಾಗಕ್ಕೂ ಸಿದ್ಧರಾಗಿರಬೇಕಾಗಿತ್ತು. ಇದೆಲ್ಲವನ್ನು ತಿಳಿದಿದ್ದ ನಿಜಲಿಂಗಪ್ಪನವರು ಸಾಧಕ ಬಾಧಕಗಳನ್ನು ದೀರ್ಘವಾಗಿ ಪರ್ಯಾಲೋಚಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ನಿರ್ಧಾರಕ್ಕೆ ಬಂದರು.

## ಕಾಂಗ್ರೆಸ್ ಸಂಸ್ಥೆಯ ಪುನರ್ಘಟನೆ

ಆಗ ಮೈಸೂರು ರಾಜ್ಯದ ರಾಜಕೀಯ ರಂಗದಲ್ಲಿ ಕಾಂಗ್ರೆಸ್ ಸಂಸ್ಥೆಯೊಂದೇ ಅಲ್ಲದೆ ಇತರ ರಾಜಕೀಯ ಪಕ್ಷಗಳೂ ಇದ್ದವು. ಜವಾಬ್ದಾರೀ ಸರ್ಕಾರ ಈ ಪಕ್ಷಗಳ ಗುರಿಯಾಗಿದ್ದರೂ ಸರ್ಕಾರ ಅನುಸರಿಸುತ್ತಿದ್ದ "ವಿಭಜಿಸಿ ಆಳುವ" ಚಾಣಾಕ್ಷ ನೀತಿಯಿಂದ ಅದುವರೆಗೆ ಏನನ್ನೂ ಸಾಧಿಸಲು ಅವು ಶಕ್ತವಾಗಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಮೈಸೂರು ಕಾಂಗ್ರೆಸ್ ಸಂಸ್ಥೆಯ ಮುಂದೆ ಎರಡು ತೊಡಕುಗಳು ಇದ್ದವು. ಒಂದು ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಮೈಸೂರು ಕಾಂಗ್ರೆಸ್‌ಗೆ ನೆರವು ನೀಡುವುದಿಲ್ಲವೆಂಬ ನಿರ್ಲಕ್ಷ್ಯ ನೀತಿ. ಇನ್ನೊಂದು ಸರ್ಕಾರಕ್ಕೆ ಬೆಂಬಲ ಕೊಡುತ್ತಿದ್ದ ವಿರೋಧ ಪಕ್ಷದೊಡನೆ ಹೋರಾಟ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಮೈಸೂರು ಕಾಂಗ್ರೆಸ್ ಸಂಸ್ಥೆಯ ಅಸ್ತಿತ್ವ ಉಳಿಯಬೇಕಾದರೆ ವಿರೋಧ ಪಕ್ಷಗಳಾಗಿದ್ದ ಪ್ರಜಾಪಕ್ಷ ಮತ್ತು ಪ್ರಜಾಮಿತ್ರ ಮಂಡಲಿಗಳನ್ನು ಕಾಂಗ್ರೆಸ್‌ನಲ್ಲಿ ಸಮಾವೇಶಗೊಳಿಸುವುದು ಅಗತ್ಯವೆಂದು ಮೈಸೂರು ಕಾಂಗ್ರೆಸ್ ನಾಯಕರು ಭಾವಿಸಿದರು. ಅದಕ್ಕಾಗಿ ಅವರು ವಾರ್ಧಾಕ್ಕೆ ಹೋಗಿ ಮಹಾತ್ಮಾ ಗಾಂಧಿಯವರ ಸಲಹೆ, ಆಶೀರ್ವಾದಗಳನ್ನೂ ಪುನರ್ಘಟಿತ ಮೈಸೂರು ಕಾಂಗ್ರೆಸ್‌ಗೆ ಅಖಿಲ ಕಾಂಗ್ರೆಸ್ ಬೆಂಬಲ ದೊರಕಿಸಿಕೊಡುವ ಭರವಸೆಯನ್ನೂ ಪಡೆದು ಹಿಂದಿರುಗಿ ವಿರೋಧ ಪಕ್ಷಗಳೊಡನೆ ಸಂಧಾನ ನಡೆಸಿದರು. ಪ್ರಜಾಪಕ್ಷ - ಪ್ರಜಾಮಿತ್ರ ಮಂಡಲಿ ಈ ಎರಡು ಸಂಸ್ಥೆಗಳನ್ನು ರದ್ದುಗೊಳಿಸಿ, ಆ ಸಂಸ್ಥೆಗಳ ಸದಸ್ಯರು ಸಾಮೂಹಿಕ ಕಾಂಗ್ರೆಸ್‌ಗೆ ಸೇರತಕ್ಕದ್ದೆಂದೂ, ಈ ರೀತಿ ಪುನರ್ಘಟಿತವಾದ

ಕಾಂಗ್ರೆಸ್ ಸಂಸ್ಥೆ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸತಕ್ಕದ್ದೆಂದೂ ತೀರ್ಮಾನವಾಯಿತು. ವಿಲೀನೀಕರಣದ ಈ ನಿರ್ಧಾರಗಳನ್ನು ಯಶಸ್ವಿಯಾಗಿ ಆಚರಣೆಗೆ ತಂದು ಮೈಸೂರು ಕಾಂಗ್ರೆಸ್ಸನ್ನು ಪುನರ್ಘಟಿಸುವ ಈ ಮಹತ್ ಕಾರ್ಯದಲ್ಲಿ ನಿಜಲಿಂಗಪ್ಪನವರ ಹಾಗೂ ಚಿತ್ರದುರ್ಗ ಜಿಲ್ಲೆಯ ಪಾತ್ರ ಇತಿಹಾಸ ಪ್ರಸಿದ್ಧವಾದದ್ದು.

## ಜವಾಬ್ದಾರಿ ಸರ್ಕಾರಕ್ಕೆ ಹೋರಾಟ

೧೯೩೭ರಲ್ಲಿ ಏಪ್ರಿಲ್ ೧೭ ರಂದು ಚಿತ್ರದುರ್ಗದಲ್ಲಿ ನಡೆದ ವಿಲೀನೀಕರಣ ಸಮಾರಂಭಕ್ಕೆ ಶ್ರೀ ಕೆ. ಸಿ. ರೆಡ್ಡಿಯವರು ಅಧ್ಯಕ್ಷರೂ, ಶ್ರೀ ನಿಜಲಿಂಗಪ್ಪನವರು ಸ್ವಾಗತ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಈ ಇಬ್ಬರು ಮುಂದಾಳುಗಳ ನೇತೃತ್ವದಲ್ಲಿ ಸಮಾರಂಭ ಅತ್ಯಂತ ಯಶಸ್ವಿಯಾಗಿ ನಡೆದು ಅಲ್ಲಿಯವರೆಗೆ ಸುಪ್ತಪ್ರಾಯ ವಾಗಿದ್ದ ಮೈಸೂರು ಕಾಂಗ್ರೆಸ್ ಸಂಸ್ಥೆ ಪುನರ್ಘಟಿತವಾಗಿ ನವಚೈತನ್ಯ ಪಡೆಯಿತು. ಮುಂದೆ ಸಂಸ್ಥಾನಾದ್ಯಂತ ನಡೆದ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಚಿತ್ರದುರ್ಗದ ವಿಲೀನೀಕರಣ ಸಮಾರಂಭ ನಾಂದಿಯಾಯಿತು.

ಸ್ವರಾಜ್ಯ ಸಾಧನೆಗಾಗಿ ನಡೆದ ಅಹಿಂಸಾತ್ಮಕ ಹೋರಾಟದಲ್ಲಿ ಅ.ಭಾ ಕಾಂಗ್ರೆಸ್ ನಾಯಕರು ತೋರಿದ ಕಷ್ಟ ಸಹಿಷ್ಣುತೆ, ಅಪೂರ್ವ ತ್ಯಾಗದ ವಿವರಗಳನ್ನೂ, ಅದರ ಫಲವಾಗಿ ಬ್ರಿಟಿಷ್ ಹಿಂದೂಸ್ಥಾನದ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ಸಿಗರು ಸರ್ಕಾರ ರಚಿಸಿ ಆಡಳಿತ ನಡೆಸುತ್ತಿರುವುದನ್ನೂ ಅಭಿನಂದಿಸಿ ನಿಜಲಿಂಗಪ್ಪನವರು ಸಭೆಯಲ್ಲಿ ಮಾಡಿದ ಭಾಷಣ ಮುಂದೆ ಮೈಸೂರಲ್ಲಿ ನಡೆದ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಸ್ಫೂರ್ತಿಯಿತ್ತು ಮಾರ್ಗದರ್ಶಕವಾಯಿತು.

ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾಗಬೇಕೆಂಬ ನಿರ್ಣಯ ಈ ಮೊದಲೇ ಅನೇಕ ಸಾರಿ ಆಗಿನ ಪ್ರಜಾಪ್ರತಿನಿಧಿ ಮತ್ತು ನ್ಯಾಯ ವಿಧಾಯಕ ಸಭೆಗಳಲ್ಲಿ ಬೇಡಿಕೆಯ ರೂಪದಲ್ಲಿ ಮಂಡಿಸಲ್ಪಟ್ಟಿತ್ತಾದರೂ ಪ್ರಭುತ್ವದ ಧೋರಣೆ, ರೀತಿನೀತಿಗಳಲ್ಲಿ ಯಾವ ಬದಲಾವಣೆಗಳೂ ಆಗಿರಲಿಲ್ಲ. ನಿರಂಕುಶ ದಬ್ಬಾಳಿಕೆಯ ಪ್ರಭುತ್ವ ರಥ ಎಂದಿನಂತೆ ವೈಭವ ವಿಲಾಸಗಳಿಂದ ನಡೆದಿತ್ತು. ಈ ಪರಿಸ್ಥಿತಿಯಲ್ಲಿ ಜನ್ಮ ತಳೆದ ಮೈಸೂರು ಕಾಂಗ್ರೆಸ್ ಸಂಸ್ಥೆ ಚಿತ್ರದುರ್ಗದಲ್ಲಿ ಸಭೆ ನಡೆಸಿ "ಸಂಸ್ಥಾನದಲ್ಲಿ ಪೂರ್ಣ ಜವಾಬ್ದಾರಿ ಸರಕಾರದ ಸ್ಥಾಪನೆಯೇ ತನ್ನ ಪರಮ ಧ್ಯೇಯ"ವೆಂದು ಒಕ್ಕೊರಲಿನಿಂದ ಘೋಷಿಸಿತು.

ಕಾಂಗ್ರೆಸ್ ಇತಿಹಾಸವನ್ನು ರಚಿಸಿದ ಡಾ. ಪಟ್ಟಾಭಿ ಸೀತಾರಾಮಯ್ಯನವರು ಚಿತ್ರದುರ್ಗದಲ್ಲಿ ನಡೆದ ಈ ಚರಿತ್ರಾರ್ಹ ಸಮಾರಂಭಕ್ಕೆ ಹೆಚ್ಚಿನ ಮಹತ್ತ್ವ ಕೊಟ್ಟು "ಈ ಸಂದರ್ಭವು ರಾಜ್ಯದಲ್ಲಿ ರಾಜಕೀಯ ಪಕ್ಷಗಳ ಬೆಳವಣಿಗೆಯನ್ನು ಪೂರ್ಣಗೊಳಿಸಿ ಇತರ ಪಕ್ಷಗಳನ್ನು ಕಾಂಗ್ರೆಸ್‌ನಲ್ಲಿ ವಿಲೀನ ಮಾಡಿಕೊಂಡು ರಾಷ್ಟ್ರೀಯತೆಯನ್ನು ಸಾರಿತು" ಎಂದು ಹೇಳಿ ಮೈಸೂರಿನ ಜವಾಬ್ದಾರಿ ಸರ್ಕಾರ ಚಳವಳಿಯ ರಾಷ್ಟ್ರೀಯ ರೂಪದ ಕಡೆಗೆ ಗಮನ ಸೆಳೆದಿದ್ದಾರೆ. ಈ ಮುಂದೆ ಮೈಸೂರು ಕಾಂಗ್ರೆಸ್ ಅನುಕ್ರಮವಾಗಿ ಬೆಳೆಯುತ್ತಾ ಬಂದು ಅಖಿಲ ಭಾರತ ಕಾಂಗ್ರೆಸ್‌ನೊಡನೆ ವಿಲೀನ ವಾದುದನ್ನು ನಿಜಲಿಂಗಪ್ಪನವರ ರಾಜಕೀಯ ಜೀವನದ ಸಿದ್ಧಿ ಸಾಧನೆಗಳಲ್ಲಿ ಗುರುತಿಸಬಹುದು.

## ದಬ್ಬಾಳಿಕೆಯ ಉಗ್ರರೂಪ

' ೧೯೩೭ರಲ್ಲಿ ಭಾರತ ರಾಜ್ಯಾಂಗ ಘಟನೆಗನುಸಾರವಾಗಿ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಭಾಗವಹಿಸಿ ಪ್ರಾಂತ ಸರ್ಕಾರಗಳನ್ನು ರಚಿಸಿದ್ದರ ಪರಿಣಾಮವಾಗಿ ಮೈಸೂರು ಕಾಂಗ್ರೆಸ್ ಸಂಸ್ಥೆಯ ಚುನಾವಣೆಗಳಲ್ಲಿ ಭಾಗವಹಿಸಲು ನಿರ್ಧರಿಸಿ, ಚುನಾವಣಾ ಪ್ರಚಾರಕ್ಕಾಗಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರನ್ನು ಆಹ್ವಾನಿಸಿತು. ಆದರೆ ಅವರು ಬಹಿರಂಗ ಸಭೆಯಲ್ಲಿ ಮಾತನಾಡಕೂಡದೆಂದು ಮೈಸೂರು ಸರಕಾರ ನಿರ್ಬಂಧ ಹಾಕಿದುದರಿಂದ ಬೊಂಬಾಯಿ ನಗರದ ತರುಣ ಮುಂದಾಳುಗಳಾದ ವೀರ ನಾರಿಮನ್ನರು ಆ ಕಾರ್ಯಕ್ಕಾಗಿ ಆಹ್ವಾನಿಸಲ್ಪಟ್ಟರು. ನಾರಿಮನ್ನರು ಬೆಂಗಳೂರಿಗೆ ಆಗಮಿಸಿ ಬನಪ್ಪಾ ಪಾರ್ಕಿನಲ್ಲಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡಲು ಪ್ರಯತ್ನಿಸಿದಾಗ ಪೋಲೀಸರು ಅವರನ್ನು ಬಂಧಿಸಿದರು. ನೆರೆದಿದ್ದ ಜನ ರೊಚ್ಚಿಗೆದ್ದು ಕಲ್ಲು ಕೆರಗಳನ್ನು ಪೋಲೀಸರ ಕಡೆಗೆ ತೂರಿದಾಗ ಗೋಲಿಬಾರು ನಡೆಯಿತು. ಸರಕಾರದ ಈ ಅವಿಚಾರದ ವರ್ತನೆಯಿಂದ ನಾರೀಮನ್ನರ ಭಾಷಣಕ್ಕಿಂತ ನೂರುಪಾಲು ಹೆಚ್ಚಿನ ಪ್ರಚಾರ ದೊರಕಿದಂತಾಗಿ ಚುನಾವಣೆಗಳಲ್ಲಿ ಕಾಂಗ್ರೆಸ್ ವಿಜಯಶಾಲಿಯಾಗಿ ಉಭಯ ಶಾಸನಸಭೆಗಳಲ್ಲಿ ಬಹುಮತ ಗಳಿಸಿತು. ನಿಜಲಿಂಗಪ್ಪನವರು ಚಿತ್ರದುರ್ಗ ಜಿಲ್ಲೆಯಿಂದ ನ್ಯಾಯವಿಧಾಯಕ ಸಭೆಗೆ ಅವಿರೋಧವಾಗಿ ಚುನಾಯಿತರಾದರು.

ಮೈಸೂರು ಕಾಂಗ್ರೆಸ್‌ಗೆ ಪ್ರಥಮ ಪ್ರಯತ್ನದಲ್ಲಿಯೇ ದೊರೆತ ಈ ಮಹಾವಿಜಯದಿಂದ ಜನತೆಯ ರಾಜಕೀಯ ಜಾಗೃತಿ ಎಚ್ಚೆತ್ತಿತು. ಜವಾಬ್ದಾರಿ ಸರ್ಕಾರ ಚಳವಳಿ ಬಲಗೊಂಡಿತು. ಚುನಾವಣೆಯ ಅನಂತರ ೧೯೩೮ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕು ಶಿವಪುರ ಗ್ರಾಮದಲ್ಲಿ ಕಾಂಗ್ರೆಸ್ ಪ್ರಥಮ ಮಹಾಧಿವೇಶನ ಶ್ರೀಮಾನ್ ಟಿ. ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಾಗ ಕಾಂಗ್ರೆಸ್ ಧ್ವಜವನ್ನು ಮೈಸೂರು ಸಂಸ್ಥಾನದಲ್ಲಿ ಎಲ್ಲಿಯೂ ಆರೋಹಣ ಮಾಡಬಾರದೆಂದು ಮೈಸೂರು ಸರ್ಕಾರ ನಿರ್ಬಂಧ ಹಾಕಿತು. ಇದರ ಪರಿಣಾಮವಾಗಿ ಸಂಸ್ಥಾನಾದ್ಯಂತ ಸ್ವಾತಂತ್ರ್ಯದ ಕಿಚ್ಚು ಹರಡಿ ನಿರ್ಬಂಧಾಜ್ಞೆಯನ್ನು ಉಲ್ಲಂಘಿಸಲು ಜನರು ಮುಂದಾದರು. ಕೋಲಾರ ಜಿಲ್ಲೆಯ ವಿದುರಾಶ್ವತ್ಥದಲ್ಲಿ ಗೋಲೀಬಾರು, ಮೈಸೂರು ನಗರದ ಹ್ಯಾಮಿಲ್ಟನ್ ಪೋಲೀಸ್ ಕಛೇರಿಯ ಮುಂದೆ ಸತ್ಯಾಗ್ರಹ, ಪತ್ರಿಕಾ ಸ್ವಾತಂತ್ರ್ಯದ ಮುಟ್ಟುಗೋಲು, ನಾಯಕರ ದಸ್ತಗಿರಿ, ಪ್ರಮುಖ ಕಾಂಗ್ರೆಸ್ಸಿಗರನ್ನು ಸಂಸ್ಥಾನದಿಂದ ಹೊರಗಟ್ಟುವ ಪ್ರತಿಬಂಧಕ ಆಜ್ಞೆಗಳ ಜಾರಿ, ಇವು ಶಿವಪುರದಲ್ಲಿ ಪ್ರಾರಂಭವಾದ ಧ್ವಜ ಸತ್ಯಾಗ್ರಹದ ಪ್ರಮುಖ ಘಟನೆಗಳು. ಈ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ೧೯೩೯ರ ದಿನಾಂಕ ಫೆಬ್ರವರಿ ೨೬ರಲ್ಲಿ ಬೆಂಗಳೂರಿನಲ್ಲಿ ಸಮಾವೇಶವಾದ ಮೈಸೂರು ಕಾಂಗ್ರೆಸ್ ಮಹಾಧಿವೇಶನದಲ್ಲಿ ಸರಕಾರದ ಕಟುಧೋರಣೆಯನ್ನು ಪ್ರತಿಭಟಿಸಲು ಕಾಂಗ್ರೆಸ್ ಸದಸ್ಯರು ಶಾಸನ ಸಭೆಗಳಿಗೆ ರಾಜೀನಾಮೆ ಕೊಡಬೇಕೆಂಬ ಅಸಹಕಾರ ನಿರ್ಣಯ ಅಂಗೀಕರಿಸಲ್ಪಟ್ಟಿತು. ಸಂಸ್ಥೆಯ ಆದೇಶದಂತೆ ಕಾಂಗ್ರೆಸ್ ಸದಸ್ಯರು ರಾಜೀನಾಮೆಯಿತ್ತರು.

## ಪ್ರಭುತ್ವ ಮಣಿಯಿತು

ಈ ಗೊಂದಲದ ಘಟನೆಗಳಿಂದ ಮೈಸೂರು ಸರ್ಕಾರ ಕನಲಿ ಕಂಗೆಟ್ಟು ಮುಂದೇನು

ಮಾಡಬೇಕೆಂದು ತಿಳಿಯದೆ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ಸಹಾಯ ಬೇಡಿತು. ತತ್ಪರಿಣಾಮವಾಗಿ ಸರ್ದಾರ್ ಪಟೇಲ್ ಮತ್ತು ಆಚಾರ್ಯ ಕೃಪಲಾನಿಯವರು ಮಧ್ಯಸ್ಥಗಾರರಾಗಿ ಮೈಸೂರಿಗೆ ಬಂದು ದಿವಾನ್ ಮಿರ್ಜಾರೊಡನೆ ಮಾತುಕತೆ ನಡೆಸಿದರು. ಆಗ ನಡೆದ ಒಪ್ಪಂದದಲ್ಲಿ ಮೈಸೂರು ಸರ್ಕಾರ ಎಲ್ಲಾ ಪ್ರತಿಬಂಧಕಾಜ್ಞೆಗಳನ್ನು ಹಿಂದಕ್ಕೆ ತೆಗೆದು ಕೊಳ್ಳುವುದು, ರಾಜಕೀಯ ಬಂಧಿಗಳ ಬಿಡುಗಡೆ, ಆಗತಾನೆ ರಚಿತವಾದ ರಾಜಕೀಯ ಸುಧಾರಣೆ ಸಮಿತಿಗೆ ಮೈಸೂರು ಕಾಂಗ್ರೆಸ್‌ನ ಪರವಾಗಿ ೭ ಮಂದಿ ಸದಸ್ಯರ ನೇಮಕ, ಸಾರ್ವಜನಿಕ ಸಮಾರಂಭಗಳಲ್ಲಿ ಮೈಸೂರು ಧ್ವಜದೊಡನೆ ಕಾಂಗ್ರೆಸ್ ಧ್ವಜಗಳನ್ನು ಏರಿಸುವುದು, ದೇಶಭ್ರಷ್ಟ ಆಜ್ಞೆಗಳ ಉಪಸಂಹಾರ, ಮೈಸೂರು ಕಾಂಗ್ರೆಸ್ ಘಟನಾತ್ಮಕ ಸಂಸ್ಥೆಯೆಂದು ಸಾರುವುದು, ಇವೇ ಮುಂತಾದ ವಿಷಯಗಳು ಸೇರಿದ್ದವು.

ಮಧ್ಯಸ್ಥಿಕೆಯ ಮಾತುಕತೆಗಳಲ್ಲಿ ಮೈಸೂರು ಸರ್ಕಾರ ಈ ಎಲ್ಲಾ ಷರತ್ತುಗಳಿಗೆ ಒಪ್ಪಿಗೆ ಕೊಟ್ಟಿತ್ತಾದರೂ ಅವುಗಳನ್ನು ಕಾರ್ಯರೂಪಕ್ಕೆ ತರಲಿಲ್ಲ. ಸಹಕಾರ ನಿರ್ಣಯದಂತೆ ರಾಜೀನಾಮೆಯಿತ್ತ ನ್ಯಾಯವಿಧಾಯಕ, ಪ್ರಜಾಪ್ರತಿನಿಧಿ ಸಭೆಗಳ ಕಾಂಗ್ರೆಸ್ ಸದಸ್ಯರು ಹೊರಗುಳಿದರು. ಜಿಲ್ಲಾ ಬೋರ್ಡು, ಪೌರಸಭೆ, ಗ್ರಾಮ ಪಂಚಾಯಿತಿಗಳ ಕಾಂಗ್ರೆಸ್ ಸದಸ್ಯರೂ ತಮ್ಮ ಸ್ಥಾನಗಳಿಗೆ ರಾಜೀನಾಮೆಯಿತ್ತು ಅಸಹಕಾರ ನಿರ್ಣಯಕ್ಕೆ ಬೆಂಬಲ ಕೊಟ್ಟರು. ಇಷ್ಟೆಲ್ಲಾ ನಡೆಯುತ್ತಿದ್ದರೂ ಒಪ್ಪಂದವನ್ನು ಮುರಿದ ವಚನಭ್ರಷ್ಟ ಸರ್ಕಾರ ಎಚ್ಚೆತ್ತುಕೊಳ್ಳಲಿಲ್ಲ. ಕಾಂಗ್ರೆಸ್ ನಾಯಕರನ್ನು ಪ್ರತಿಬಂಧಿಸುವ, ಪತ್ರಿಕಾ ಸ್ವಾತಂತ್ರ್ಯವನ್ನು ಮೊಟಕು ಮಾಡುವ ಹೊಸ ಆಜ್ಞೆಗಳು ಜಾರಿಗೆ ಬಂದವು.

## ಅಹಿಂಸಾತ್ಮಕ ಹೋರಾಟ

ಘಟನಾತ್ಮಕ ಚಳವಳಿಯಿಂದ ಜವಾಬ್ದಾರಿ ಸರ್ಕಾರ ದೊರಕುವುದಿಲ್ಲವೆಂಬ ಕಟುಸತ್ಯ ಸರಕಾರದ ಈ ವರ್ತನೆಯಿಂದ ಕಾಂಗ್ರೆಸ್ಸಿಗೆ ಮನವರಿಕೆಯಾಯಿತು. ಆಗ ಅದಕ್ಕೆ ಉಳಿದಿದ್ದ ಮಾರ್ಗ ಪ್ರತಿಬಂಧಕಾಜ್ಞೆಗಳ ಉಲ್ಲಂಘನೆ ಮತ್ತು ಸತ್ಯಾಗ್ರಹ ಇವೆರಡೇ ಆಗಿದ್ದವು. ಈ ಮೊದಲೇ ಅಂಗೀಕರಿಸಲ್ಪಟ್ಟಿದ್ದ ನಿರ್ಣಯಗಳನ್ನು ಕಾರ್ಯಗತ ಮಾಡಲು ಕಾಂಗ್ರೆಸ್ ಸಂಸ್ಥೆ ಶಿವಪುರದ ಮಹಾಧಿವೇಶನದಲ್ಲಿ ಅಧ್ಯಕ್ಷರಾಗಿದ್ದ ಶ್ರೀಮಾನ್ ಟಿ. ಸಿದ್ಧಲಿಂಗಯ್ಯನವರನ್ನು ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಿತು. ಅಹಿಂಸಾತ್ಮಕ ಹೋರಾಟಕ್ಕೆ ಕಾಂಗ್ರೆಸ್ ಯೋಧರು ಸಿದ್ಧರಾಗಿ ಮುಂದೆ ಬಂದರು. ಸಿದ್ಧಲಿಂಗಯ್ಯನವರ ಬಂಧನ ಶಿಕ್ಷೆಗಳ ಅನಂತರ ಅವರ ಸ್ಥಾನಕ್ಕೆ ಎಡಬಿಡದೆ ಬಂದ ನಾಯಕರು ಸ್ಥಾನಬದ್ಧರಾದರು. ಸಂಸ್ಥಾನದ ಎಲ್ಲಾ ಕಡೆಗಳಲ್ಲಿಯೂ ಹೋರಾಟದ ನಡೆದು ಬಂಧನ ಶಿಕ್ಷೆಗಳು ಪ್ರತಿನಿತ್ಯದ ಮಾತಾದವು.

## ಅರಣ್ಯ ಸತ್ಯಾಗ್ರಹ

ಈ ಹೋರಾಟದಲ್ಲಿ ಕಂಕಣಬದ್ಧರಾದ ನಿಜಲಿಂಗಪ್ಪನವರ ಪಾತ್ರ ವಿಶಿಷ್ಟವಾದದ್ದು. ಶುದ್ಧ ಬಿಳಿಯ ಖಾದಿ ಉಡುಪನ್ನು ಧರಿಸಿ, ತಮ್ಮ ಬೆಂಬಲಿಗರಾದ ಹಲವರನ್ನು ಕೂಡಿಕೊಂಡು ಹೆಗಲುಗಳ ಮೇಲೆ ಕೊಡಲಿಗಳನ್ನು ಹೊತ್ತುಕೊಂಡು ಚಿತ್ರದುರ್ಗದ ಬಳಿಯ ತುರುವನೂರಿನ ಈಚಲು ವನಕ್ಕೆ ಸೇರಿದ ಗಿಡಗಳನ್ನು ಕಡಿಯಲು ಅವರು ಸನ್ನದ್ಧರಾಗಿ ಹೊರಟರು. ಅವರ ಈ ಅರಣ್ಯ ಸತ್ಯಾಗ್ರಹ

ಬಾಬೂ ರಾಜೇಂದ್ರ ಪ್ರಸಾದರು ಚಂಪಾರಣ್ಯದಲ್ಲಿ, ಸರ್ದಾರ್ ಪಟೇಲರು ಬಾರ್ಡೋಲಿಯಲ್ಲಿ ನಡೆಸಿದ ಸತ್ಯಾಗ್ರಹಗಳಷ್ಟೆ ಚರಿತ್ರಾರ್ಹವಾದದ್ದು. ನಿರ್ಬಂಧಾಜ್ಞೆಯನ್ನು ಮುರಿದ ಆರೋಪಕ್ಕಾಗಿ ಸರ್ಕಾರ ನಿಜಲಿಂಗಪ್ಪನವರನ್ನು ಬಂಧಿಸಿ ಒಂದುವರೆ ವರ್ಷ ಸಶ್ರಮ ಕಾರಾಗೃಹ ಶಿಕ್ಷೆ ವಿಧಿಸಿತು. ನಿಜಲಿಂಗಪ್ಪನವರಿಗೆ ಹಾರ್ದಿಕ ಸ್ವಾಗತ ನೀಡಿ ಸರ್ಕಾರದ ಆಜ್ಞೆಯನ್ನು ಮುರಿಯಲು ನೆರವಾದ ತುರುವನೂರು ಗ್ರಾಮಸ್ಥರ ಮೇಲೆ ಸರ್ಕಾರ ಪುಂಡುಗಂದಾಯ ಹೇರಿತು.

ಹೀಗೆ ಮೊದಲ ಸಾರಿ ಕಾರಾಗೃಹವಾಸದ ಕಠಿಣ ವ್ರತದಲ್ಲಿ ದೀಕ್ಷಿತರಾಗಿ, ತಮ್ಮ ಮಡದಿ ಮಕ್ಕಳು ಬಂಧುಬಾಂಧವ ಹಿತೈಷಿಗಳಿಂದ ಬೀಳ್ಕೊಂಡಾಗ ನಿಜಲಿಂಗಪ್ಪನವರಿಗೆ ಮೂವತ್ತೇಳು ವರುಷದ ಹರೆಯ. ಬೀಳ್ಕೊಡುವಾಗ ಮಡದಿ ಮಕ್ಕಳು ಒಂದು ಹನಿಯೂ ಕಣ್ಣೀರಿಡದೆ ಶುಭಕೋರಿ ಹರಕೆ ಹೊತ್ತರು. ತುಸುಮಾತ್ರವೂ ವಿಚಲಿತರಾಗಲಿಲ್ಲ. ಆತ್ಮೀಯ ಸತೀಸುತರ ಸ್ವಾರ್ಥ ತ್ಯಾಗ, ಮಮತೆ ವಿಶ್ವಾಸಗಳು ತಮ್ಮ ರಾಜಕೀಯ ಜೀವಾಳಕ್ಕೆ ಬೆಂಬಲದ ನೀರೆರೆದು ಪೋಷಿಸಿತೆಂದು ನಿಜಲಿಂಗಪ್ಪನವರೇ ಕೆಲವೊಮ್ಮೆ ಹೇಳುತ್ತಿದ್ದುದುಂಟು.

ಮೈಸೂರು ಸರ್ಕಾರದ ಈ ಉಗ್ರ ಕ್ರಮವನ್ನು ಅಖಿಲ ಭಾರತ ಕಾಂಗ್ರೆಸ್ ನಾಯಕರು ಒಕ್ಕೊರಲಿನಿಂದ ಖಂಡಿಸಿದರು. ಮೈಸೂರು ಕಾಂಗ್ರೆಸ್‌ನ ಅಹಿಂಸಾತ್ಮಕ ಹೋರಾಟದ ಬಗೆಗೆ ಮಹಾತ್ಮಾಗಾಂಧಿಯವರು ಪ್ರಶಂಸೆಯನ್ನು ವ್ಯಕ್ತಪಡಿಸಿ, ಸಂಸ್ಥಾನದ ರಾಜಕೀಯ ಪರಿಸ್ಥಿತಿಯನ್ನು ಸ್ವತಃ ಪರಿಶೀಲಿಸಿ ಅರಿತುಕೊಳ್ಳಲು ತಮ್ಮ ಆಪ್ತ ಕಾರ್ಯದರ್ಶಿ ಶ್ರೀ ಮಹದೇವ ದೇಸಾಯರನ್ನು ಕಳುಹಿಸಿದರು.

## ಕಾರಾಗೃಹ ವಾಸ

ಮೈಸೂರು ಕಾಂಗ್ರೆಸ್‌ನ ಹಿರಿಯ ನಾಯಕರೆಲ್ಲರೂ ಕಾರಾಗೃಹವಾಸಿಗಳಾಗಿದ್ದು ಈ ಅಸಾಮಾನ್ಯ ಪರಿಸ್ಥಿತಿಯಲ್ಲಿ ಮೈಸೂರು ರತ್ನ ಸಿಂಹಾಸನಾಧೀಶ್ವರ ಶ್ರೀ ಜಯಚಾಮರಾಜ ಒಡೆಯರ ಸಿಂಹಾಸನಾರೋಹಣವು ದಿನಾಂಕ ಸೆಪ್ಟೆಂಬರ್ ೮, ೧೯೪೦ರಲ್ಲಿ ನಡೆಯಿತು. ಈ ಸಂದರ್ಭದಲ್ಲಿ ನಿಜಲಿಂಗಪ್ಪನವರ ಮತ್ತಿತರ ರಾಜಕೀಯ ಬಂಧಿಗಳ ಬಿಡುಗಡೆಯಾಯಿತು.

ಜನತೆಯ ಎದುರು ಸರ್ಕಾರದ ಉದಾರ ವರ್ತನೆಯನ್ನು ಮರೆಸುವ ಯೋಜಿತವಾಗಿದ್ದ ಬಿಡುಗಡೆಯ ಅಜ್ಞೆಯನ್ನು ಮೆರೆಸುವ ಇನ್ನೊಂದು ಆಜ್ಞೆಯೂ ಆ ಸಂದರ್ಭ ದಲ್ಲಿ ಹೊರಬಿತ್ತು. ನಿಜಲಿಂಗಪ್ಪನವರ ಜೀವನಾಧಾರವಾಗಿದ್ದ ವಕೀಲ ವೃತ್ತಿಯ ಸನ್ನದನ್ನು ಸರ್ಕಾರ ಹಿಂದಕ್ಕೆ ತೆಗೆದುಕೊಂಡಿತು. ಆರು ಮಕ್ಕಳ ತಂದೆಯಾಗಿದ್ದ ನಿಜಲಿಂಗಪ್ಪನವರು ಆ ಸಮಯದಲ್ಲಿ ಧೈರ್ಯ ಸ್ಥೈರ್ಯಗಳಿಂದ ಬಡತನವನ್ನು ಅನುಭವಿಸಿದರು. ಮಡದಿ ಮಕ್ಕಳ ನಿಶ್ಚಲತೆಯಿಂದಲೂ, ಬಂಧು ಬಾಂಧವರ ನೆರವಿನಿಂದಲೂ ಹಿತೈಷಿ ಹಾಗೂ ಪ್ರಜಾಸ್ತೋಮದ ಸಹಾನುಭೂತಿಯಿಂದಲೂ ತಮಗೆ ಅದು ಸಾಧ್ಯವಾಯಿತೆಂದು ಸ್ವತಃ ನಿಜಲಿಂಗಪ್ಪನವರೇ ಅನೇಕ ಸಾರಿ ಹೇಳಿದ್ದಾರೆ. ತೃಪ್ತಿ ಮತ್ತು ಹರ್ಷ ಮನೋಭಾವನೆಗಳು ಮಾನವ ಜೀವನದಲ್ಲಿ ಎಂತಹ ತಾರಕ ಮಂತ್ರಗಳೆಂಬುದನ್ನು ಸರ್ಕಾರದ ಆಜ್ಞೆ ತಮಗೆ ಅನುಭವಸಿದ್ಧ ಮಾಡಿ ಕೊಟ್ಟಿತೆಂದು ನುಡಿದಿದ್ದಾರೆ.

ಕಾರಾಗೃಹವಾಸದಿಂದಾಗಲೀ, ಸಂಸಾರ ನಿರ್ವಹಣೆಯ ಕಷ್ಟಕಾರ್ಪಣ್ಯಗಳಿಂದಾಗಲೀ

ನಿಜಲಿಂಗಪ್ಪನವರು ಎಂದಿಗೂ ಕುಗ್ಗಿದವರಲ್ಲ. ಸಂತೃಪ್ತಿ ಸಮಾಧಾನಗಳನ್ನು ಒಂದೇ ಸೂತ್ರದಿಂದ ಬಂಧಿಸಿದ್ದ ನಿರ್ಲಿಪ್ತ ಚಿತ್ತವೃತ್ತಿಯೇ ಅವರ ದೇಹಾರೋಗ್ಯ ಮತ್ತು ಮನಃಶಕ್ತಿಯ ಮೂಲ.

ನಾಳೆ ಬಪ್ಪುದು ನಮಗಿಂದೇ ಬರಲಿ,

ಇಂದು ಬಪ್ಪುದು ನಮಗೀಗಲೆ ಬರಲಿ,

ಅದಕಾರಂಜುವರು, ಅದಕಾರಳಕುವರು

-ಎಂಬ ನಿಷ್ಠುರ ವರ್ತನೆಯ ಸರಳ ಜೀವನ ಅವರದು.

"ನನ್ನಿಂದ ನನ್ನ ನಾಡಿನ ಜನತೆಗೆ ಹೇಗೋ ಎಂತೋ ಕಿಂಚಿತ್ ಸೇವೆಯಾದರೆ ನನ್ನ ಬಾಳು ಸಾರ್ಥಕ. ಅದಕ್ಕಿಂತ ಹೆಚ್ಚಿನದೇನನ್ನೂ ನಾನು ಬಯಸುವುದಿಲ್ಲ."

-ಎಂದು ಅನೇಕ ಸಾರಿ ತಮ್ಮ ಆಪ್ತೇಷ್ಟರಿಗೆ ಹೇಳುತ್ತಿದ್ದುದುಂಟು.

## ರಚನಾತ್ಮಕ ಕಾರ್ಯ

ಕಾರಾಗೃಹದಿಂದ ಹೊರಬಂದ ನಿಜಲಿಂಗಪ್ಪನವರು ಕೆಲವು ದಿನಗಳ ವಿಶ್ರಾಂತಿಯನ್ನೂ ಬಯಸದೆ ಕಾಂಗ್ರೆಸ್ ಸಂಸ್ಥೆಯ ರಚನಾತ್ಮಕ ಕಾರ್ಯಗಳಲ್ಲಿ ಪ್ರವೃತ್ತರಾದರು. ಪ್ರಭುತ್ವದ ದಬ್ಬಾಳಿಕೆ ದೌರ್ಜನ್ಯಗಳ ಕಮ್ಮಟದಿಂದ ಹೊರಬಂದ ಮೇಲೆ ಕಾಂಗ್ರೆಸ್ ಸಂಸ್ಥೆಯ ಧ್ಯೇಯಾದರ್ಶಗಳು ಮತ್ತಷ್ಟು ಉಜ್ಜ್ವಲವಾಗಿ ಜನತೆಯ ಆದರಾಭಿಮಾನಗಳನ್ನು ಗಳಿಸಿತು. ನಿಜಲಿಂಗಪ್ಪನವರು ಜನಜೀವನ ದಲ್ಲಿ ಒಂದಾದರು. ದಬ್ಬಾಳಿಕೆಗೆ ಜಗ್ಗದ ಅವರನ್ನು ಆಮಿಷದ ಆಸೆ ತೋರಿಸಿ ಒಲಿಸಿಕೊಳ್ಳಲು ಪ್ರಯತ್ನಗಳು ನಡೆದವು. ಕಾಂಗ್ರೆಸ್ ಸಂಸ್ಥೆಯ ಧ್ಯೇಯಾದರ್ಶ, ತ್ಯಾಗನಿಷ್ಠೆಗಳನ್ನು ರಕ್ತಗತವಾಗಿ ಮಾಡಿಕೊಂಡಿದ್ದ ನಿಜಲಿಂಗಪ್ಪನವರು ಇಂತಹ ಸಮಯ ಸಾಧಕರ ಕಿವಿಮಾತುಗಳನ್ನು ಮುಗುಳುನಗೆಯಿಂದ ಕಡೆಗಣಿಸಿದರು. ತಮ್ಮ ಜೀವನದಲ್ಲಿ ನಿಜಲಿಂಗಪ್ಪನವರು ಇಂತಹ ಎಷ್ಟೋ ಸಂದರ್ಭ ಗಳನ್ನು ನಿರ್ಲಕ್ಷ್ಯದಿಂದ ಎದುರಿಸಿ ಜಯಶಾಲಿಗಳಾಗಿರುವ ರೆಂಬುನ್ನು ಅವರ ಸ್ನೇಹಿತರೆಲ್ಲರೂ ಬಲ್ಲರು.

ಈ ಸಮಯಕ್ಕೆ ಸರಿಯಾಗಿ ಮೈಸೂರು ಕಾಂಗ್ರೆಸ್ಸಿನ ಮೂರನೆಯ ಮಹಾಧಿವೇಶನ ಶಿವಮೊಗ್ಗದಲ್ಲಿ ನಡೆಯಿತು. ದಿವಂಗತ ಕೆ. ಟಿ. ಭಾಷ್ಯಂ ಅವರು ಅಧಿವೇಶನದ ಅಧ್ಯಕ್ಷರಾಗಿದ್ದರು. ಮಹದೇವ ದೇಸಾಯಿ ಅವರು ಅಧಿವೇಶನದ ಅಧ್ಯಕ್ಷರಾಗಿದ್ದರು. ಮಹದೇವ ದೇಸಾಯಿ ಅವರು ಸಂಸ್ಥಾನಾದ್ಯಂತ ಸಂಚಾರಮಾಡಿ ವರದಿಯೊಪ್ಪಿಸಿದ ಬಳಿಕ ಮಹಾತ್ಮಾಗಾಂಧಿಯವರು ಮೈಸೂರು ಕಾಂಗ್ರೆಸ್‌ಗೆ ಕಳುಹಿಸಿದ ಆದೇಶವೇ ಶಿವಮೊಗ್ಗೆಯ ಅಧಿವೇಶನದಲ್ಲಿ ಚರ್ಚಿಸಬೇಕಾದ ಮುಖ್ಯ ವಿಷಯವಾಗಿತ್ತು. ಸತ್ಯಾಗ್ರಹವನ್ನು ನಿಲ್ಲಿಸಿ ಮುಂದೆ ಬರಲಿದ್ದ ಚುನಾವಣೆಯಲ್ಲಿ ಮೈಸೂರು ಕಾಂಗ್ರೆಸ್ ಸ್ಪರ್ಧಿಸಿ ಘಟನಾತ್ಮಕ ಕಾರ್ಯಕ್ಕೆ ತೊಡಗಬೇಕೆಂಬ ಮಹಾತ್ಮರ ಸಲಹೆ ಅಧಿವೇಶನದಲ್ಲಿ ಅಂಗೀಕರಿಸಲ್ಪಟ್ಟು ನಿರ್ಣಯದ ರೂಪ ತಾಳಿತು.

## ಚುನಾವಣೆಯಲ್ಲಿ ವಿಜಯ

ಈ ವೇಳೆಗೆ ಮೈಸೂರು ಸುಧಾರಣಾ ಸಮಿತಿಯ ವರದಿ ಸಿದ್ಧವಾಗಿ ಸರ್ಕಾರದ ಕೈ ಸೇರಿತ್ತು.

ಸಮಿತಿಯಲ್ಲಿ ಮೈಸೂರು ಕಾಂಗ್ರೆಸ್‌ಗೆ ಪ್ರಾತಿನಿಧ್ಯವಿಲ್ಲದಿದ್ದರೂ ಸುಧಾರಣೆಗಳನ್ನು ಒಪ್ಪಿಕೊಳ್ಳದೆ ಗತ್ಯಂತರವಿರಲಿಲ್ಲ. ಶಿವಮೊಗ್ಗೆಯ ಮಹಾಧಿವೇಶನ ನಡೆದಾಗ ಕಾರಾಗೃಹದಲ್ಲಿದ್ದ ನಿಜಲಿಂಗಪ್ಪನವರು ಚುನಾವಣೆಯ ವೇಳೆಗೆ ಮುಕ್ತರಾಗಿ ಕಾಂಗ್ರೆಸ್‌ಪಾರ್ಲಿಮೆಂಟರಿ ಬೋರ್ಡಿನ ಪ್ರತಿನಿಧಿಯಾಗಿ ಸಂಸ್ಥಾನಾದ್ಯಂತ ಪ್ರವಾಸ ಮಾಡಿದರು. ಚುನಾವಣೆಯಲ್ಲಿ ಕಾಂಗ್ರೆಸ್ ಜಯ ಶಾಲಿಯಾಗಿ ಉಭಯ ಶಾಸನ ಸಭೆಗಳಲ್ಲಿ ಸಂಖ್ಯಾಬಲವನ್ನು ಪಡೆಯಿತಾದರೂ ಪ್ರಜಾಪ್ರಭುತ್ವ ತತ್ವಗಳಿಗನ್ವಯ ಮಂತ್ರಿಮಂಡಲ ರಚಿಸುವ ಅಧಿಕಾರವನ್ನು ಕಾಂಗ್ರೆಸ್‌ಗೆ ಕೊಡಲು ಮೈಸೂರು ಸರ್ಕಾರ ನಿರಾಕರಿಸಿತು.

ಈ ತರುವಾಯ ಚಿತ್ರದುರ್ಗ ಜಿಲ್ಲೆಯ ಹರಪುರ ಗ್ರಾಮದಲ್ಲಿ ನಡೆದ ಮೈಸೂರು ಕಾಂಗ್ರೆಸ್‌ನ ನಾಲ್ಕನೆಯ ಮಹಾಧಿವೇಶನದ ಸಿದ್ಧತೆಯ ಹೊಣೆ ಸ್ವಾಗತಾಧ್ಯಕ್ಷರಾಗಿದ್ದ ನಿಜಲಿಂಗಪ್ಪನವರ ಮೇಲೆ ಬಿದ್ದಿತು. ಕರ್ನಾಟಕದ ಉಕ್ಕಿನ ಮನುಷ್ಯರೆಂದು ಹೆಸರಾಗಿದ್ದ ದಿವಂಗತ ಎಚ್. ಸಿದ್ಧಯ್ಯನವರು ಅಧ್ಯಕ್ಷರಾಗಿದ್ದ ಈ ಮಹಾಧಿವೇಶನದ ವಿಶೇಷವೆಂದರೆ ಅಖಿಲ ಭಾರತ ಕಾಂಗ್ರೆಸ್‌ನ ಪ್ರತಿನಿಧಿಯಾಗಿ ದಿವಂಗತದ ಬಾಬೂ ರಾಜೇಂದ್ರ ಪ್ರಸಾದರು ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದುದು. ಅವರು ಮಹಾತ್ಮ ಗಾಂಧಿಯವರ ಸಂದೇಶವನ್ನು ಸಭೆಯಲ್ಲಿ ಓದಿ ಮುಂದೆ ಮೈಸೂರು ಕಾಂಗ್ರೆಸ್ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದೂ, ಇದರಿಂದ ಕಾಂಗ್ರೆಸ್ ಮತ್ತು ಜನತೆ ನಡುವೆ ನಿಕಟ ಸಂಪರ್ಕ ಏರ್ಪಡುವುದೆಂದೂ ಸಲಹೆ ಮಾಡಿದರು.

**ಕರ್ನಾಟಕದ ವಿನೋಬಾ**

ಈ ಸಮ್ಮೇಳನಕ್ಕೆ ದೊರಕಿದ ಯಶಸ್ಸು ನಿಜಲಿಂಗಪ್ಪನವರಿಗೆ ಸ್ಫೂರ್ತಿದಾಯಕವಾಯಿತು. ಜನರ ಮೇಲೆ ಅವರ ಪ್ರಭಾವ ನೂರ್ಮಡಿಯಾಗಿ ಬೆಳೆಯಿತು. ಮಹಾಧಿವೇಶನದ ಸಭಾಂಗಣಕ್ಕೆ ಅವರ ಹೆಸರಿಟ್ಟಿದುದರ ಔಚಿತ್ಯವನ್ನು ಉಲ್ಲೇಖಿಸಿ ಜನಪ್ರಿಯ ವಾರಪತ್ರಿಕೆಯಾದ 'ಪ್ರಜಾಮತ' ಈ ರೀತಿ ಬರೆಯಿತು:

"ಅಪಾರವಾದ ವಿದ್ವತ್ತು, ಅಪ್ರತಿಮವಾದ ಸತ್ಯ ಪ್ರೇಮ, ವಿಶಾಲವಾದ ಅಂತಃಕರಣ, ಎಲೆಯ ಮರೆಯ ಕಾಯಂತಿದ್ದು ಜನತೆಯ ಹಿತಕ್ಕಾಗಿ ನಿರಂತರವಾಗಿ ದುಡಿಯುವ ಸೇವಾ ಬುದ್ಧಿ ಇವು ವಿನೋಬಾರವರ ಗುಣಗಳು ನಮ್ಮ ಮೈಸೂರು ನಾಯಕ ವರ್ಗದ ಕಡೆ ತಿರುಗಿದರೆ ಅಲ್ಲಿ ಕೂಡಾ ವಿನೋಬಾ ವ್ಯಕ್ತಿತ್ವದ ಪ್ರತಿಬಿಂಬದಂತೆ ಕಾಣುವ ವ್ಯಕ್ತಿಯೊಬ್ಬರಿದ್ದಾರೆ. ಶ್ರೀ ನಿಜಲಿಂಗಪ್ಪನವರನ್ನು ವ್ಯಕ್ತಿಶಃ ಬಲ್ಲವರೆಲ್ಲರೂ ಮೇಲೆ ಹೇಳಿದ ಉಪಮಾನದ ಸಹಜತೆಯನ್ನು ಮನಗಾಣಬಲ್ಲರು. ಸರಳ ಜೀವನ, ನಿಷ್ಕಾಮ ಕರ್ಮ, ಅಮಿತ ಸೇವಾಶಕ್ತಿ, ಇವು ನಿಜಲಿಂಗಪ್ಪನವರ ಹುಟ್ಟುಗುಣಗಳು."

ಇಂದಿಗೂ ಕಾಲು ಶತಮಾನದ ರಾಜಕೀಯ ಜೀವನದ ಏಳು ಬೀಳು, ಪುರಸ್ಕಾರ ತಿರಸ್ಕಾರಗಳನ್ನು ಅನುಭವಿಸಿದ ಅನಂತರವೂ ಈ ಉಪಮಾನದ ವಾಸ್ತವತೆ ಔಚಿತ್ಯಗಳಲ್ಲಿ ಅಣುಮಾತ್ರವೂ ಲೋಪವಾಗಿಲ್ಲವೆಂಬುದು ನಿಜಲಿಂಗಪ್ಪನವರ ಉಜ್ಜ್ವಲವ್ಯಕ್ತಿತ್ವ ಅಂತಃಶಕ್ತಿಗಳಿಗೆ ನಿದರ್ಶನವಾಗಿರುತ್ತದೆ.

ನಾಲ್ಕನೆಯ ಮಹಾಧಿವೇಶನ ಅನಂತರ ನಿಜಲಿಂಗಪ್ಪನವರು ರಚನಾತ್ಮಕ ಕಾರ್ಯಗಳನ್ನು ಕೈಗೊಂಡರು. ಇದರ ಫಲವಾಗಿ ಅಖಿಲ ಮೈಸೂರು ನೂಲುವವರ ಸಂಘ ಸ್ಥಾಪಿಸಲ್ಪಟ್ಟಿತು.

ಈ ಮಧ್ಯೆ ದ್ವಿತೀಯ ಮಹಾಯುದ್ಧದ ಬಿಸಿ ಭಾರತವನ್ನೂ ಮುಟ್ಟಿತ್ತು. ಒಂದು ಕಡೆ ಜಪಾನಿನ ಭಯ, ಇನ್ನೊಂದುಕಡೆ ಯುದ್ಧದಲ್ಲಿ ಜರ್ಮನಿಯ ಮುನ್ನಡೆ, ಈ ಎರಡೂ ಆಘಾತಗಳಿಂದ ಬ್ರಿಟಿಷ್ ಸಾಮ್ರಾಜ್ಯದ ಅಸ್ತಿಭಾರ ಕುಸಿಯಿತು. ಸ್ವಾತಂತ್ರ್ಯ ಕೊಟ್ಟರೆ ಮಾತ್ರವೇ ಬ್ರಿಟಿಷರಿಗೆ ನೆರವು ನೀಡುವುದಾಗಿ ಅಖಿಲ ಭಾರತ ಕಾಂಗ್ರೆಸ್ ಘೋಷಿಸಿತ್ತು. ಪ್ರಾಂತ್ಯಗಳಲ್ಲಿ ಸ್ಥಾಪಿತವಾಗಿದ್ದ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಕೊಟ್ಟಿದ್ದವು.

### "ಕ್ವಿಟ್ ಇಂಡಿಯಾ" ಚಳುವಳಿ

ಇಂತಹ ಅನಿಶ್ಚಿತ ವಾತಾವರಣದಲ್ಲಿ ಮೈಸೂರು ಕಾಂಗ್ರೆಸ್‌ನ ಐದನೆಯ ಮಹಾಧಿವೇಶನ ೧೯೪೨ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ಶ್ರೀ ಟಿ. ಸುಬ್ರಹ್ಮಣ್ಯಂ ಇವರ ಅಧ್ಯಕ್ಷತೆಯಲ್ಲಿ ಸೇರಿ ಅಖಿಲ ಭಾರತ ಕಾಂಗ್ರೆಸ್ ನಿಲುವನ್ನು ಸಮರ್ಥಿಸಿ ಅದರಂತೆ ನಡೆಯಲು ನಿರ್ಧರಿಸಿತು. ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ಅಖಿಲ ಭಾರತ ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿಯು ೧೯೪೨ನೇ ಇಸವಿಯ ಆಗಸ್ಟ್ ತಿಂಗಳಲ್ಲಿ ಬೊಂಬಾಯಿ ನಗರದಲ್ಲಿ ಸಭೆ ಸೇರಿತು. ಸ್ವತಃ ಗಾಂಧೀಜಿಯವರು ಉಪಸ್ಥಿತಿರಿದ್ದ ಈ ಸಭೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಕೊನೆಯ ಎಚ್ಚರಿಕೆ ನೀಡಿ ಬ್ರಿಟಿಷರನ್ನು ಭಾರತದಿಂದ ಹೊರದೂಡುವ 'ಕ್ವಿಟ್ ಇಂಡಿಯಾ' ನಿರ್ಣಯ ಅಂಗೀಕರಿಸಲ್ಪಟ್ಟಿತು. ಐತಿಹಾಸಿಕ ಸಭೆಗೆ ಮೈಸೂರು ಕಾಂಗ್ರೆಸ್ಸಿನ ಪ್ರತಿನಿಧಿಗಳಾಗಿ ತೆರಳಿದ್ದ ನಾಯಕರಲ್ಲಿ ನಿಜಲಿಂಗಪ್ಪನವರು ಒಬ್ಬರು. ನಿರ್ಣಯವನ್ನು ಕಾರ್ಯಗತ ಮಾಡಲು ಮೈಸೂರಿಗೆ ಹಿಂತಿರುಗುತ್ತಿದ್ದಾಗ ರಾಜ್ಯದ ಗಡಿಯಲ್ಲಿ ಅವರನ್ನು ದಸ್ತಗಿರಿ ಮಾಡಿ ವಿಚಾರಣೆ ನಡೆಸದೆ ಸ್ಥಾನಬದ್ಧತೆಯಲ್ಲಿ ಇಡಲಾಯಿತು. ಎರಡು ವರ್ಷಗಳ ಕಾರಾಗೃಹವಾಸದಲ್ಲಿಟ್ಟು ಸರ್ಕಾರ ಅವರನ್ನು ೧೯೪೪ರಲ್ಲಿ ಬಿಡುಗಡೆ ಮಾಡಿತು.

ಆ ವೇಳೆಗೆ ಸಂಗ್ರಾಮ ಆಂದೋಳನಗಳಿಂದ ಜರ್ಝರಿತ ವಾಗಿದ್ದ ಬ್ರಿಟಿಷ್ ಸರ್ಕಾರ ಸಂಧಾನಕ್ಕಿಳಿದು ಕಾಂಗ್ರೆಸ್ ನಾಯಕರೊಡನೆ ಭಾರತದ ಭವಿಷ್ಯವನ್ನು ಕುರಿತು ಚರ್ಚಿಸಲು ಸಭೆ ನಡೆಸಿತು. ಸಂಪೂರ್ಣ ಸ್ವಾತಂತ್ರ್ಯದ ಬೇಡಿಕೆಯನ್ನು ಕಾಂಗ್ರೆಸ್ ನಾಯಕರು ಸರ್ಕಾರದ ಮುಂದಿಟ್ಟರು. ಇಂಗ್ಲೆಂಡಿನಲ್ಲಿ ಲೇಬರ್ ಸರ್ಕಾರದ ರಚನೆಯಿಂದ ಈ ಬೇಡಿಕೆಗೆ ಉತ್ತೇಜನ ಸಿಕ್ಕಿತು.

### ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿ

ಈ ಮಧ್ಯೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಶ್ರೀ ಟಿ. ಸುಬ್ರಮ್ಮಣ್ಯಂ ಅವರ ಅಧಿಕಾರಾವಧಿ ಮುಗಿದು ನಿವೃತ್ತರಾದರು. ಶ್ರೀಗಳಾದ ಟಿ. ಸಿದ್ಧಲಿಂಗಯ್ಯ, ಎಚ್. ಸಿ. ದಾಸಪ್ಪ, ಕೆ. ಟಿ. ಭಾಷ್ಯಂ, ಎಚ್.ಸಿದ್ಧಯ್ಯ, ಟಿ. ಸುಬ್ರಹ್ಮಣ್ಯಂ, ಈ ಮಹನೀಯರ ನೇತೃತ್ವದಲ್ಲಿ ನಡೆದು ಬಂದ ಮೈಸೂರು ಕಾಂಗ್ರೆಸ್‌ನ ಅಧ್ಯಕ್ಷ ಪೀಠಕ್ಕೆ ಶ್ರೀ ನಿಜಲಿಂಗಪ್ಪನವರು ಆರನೆಯ ಅಧ್ಯಕ್ಷರಾಗಿ ಆಯ್ಕೆ ಆದದ್ದು ಅವರ ಕರ್ತವ್ಯನಿಷ್ಠೆ. ಜನತೆಯಲ್ಲಿ ಅವರು ಗಳಿಸಿಕೊಂಡಿದ್ದ ವಿಶ್ವಾಸ ಗೌರವಗಳ ಅಮೋಘ ನಿದರ್ಶನವಾಗಿದೆ.

ನಡೆಸಿದರು. ಪ್ರಧಾನಿಯನ್ನು ಪದಚ್ಯುತಗೊಳಿಸುವ ತಂತ್ರ ಹೂಡಿದ್ದರೆಂದು ಆಪಾದಿಸಿದರು. ಈ ಪತ್ರದಲ್ಲಿನ ಸಂದೇಹಗಳಿಗೆ ಕಾಂಗ್ರೆಸ್ ಅಧ್ಯಕ್ಷರ ಸಮಾಧಾನವನ್ನೂ ಕಾಯದೆ, ಅದನ್ನು ಪತ್ರಿಕೆಗಳಲ್ಲಿ ಪ್ರಕಟಣೆಗೆ ಕೊಟ್ಟರು.

ಕಾಂಗ್ರೆಸ್ ಅಧ್ಯಕ್ಷರು ಈ ಆರೋಪಗಳನ್ನು ತೀವ್ರವಾಗಿ ಅಲ್ಲಗಳೆದರು. ಮಧ್ಯಾಹ್ನದ ವೇಳೆ ತನ್ನನ್ನು ಭೇಟಿಯಾಗಿದ್ದ ಈ ಇಬ್ಬರು ಸಚಿವರು, ತಮಗಿದ್ದ ಸಂದೇಹದ ಬಗೆಗೆ ಮುಖತಃ ಮಾತನಾಡದೆ ಸಂಜೆಯ ವೇಳೆಗೆ ಇಂಥ ಆಪಾದನೆ ಸೃಷ್ಟಿಸಿ ರಾತ್ರಿ ಪತ್ರ ಬರೆದ ನೀತಿಯನ್ನು ಶ್ರೀ ನಿಜಲಿಂಗಪ್ಪನವರು ಪ್ರಶ್ನಿಸಿದ್ದರು. ಇಂಥ ಸಂದೇಹಗಳಿದ್ದರೆ ಪರಸ್ಪರ ಮಾತನಾಡಲು ತಾವು ಸದಾ ಸಿದ್ಧವಾಗಿದ್ದರೂ, ಆ ಬಗೆಗೆ ಪ್ರಶ್ನಿಸಿದೆ ಪತ್ರ ವ್ಯವಹಾರ ನಡೆಸಿ, ಪತ್ರಿಕೆಗಳಲ್ಲಿ ಪ್ರಕಟಿಸುವ ಬಗೆಗೆ ತನ್ನ ವಿಷಾದ ವ್ಯಕ್ತಪಡಿಸಿ ಶ್ರೀ ನಿಜಲಿಂಗಪ್ಪನವರು ಪ್ರಧಾನಿ ಇಂದಿರಾ ಗಾಂಧಿಯವರಿಗೂ ಉತ್ತರಿಸಿದರು.

### ಶಿಸ್ತು ಭಂಗ

ಪತ್ರದಿಂದ ಆಗಬೇಕಾದ ಅನಾಹುತ ಆಯಿತು. ಕಾಂಗ್ರೆಸ್ಸಿನಗರ ಮತ್ತು ಜನತೆಯ ಮನಸ್ಸಿನಲ್ಲಿ ಕಾಂಗ್ರೆಸ್ ಅಧ್ಯಕ್ಷರ ಬಗೆಗೆ ತಪ್ಪು ಅಭಿಪ್ರಾಯ ಕಲ್ಪಿಸುವ ಪ್ರಯತ್ನವಾಯಿತು. ಅಧ್ಯಕ್ಷರ ಉತ್ತರವನ್ನು ಲೆಕ್ಕಿಸದೆ ಪುನಃ ಇಬ್ಬರು ಮಂತ್ರಿಗಳು ಪತ್ರ ಬರೆದರು. ಇನ್ನಷ್ಟು ಸಂದೇಹ ಬೆಳೆಯುವಂತೆ ಹೊಸ ಅಂಶಗಳನ್ನು ಚಿತ್ರಿಸಿದರು. ಸಮಾಜವಾದೀ ಧ್ಯೇಯ ವಿರೋಧಿಸುವ ಪಕ್ಷಗಳೊಡನೆ ಸೇರಿಕೊಂಡು ಪ್ರಧಾನಿಯ ಪದಚ್ಯುತಿಗಾಗಿ ಯತ್ನಿಸುತ್ತಿದ್ದಾರೆಂಬ ಆರೋಪವನ್ನು ಶ್ರೀ ನಿಜಲಿಂಗಪ್ಪನವರ ಮೇಲೆ ಹೊರಿಸಿದರು. ಕಾಂಗ್ರೆಸ್ ಸದಸ್ಯರು ಈ ದೃಷ್ಟಿಯಿಂದ ತಮ್ಮ ಮನಸ್ಸಾಕ್ಷಿಗೆ ತಕ್ಕಂತೆ ಮತ ನೀಡಲು ಹಕ್ಕುಳ್ಳವರಾಗಿದ್ದಾರೆ ಎಂದೂ ಸಾರಿದರು. ಹಾಗೂ ಈ ಮೂಲಕ ತಮ್ಮ ಪತ್ರಗಳ ಗುರಿಯನ್ನು ಸೂಚಿಸಿದರು.

ಕಾಂಗ್ರೆಸ್ ಸದಸ್ಯರ ವಿಭಜನೆಯ ಕಾರ್ಯ ಈಗ ತೀವ್ರ ಗತಿಯಿಂದ ಸಾಗಿತು. ಪ್ರತಿ ರಾಜ್ಯದಲ್ಲೂ ವಿರೋಧ ಪಕ್ಷಗಳ ಅಭ್ಯರ್ಥಿಗೆ ಮತ ಸಂಗ್ರಹಿಸುವ ಪ್ರಯತ್ನ ನಡೆಯಿತು.

ಶ್ರೀ ನಿಜಲಿಂಗಪ್ಪವರು ಆಪಾದನೆಗಳನ್ನು ಉತ್ತರಿಸುತ್ತ "ಕಾಂಗ್ರೆಸ್ ಪಾರ್ಲಿಮೆಂಟರಿ ಪಕ್ಷದ ಸಭೆಯ ಆದೇಶದಂತೆ ಇತರ ಪಕ್ಷಗಳೊಡನೆ ಮಾತುಕತೆ ನಡೆಸಿದೆ. ಈ ಸಭೆಯಲ್ಲಿ ಪ್ರಧಾನಿ, ಶ್ರೀ ಅಹಮದ್ ಮತ್ತು ಶ್ರೀ ಜಗಜೀವನರಾಂ ಇದ್ದರು. ರಾಷ್ಟ್ರಾಧ್ಯಕ್ಷ ಚುನಾವಣೆ ವಿಚಾರದಲ್ಲಿ ಈ ಮಾತು ಕತೆಗಳು ನಡೆದಿವೆ" ಎಂದರು. ಶ್ರೀಮತಿ ಇಂದಿರಾ ಗಾಂಧಿಯವರೂ ಕೂಡ, ಈ ವಿಚಾರದಲ್ಲಿ ವಿವಿಧ ವಿರೋಧ ಪಕ್ಷಗಳೊಡನೆ ಮಾತುಕತೆ ನಡೆಸಿದುದಾಗಿ ಒಪ್ಪಿದ್ದಾರೆ. ಹೆಚ್ಚು ಕಡಿಮೆ ಎಲ್ಲ ಪಕ್ಷಗಳಿಗೂ ಒಪ್ಪಿತವಾಗುವ ವ್ಯಕ್ತಿಯನ್ನು ರಾಷ್ಟ್ರಾಧ್ಯಕ್ಷರನ್ನಾಗಿ ಆಯ್ಕೆ ಮಾಡುವ ಬಗೆಗೆ ತಾನು ವಿವಿಧ ರಾಜಕೀಯ ಪಕ್ಷಗಳೊಂದಿಗೆ ಸಮಾಲೋಚನೆ ನಡೆಸಿದುದಾಗಿ ಅವರು ಆಗಸ್ಟ್ ೧೫ರ ಪತ್ರದಲ್ಲಿ ತಿಳಿಸಿದರು.

ಒಂದೇ ವಿಷಯದ ಬಗೆಗೆ ಶ್ರೀ ನಿಜಲಿಂಗಪ್ಪನವರೂ, ಶ್ರೀಮತಿ ಇಂದಿರಾ ಗಾಂಧಿಯವರು ವಿವಿಧ ರಾಜಕೀಯ ಪಕ್ಷಗಳೊಡನೆ ಮಾತುಕತೆ ನಡೆಸಿದ್ದಾರೆ ಎಂದಾಯಿತು. ಇಬ್ಬರೂ ಕಾಂಗ್ರೆಸ್

ನಾಯಕರು. ಒಬ್ಬರು ಸಂಸ್ಥೆಯ ಅಧ್ಯಕ್ಷ ಇನ್ನೊಬ್ಬರು ದೇಶದ ಪ್ರಧಾನಿ. ಹೀಗಿರುವಾಗ ಒಬ್ಬರು ನಡೆಸಿದ ಮಾತುಕತೆ ಉಚಿತವಾಗಿ ಇನ್ನೊಬ್ಬರು ನಡೆಸಿದ ಮಾತುಕತೆ ಅನುಚಿತ ವಾಗುವುದು ಹೇಗೆ? ಶ್ರೀ ನಿಜಲಿಂಗಪ್ಪನವರು ಮಾತುಕತೆ ನಡೆಸುವಂತೆ ಸೂಚಿಸಿದವರೇ ಅವರು. ಹಾಗೆ ಮಾಡಿದಾಗ ಆರೋಪಿಸುವುದರಲ್ಲಿ ಅರ್ಥವಿದೆಯೆ? ಎಲ್ಲರಿಗೂ ಒಪ್ಪಿಗೆ ಯಾಗುವ ಅಭ್ಯರ್ಥಿ ಬೆಂಬಲ ನೀಡುವ ಬಗೆಗೆ ಶ್ರೀ ನಿಜಲಿಂಗಪ್ಪನವರು ಮಾತನಾಡಿದರು. ಇಷ್ಟೇ ಅಂತರ ಎಂತಲೇ ಈ ವಾದ ಹುರುಳಿಲ್ಲದ್ದು. ಅಷ್ಟೇ ಅಲ್ಲ. ಕಾಂಗ್ರೆಸ್ಸಿನಲ್ಲಿ ಭಿನ್ನತೆ ಹರಡಿದ ಬಳಿಕ ತಮ್ಮ ಆರೋಪ ನಿಜವಲ್ಲ ಎಂಬುದನ್ನು ಆರೋಪ ಹೊರಿಸಿದ ಮಂತ್ರಿಗಳೇ ಹೇಳಿದ್ದಾರೆ.

**ಕುತಂತ್ರಕ್ಕೆ ವಿಜಯ**

ಕಾಂಗ್ರೆಸ್ ಅಧ್ಯಕ್ಷರ ಮೇಲೆ ಕೋಮುವಾದಿ ಮತ್ತು ಪ್ರತಿಗಾಮಿ ಪಕ್ಷಗಳ ಬೆಂಬಲಗಳಿಸುತ್ತಾರೆಂಬ ಆಪಾದನೆ ಹೊರಿಸಿದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಯಾರ ಬೆಂಬಲ ಗಳಿಸಿದರು? ಕಾಂಗ್ರೆಸ್ಸಿನ ಧ್ಯೇಯ ವಿರೋಧಿಸುವ ಕಮ್ಯುನಿಸ್ಟರು. ಎರಡು ದೇಶ ಬಯಸುವ ಜಾತೀವಾದಿ ಮುಸ್ಲಿಂ ಲೀಗ್, ಪ್ರತ್ಯೇಕ್ಯತೆಯೇ ಮಂತ್ರವಾದ ಡಿ. ಎಂ. ಕೆ., ಸೀಖರ ಪ್ರತ್ಯೇಕ ರಾಜ್ಯ ಬೇಡುವ ಅಕಾಲಿದಳ, ಹೀಗೇ ದೇಶವನ್ನು ಹುಡಿಗೂಡಿ ಪ್ರಜಾಸತ್ತೆ ಅಳಿಸಬಯಸುವ ಪಕ್ಷಗಳಲ್ಲವೆ?

**ಅಂತೂ ಆಗಬೇಕಾದುದು ಆಯಿತು.**

ವಿರೋಧ ಪಕ್ಷಗಳ ಅಭ್ಯರ್ಥಿ ರಾಷ್ಟ್ರದ ಅಧ್ಯಕ್ಷರಾಗಿ ಆಯ್ಕೆಯಾದರು. ಕಾಂಗ್ರೆಸ್ ಅಭ್ಯರ್ತಿಯು ಸೋತರು. ಕಾಂಗ್ರೆಸ್ಸಿನ ಶಿಸ್ತು ಅಳಿದು, ಸಂಸ್ಥೆಯಲ್ಲಿ ಎರಡು ಬಣಗಳಾದವು. ಈ ತನ್ನ ಬೆಂಬಲವನ್ನು ಬೆಳೆಸಿ ಬಲಪಡಿಸಲು ಪ್ರಧಾನಿ ಮುಂದಾದರು.

**ಸ್ನೇಹಕ್ಕೆ ದ್ವೇಷ**

ಆದರೂ, ಕಾಂಗ್ರೆಸ್ ಅಧ್ಯಕ್ಷರು ತಾಳ್ಮೆಗೆಡಲಿಲ್ಲ. ಆಗಿಹೋದ ತಪ್ಪನ್ನು ಮರೆತರು. ಸೌಹಾರ್ದ ಸಾಧಿಸಲು ಶ್ರಮಿಸಿದರು. ಬಿರುಕು ಬಿದ್ದ ಮಹಾಸಂಸ್ಥೆಯ ಬಿರುಕು ಮುಚ್ಚಲು ಪ್ರಧಾನಿಯನ್ನು ವಿನಂತಿಸಿದರು.

ತಾತ್ತ್ವಿಕ ದೃಷ್ಟಿಯಿಲ್ಲದೆ, ಯಾವುದೋ ಬಯಕೆಯಿಂದ, ವೈಯಕ್ತಿಕ ಸೆಳೆತಕ್ಕೆ ಬಲಿಯಾಗಿ ಪ್ರಧಾನಿಯನ್ನು ಬೆಂಬಲಿಸಿದವರು ಈಗ ತಮ್ಮ ಒತ್ತಾಯ ಹೇರಿದರು. ಐಕ್ಯ ಸಾಧಿಸಲು ಅವಕಾಶ ಕೊಡಲಾರೆವು ಎಂದು ಕಮ್ಯುನಿಸ್ಟ್ ನಾಯಕರು ಸಾರಿದರು. ಐಕ್ಯ ಸಾಧಿತವಾದರೆ ತಮ್ಮ ಆ ಶಿಸ್ತು ಬಯಲಾಗುತ್ತದೆಂದುಕೊಂಡು ಪ್ರಧಾನಿಗೆ ಬೆಂಬಲ ನೀಡಿದವರು ಕಾರ್ಯನಿರತರಾದರು. ಕಾಂಗ್ರೆಸ್ ಅಭ್ಯರ್ಥಿಯನ್ನು ಸೋಲಿಸಿದ, ಜನತೆಯ ಹೊಗಳಿಕೆ ಪಡೆದ ಪ್ರಧಾನಿ. ಹೊಗಳಿಕೆಯ ಹೊನ್ನ ಶೂಲವೇರಿದರು. ತಾನೇ ಸರಿ, ತನ್ನ ಹಾದಿಯೇ ಸರಿ ಎಂದು ಕೊಂಡರು. ಬಿರುಕು ಬೆಳೆಸಲು, ಸೌಹಾರ್ದ ಅಳಿಸಲು ಯತ್ನಿಸಿದರು.

ಕಾಂಗ್ರೆಸ್ ಅಧ್ಯಕ್ಷ ಶ್ರೀ ನಿಜಲಿಂಗಪ್ಪನವರ ವಿರುದ್ಧ ಅವಿಶ್ವಾಸ ಗೊತ್ತುವಳಿ ಪ್ರಕಟಿಸಲು

ಎ.ಐ.ಸಿ.ಸಿ ಸಭೆ ಕರೆಯ ಬೇಕೆಂಬ ಮನವಿಗೆ ಸಹಿ ಸಂಗ್ರಹಿಸಲಾಯಿತು. ಪ್ರಧಾನಿಯವರ ಸೂಚನೆಯಂತೆ, ಅವರ ಬೆಂಬಲಿಗರು ದೇಶಾದ್ಯಂತ ಸಂಚರಿಸಿ ಸಹಿ ಸಂಗ್ರಹಿಸಿದರು. ಆದರೂ, ಕಾಂಗ್ರೆಸ್ ಅಧ್ಯಕ್ಷರು ಬಿಕ್ಕಟ್ಟು ನಿವಾರಿಸಲು ಪ್ರಧಾನಿಯ ಮನೆ ಬಾಗಿಲಿಗೂ ಹೋದರು. ವಾಸ್ತವವಾಗೇ ಮಾತುಕತೆ ಮುರಿದುಬಿತ್ತು. ಎ.ಐ.ಸಿ.ಸಿ. ಸಭೆ ಕರೆಯಲೇಬೇಕೆಂಬ ಒತ್ತಾಯ ಬಲವಾಯಿತು.

ಈ ಹಿನ್ನೆಲೆಯಲ್ಲಿ ಸೇರಿದ ಕಾಂಗ್ರೆಸ್ ಕಾರ್ಯ ಸಮಿತಿ, ಅದುವರೆಗಿನ ಘಟನೆಗಳನ್ನೆಲ್ಲ ಕೂಲಂಕಷವಾಗಿ ಪರಿಶೀಲಿಸಿತು. ಕೇವಲ ವೈಯಕ್ತಿಕ ದೃಷ್ಟಿಯಿಂದ ಸಂಸ್ಥೆಯನ್ನು ವಿಭಜಿಸಿ, ಸಂಸ್ಥೆಯ ಅಧ್ಯಕ್ಷರಾದಿಯಾಗಿ ಎಲ್ಲ ನಿಷ್ಠಾವಂತರ ಮೇಲೂ ಆರೋಪ ಹೊರಿಸಿ ಬಿಕ್ಕಟ್ಟು ತಂದ ಪ್ರಧಾನಿಯನ್ನು ಕಾಂಗ್ರೆಸ್ ಸಂಸ್ಥೆಯಿಂದ ವಜಾ ಮಾಡಲಾಯಿತು. ಈ ಸಭೆಗೆ ಆಮಂತ್ರಣವಿದ್ದರೂ ಕೂಡ ಪ್ರಧಾನಿ ಮತ್ತು ಅವರ ಬೆಂಬಲಿಗರು ಬಾರದೆ ಸಭೆ ನಡೆಸಿ ತಮ್ಮ ಬೆಂಬಲಿಗ ಎ.ಐ.ಸಿ.ಸಿ. ಸದಸ್ಯರ ಸಭೆ ಕರೆಯಲು ನಿರ್ಧರಿಸಿದರು.

**ಕುರುಕ್ಷೇತ್ರದ ಬಯಕೆ**

ಇದುವರೆಗೂ ಅಖಂಡವಾಗಿದ್ದ ಕಾಂಗ್ರೆಸ್ ಮಹಾ ಸಂಸ್ಥೆಯನ್ನು ಎರಡು ಹೋಳಾಗಿ ಮಾಡುವ ಕಾರ್ಯದಲ್ಲಿ ಪ್ರಧಾನಿ ಇಂದಿರಾ ಗಾಂಧಿಯವರು ಸಫಲರಾದರು. ಆಡಳಿತೆಗೆ ಬೆಂಬಲ ನೀಡುವ ಆಡಳಿತ ಕಾಂಗ್ರೆಸ್ ರಚಿಸಿಕೊಂಡರು.

ಈ ಹಿನ್ನೆಲೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ನಾಯಕರಿಗೆ ಸಂಸ್ಥೆಯ ಏಕತೆ ಉಳಿಸುವ ಬೇರೆ ಹಾದಿಯೇ ಇಲ್ಲವಾಯಿತು. ಮಾತೃಸಂಸ್ಥೆಯ ಬಗೆಗೆ ನಿಷ್ಠಾವಂತರಾದ ಸಂಸತ್ ಸದಸ್ಯರು. ಲೋಕ ಸಭೆಯಲ್ಲೂ ರಾಜ್ಯ ಸಭೆಯಲ್ಲೂ ವಿರೋಧ ಪಕ್ಷವಾಗಿ ಕುಳಿತುಕೊಳ್ಳಬೇಕಾಯಿತು. ಹಾಗೆಯೇ ಸಂಸ್ಥೆಗೆ ವಿಧೇಯ ರಾಗಿದ್ದವರು ಅಹಮದಾಬಾದ್‌ನಲ್ಲಿ ಪ್ರತ್ಯೇಕ ಅಧಿವೇಶನವನ್ನು ನಡೆಸಬೇಕಾಯಿತು.

ಇದು ಬೆಂಗಳೂರಿನಿಂದ - ಅಹಮದಾಬಾದ್ ವರೆಗಿನ ದುರಂತ ಕಥೆ.

ಕಾಂಗ್ರೆಸ್ ಇಬ್ಭಾಗವಾದ ಈ ಮಹಾನ್ ದುರಂತದಲ್ಲಿ ಶ್ರೀ ನಿಜಲಿಂಗಪ್ಪನವರ ಪಾತ್ರ ಪ್ರಾಂಸಗಿಕವೂ ತಾತ್ಕಾಲಿಕ ಪರಿಸ್ಥಿತಿಯ ದೃಷ್ಟಿಯಿಂದ ಅನಿವಾರ್ಯವೂ ಆಗಿತ್ತೆಂಬುದನ್ನು ಸ್ಪಷ್ಟಪಡಿಸಲು ಈ ದೀರ್ಘ ಉಲ್ಲೇಖ ಅಗತ್ಯವಾಯಿತು. ಆಗ ಅವರು ಭಾರತದ ಅತ್ಯಂತ ಪ್ರಭಾವಶಾಲಿ ಮಹಾಸಂಸ್ಥೆಯ ಅಧ್ಯಕ್ಷ ಸ್ಥಾನದಲ್ಲಿದ್ದರು. ಸಂಸ್ಥೆಯ ಗೌರವ ಪ್ರತಿಷ್ಠೆಗಳನ್ನು ರಕ್ಷಿಸಿಕೊಳ್ಳುವುದು, ಸಂಸ್ಥೆಯ ಮುಖ್ಯ ತತ್ವಗಳಿಗೆ, ಶಿಸ್ತಿಗೆ ಚ್ಯುತಿಬಾರದಂತೆ ನೋಡಿಕೊಳ್ಳುವುದು, ಪ್ರತಿಪಕ್ಷಗಳ ಹಾಗೂ ಜನ ಸಮುದಾಯದ ದೃಷ್ಟಿಯಲ್ಲಿ ಸಂಸ್ಥೆ ಹಾಸ್ಯಾಸ್ಪದವಾಗದಂತೆ ಎಚ್ಚರವಹಿಸುವುದು ಅವರ ಆದ್ಯ ಕರ್ತವ್ಯವಾಗಿತ್ತು. ಪ್ರಬಲ ವಿರೋಧದ ಅವಿಶ್ರಾಂತ ಅಪಪ್ರಚಾರದ, ಅಧಿಕಾರಲಾಭದ ಸ್ವೇಚ್ಛಾ ಪ್ರವೃತ್ತಿಯ ಎದುರಿನಲ್ಲಿ, ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕಾಗಿತ್ತು. ಈ ಸಂದರ್ಭದಲ್ಲಿ ಅವರ ತತ್ತ್ವನಿಷ್ಠೆ, ಪ್ರಾಮಾಣಿಕತೆ ಮತ್ತು ಸ್ಥೈರ್ಯ ಧೈರ್ಯಗಳು ಪ್ರಶಂಸಾರ್ಹವಾಗಿದ್ದವು. ಒಡಕನ್ನು ತಪ್ಪಿಸಲು ಕೊನೆಯವರೆಗೆ ಪ್ರಯತ್ನಿಸಿದರಾದರೂ ಕಾಂಗ್ರೆಸ್ ಸಂಸ್ಥೆಯ ಮೇಲೆ ಕಮ್ಯುನಿಸ್ಟರು ಬೆಳಸಿಕೊಂಡು ಬಂದಿದ್ದ ಪ್ರಭಾವದಿಂದ ಈ ಪ್ರಯತ್ನಗಳಲ್ಲಿ ವಿಫಲವಾದವು.

ಈ ಎಲ್ಲ ಘಟನೆಗಳ ಬಗೆಗೆ ಈ ಲೇಖಕನು ಪ್ರಶ್ನಿಸಿದಾಗ ನಿಜಲಿಂಗಪ್ಪನವರು ಕೊಟ್ಟ ಉತ್ತರವಿದು :

"ರಾಜಕೀಯ ಭಿನ್ನಾಭಿಪ್ರಾಯ ಮೈತ್ರಿ ವಿರೋಧಗಳು ಸಮುದ್ರದ ಅಲೆಗಳಂತೆ ಬದಲಾವಣೆ ಆಗುತ್ತಿರುತ್ತವೆ. ಹೊಸ ನೀರು ಬಂದಾಗ ಹಳೆಯ ನೀರು ಕೊಚ್ಚಿ ಹೋಗುತ್ತದೆ. ಅಂತಹ ಭಿನ್ನಭಾವ ಮೈತ್ರಿ ವಿರೋಧಗಳು ನಮ್ಮ ಬದುಕಿನ ಮೇಲೆ ಪ್ರಭಾವ ಬೀರಲು ಎಡೆಕೊಡುವುದು ಮಾನವೀಯತೆಯ ಅಪಚಾರ, ವಿಶ್ವಸಂಸ್ಥೆಯ ಅಧ್ಯಕ್ಷ ಪೀಠದಿಂದ ಯೂಥಾಂಟ್ ಇವರು ಕೊಟ್ಟ ಎಚ್ಚರಿಕೆಯ ನುಡಿಗಳು ಈ ಸಂಬಂಧದಲ್ಲಿ ನನ್ನ ನೆನಪಿಗೆ ಬರುತ್ತವೆ. "ರಾಷ್ಟ್ರರಾಷ್ಟ್ರಗಳ ಸ್ಪರ್ಧಾಮನೋಭಾವನೆ, ರಾಷ್ಟ್ರಗಳ ಒಳಾಡಳಿತದ ಅಂತಃಕಲಹಗಳು ಈಗಿನಂತೆಯೇ ಮುಂದುವರಿದರೆ, ಆಹಾರ ಅಭಾವ, ನಿತ್ಯ ಬಳಕೆ ವಸ್ತುಗಳ ಅಭಾವ, ವಿದ್ಯುಚ್ಛಕ್ತಿಯ ಅಭಾವ, ಎಣ್ಣೆ ಕಲ್ಲಿದ್ದಲು ಮುಂತಾದ ಉರವಲು ವಸ್ತುಗಳ ಅಭಾವ. ಈ ಅಭಾವ ಪರಂಪರೆ ಹೆಚ್ಚುತ್ತ ಹೋಗಿ ಮುಂದಿನ ಹತ್ತು ವರ್ಷಗಳ ಅವಧಿಯಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳು ಅತಿ ಘೋರ ದುರಂತವನ್ನು ಎದುರಿಸಬೇಕಾಗುತ್ತದೆ."

ದಾರ್ಶನಿಕ ಭವಿಷ್ಯ ವಾಣಿಯಂತೆ ನುಡಿದ ಈ ನುಡಿಗಳನ್ನು ವಿಸ್ತರಿಸಲು ನಿಜಲಿಂಗಪ್ಪನವರು ಇಚ್ಛಿಸಲಿಲ್ಲ. ಜನತೆಯ ಎಲ್ಲ ಸಂಕಷ್ಟಗಳಿಗೆ ಕಾರಣವಾದ ಹಣದುಬ್ಬರ (inflation) ದ ಕಡೆಗೆ ಮಾತು ತಿರುಗಿಸಿದರು.

## ನಾಡಿನ ಆರ್ಥಿಕ ಪರಿಸ್ಥಿತಿ ವ್ಯವಸಾಯ

ಶ್ರೀ ನಿಜಲಿಂಗಪ್ಪನವರ ವಿಚಾರಧಾರೆ ಪ್ರಚಲಿತ ರಾಜಕೀಯಕ್ಕಿಂತ ನಾಡಿನ ಆರ್ಥಿಕ ವ್ಯವಸ್ಥೆಯ ಕಡೆಗೆ ಹರಿಯುತ್ತದೆ. ಹರಿಯಾನಾ ರಾಜ್ಯದ ಫರೀದಾಬಾದಿನಲ್ಲಿ ದಿನಾಂಕ ೨೭.೪.೧೯೬೯ರಲ್ಲಿ ನಡೆದ ಕಾಂಗ್ರೆಸ್ ಮಹಾ ಸಂಸ್ಥೆಯ ಎಪ್ಪತ್ತೆರಡನೆಯ ಅಧಿವೇಶನದಲ್ಲಿ ಅವರು ಮಾಡಿದ ಅಧ್ಯಕ್ಷ ಭಾಷಣದಿಂದ ಆರಿಸಿದ ಮುಂದಿನ ಉಲ್ಲೇಖಗಳಿಂದ ಅದು ಸ್ಪಷ್ಟವಾಗುತ್ತದೆ;

"ಈಗಲೂ ಮತ್ತು ಮುಂದಿನ ಕೆಲವು ವರ್ಷಗಳಲ್ಲಿಯೂ ಸಾಗುವಳಿಯೇ ನಮ್ಮ ಆರ್ಥಿಕ ಪ್ರಗತಿಯ ಮೂಲಾಧಾರ, ವ್ಯವಸಾಯಾಭಿವೃದ್ಧಿಗೆ ನಾವು ಹೆಚ್ಚಿಗೆ ಗಮನ ಕೊಡದೆ ಹೋದರೆ ಪ್ರಗತಿ ಸಾಧ್ಯವಾಗುವುದಿಲ್ಲ, ಹೃಷ್ಟಪುಷ್ಟ ಸಮಾಜ ಸೃಷ್ಟಿಯಾಗುವುದಿಲ್ಲ. ಆಹಾರ ಧಾನ್ಯಗಳನ್ನು ಕೈಗಾರಿಕೆಗೆ ಅಗತ್ಯವಾದ ಕಚ್ಚಾವಸ್ತುಗಳನ್ನು ಹೆಚ್ಚಿಗೆ ಬೆಳೆಯಲು ರೈತರಿಗೆ ಎಲ್ಲ ಬಗೆಯ ಸಹಾಯಗಳನ್ನು ಕೊಡಬೇಕೆಂದು ನಾನು ಮೊದಲಿನಿಂದ ಅನೇಕಸಾರಿ ಹೇಳುತ್ತಿದ್ದೇವೆ. ಸಾಗುವಳಿ ಜಮೀನಿನ ವಿಸ್ತೀರ್ಣ ಹೆಚ್ಚಬೇಕು, ಹಿಂಗಾರು ಮುಂಗಾರು ಮಳೆಗಳ ಅನಿಶ್ಚಿತತೆಯಿಂದ ನಮ್ಮ ದೇಶದಲ್ಲಿ ಸಾಗುವಳಿ ಒಂದು ಜೂಜಾಟವೆಂಬುವುದು ನಿಜ, ಆದರೆ ಸ್ವಯಂಪೂರ್ಣತೆಯ ಗುರಿಯನ್ನು ಸಾಧಿಸುವುದರಲ್ಲಿ ನಮ್ಮ ಸತತ ಪ್ರಯತ್ನಕ್ಕೆ ಇದು ನೆಪವಾಗಬಾರದು. ಆಹಾರ ಧಾನ್ಯ ಮತ್ತು ಕಚ್ಚಾವಸ್ತುಗಳನ್ನು ಹೆಚ್ಚಿಗೆ ಉತ್ಪಾದಿಸಲು ನೀರಾವರಿ ಯೋಜನೆಗಳಿಗೆ ನಾವು ಪ್ರಪ್ರಥಮ ಗಮನ ಕೊಡಬೇಕು. ನೀರಾವರಿ ಮತ್ತು ವಿದ್ಯುತ್ ಶಕ್ತಿಯ ಉತ್ಪಾದನೆಗೆ ಈಚೆಗೆ ಹೆಚ್ಚು ಗಮನ ಕೊಡಲ್ಪಡುತ್ತಿದೆಯಾದರೂ ಪಂಚವಾರ್ಷಿಕ ಯೋಜನೆಯಲ್ಲಿ ಅದಕ್ಕೆ ಪ್ರಪ್ರಥಮ ಪ್ರಾಶಸ್ತ್ಯ ಕೊಡಲ್ಪಟ್ಟಿಲ್ಲವೆಂದು ನನ್ನ ಭಾವನೆ. ಕೊಳವೆ ಭಾವಿಗಳು. ಕಾಲುವೆ ಮುಂತಾದ ಸಣ್ಣ ನೀರಾವರಿ

ಯೋಜನೆಗಳು ಸಾಗುವಳಿಗೆ ಕೂಡಾ ಉಪಯುಕ್ತವಾಗುವ ಸಾಧನಗಳು. ನದೀನೀರಿನ ಪೂರ್ಣ ಪ್ರಯೋಜನ ಪಡೆಯಲು ದೊಡ್ಡ ನೀರಾವರಿ ಯೋಜನೆಗಳು ಅಷ್ಟೇ ಅಗತ್ಯ. ಇಂತಹ ಬೃಹತ್ ಪ್ರಮಾಣದ ಯೋಜನೆಗಳನ್ನು ಕಾರ್ಯಗತ ಮಾಡುವುದರಲ್ಲಿ, ಕೇಂದ್ರ ಸರ್ಕಾರ ಹೆಚ್ಚಿನ ಆಸಕ್ತಿ ವಹಿಸಬೇಕೆಂದು ಈಗ್ಗೆ ಕೆಲವು ವರ್ಷಗಳಿಂದ ನಾನು ಒತ್ತಿ ಹೇಳುತ್ತಿದ್ದೇನೆ. ಬೃಹತ್ ಯೋಜನೆಗಳನ್ನು ಕಾರ್ಯಗತಮಾಡುವ ಆರ್ಥಿಕಶಕ್ತಿ ರಾಜ್ಯ ಸರ್ಕಾರಕ್ಕಿರುವುದಿಲ್ಲ. ಕೇಂದ್ರ ಸರ್ಕಾರದ ಸಹಾಯ ಮತ್ತು ವ್ಯವಸಾಯಗಾರ ಮೇಲಿನ "ಲವಿ" ಇವೆರಡರ ನೆರವಿನಿಂದ ದೇಶಾದ್ಯಂತ ಈ ಬೃಹತ್ ಯೋಜನೆಗಳನ್ನು ಪ್ರಾರಂಭಿಸಿ ೫ ರಿಂದ ೧೦ ವರ್ಷಗಳ ಅವಧಿಯಲ್ಲಿ ಮುಗಿಸುವುದು ಸಾಧ್ಯ. ದೇಶಾದ್ಯಂತ ಈ ಯೋಜನೆಗಳನ್ನು ಕಾರ್ಯಗತಮಾಡಲು ಸಾರ್ವಜನಿಕರಿಂದ, ಬ್ಯಾಂಕುಗಳಿಂದ ಸಾಲ ಒದಗಿಸುವುದು ಸುಲಭ, ಯೋಜನಾನಂತರ ಆ ಪ್ರದೇಶಗಳ ಜಮೀನಿನ ಬಲ ಒಂದಕ್ಕೆ ಹತ್ತು ಹದಿನೈದರಷ್ಟು ಹೆಚ್ಚುವುದರಿಂದ ಬ್ಯಾಂಕುಗಳು ಸಂತೋಷದಿಂದ ಹಣ ಒದಗಿಸುತ್ತದೆ. ನೀರಾವರಿ ಯೋಜನೆಗಳಿಂದ ವ್ಯವಸಾಯೋತ್ಪನ್ನ ವನ್ನು ಎರಡರಿಂದ ಐದು ಪಟ್ಟು ಹೆಚ್ಚುಸುವುದಲ್ಲದೆ ನಿರುದ್ಯೋಗ ಸಮಸ್ಯೊ ಸ್ವಲ್ಪ ಮಟ್ಟಿಗೆ ಪರಿಹಾರವಾಗುತ್ತದೆ.

## ಕೈಗಾರಿಕೆಗಳ ಅಭಿವೃದ್ಧಿ

"ವ್ಯವಸಾಯೋತ್ಪನ್ನಗಳು ಹೆಚ್ಚುವುದರಿಂದ ವ್ಯವಸಾಯಾ ಧಾರಿತ (Agro-Based) ಕೈಗಾರಿಕೆಗಳನ್ನು ದೇಶದ ಮೂಲೆ ಮೂಲೆಗಳಲ್ಲಿಯೂ ಸ್ಥಾಪಿಸುವುದು ಸಾಧ್ಯವಾಗುತ್ತದೆ. ಗ್ರಾಮವಾಸಿಗಳ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ಕೇಂದ್ರ ವ್ಯವಸಾಯ ಶಾಖೆಯ ವಿಜ್ಞಾನಿಗಳು ಈ ದಿಶೆಯಲ್ಲಿ ಸಂಶೋಧನೆ ನಡೆಸಿ, ಹೆಚ್ಚು ಉತ್ಪನ್ನಕೊಡುವ ಆಹಾರ ದಾನ್ಯಗಳ, ವ್ಯಾಪಾರಿ ಕಚ್ಚಾವಸ್ತುಗಳ ಹೊಸ ತಳಿಗಳನ್ನು ಕಂಡು ಹಿಡಿದು ಪ್ರಚಾರಕ್ಕೆ ತಂದಿರುವುದು ಪ್ರಶಂಸನೀಯ.

"ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಿದ್ದಂತೆ ಅವು ಯಾವುದಾದರೊಂದು ಪ್ರದೇಶದಲ್ಲಿ ಕೇಂದ್ರೀಕೃತವಾಗದಂತೆಯೂ, ಅಥವಾ ಯಾವುದಾದರೊಂದು ಖಾಸಗಿ ಸಂಸ್ಥೆಯ ಏಕಸ್ವಾಮ್ಯ ಆಗದಂತೆಯೂ ಎಚ್ಚರವಹಿಸಬೇಕು.

"ಹೊಸದಾಗಿ ಸ್ಥಾಪಿಸಲ್ಪಡುವ ಖಾಸಗಿ ಸಂಸ್ಥೆಗಳಿಗೆ ಪ್ರೋತ್ಸಾಹ ಕೊಡುವಾಗ, ಅದರಿಂದ ಸರ್ಕಾರಿ ಉದ್ಯಮಗಳಿಗೆ ಹಾನಿಯಾಗದಂತೆ ಎಚ್ಚರ ವಹಿಸುವುದು ಅಗತ್ಯ.

"ಈಚೆಗೆ ಸರ್ಕಾರಿ ವಲಯದಲ್ಲಿ ಸ್ಥಾಪಿತವಾದ ಕೆಲವು ಉದ್ಯಮಗಳ ಬಗೆಗೆ ಅಲ್ಲಲ್ಲಿ ಟೀಕೆಗಳು ಕೇಳಿ ಬರುತ್ತಿವೆ ಉತ್ಪಾದನಾ ಶಕ್ತಿ, ಸಿದ್ಧ ವಸ್ತುಗಳಿಗಿರುವ ಗಿರಾಕಿ, ಈ ಮುಖ್ಯ ವಿಚಾರಗಳ ಬಗೆಗೆ ಸಂಶೋಧನೆ ನಡೆಸದೆ ಸರ್ಕಾರೀ ವಲಯ (Public Sector) ದಲ್ಲಿ ಕೈಗಾರಿಕೋದ್ಯಮಗಳನ್ನು ಸ್ಥಾಪಿಸಲಾಗುತ್ತಿದೆ ಯಂದೂ ಅವುಗಳ ಆಡಳಿತ ವ್ಯವಸ್ಥಿತ ಕ್ರಮದಂತೆ ನಡೆಯದೆ ಸಡಿಲವಾಗಿ ಉತ್ಪಾದನಾಶಕ್ತಿಯ ಸಂಪೂರ್ಣ ಪ್ರಯೋಜನ ಪಡೆಯಲು ಸಾಧ್ಯವಾಗುತ್ತಿಲ್ಲವೆಂದೂ ಆಕ್ಷೇಪಣೆಗಳು ಕೇಳಿಬರುತ್ತವೆ. ಕೆಲವು ಉದ್ಯಮಗಳಲ್ಲಿ ಕೆಲಸಗಾರರ ಸಂಖ್ಯಾಬಲ ಅತಿ ಹೆಚ್ಚಿನದಾಗಿದ್ದು ಪರಿಣಾಮದಲ್ಲಿ ಲಾಭದ ಬದಲು ನಷ್ಟವಾಗುತ್ತಿದೆ. ಖಾಸಗಿವಲಯದಂತೆ ಸರ್ಕಾರೀ ವಲಯದ ಉದ್ಯಮಗಳೂ ಲಾಭದಾಯಕವಾಗಿ ನಡೆಯಬೇಕೆಂಬುದು

ನನ್ನ ಅಭಿಪ್ರಾಯ. ಸರ್ಕಾರೀ ವಲಯದ ಉದ್ಯಮವೆಂದ ಮಾತ್ರಕ್ಕೆ ವರ್ಷವರ್ಷಕ್ಕೆ ಅದರ ನಷ್ಟದ ಹೊರೆಯನ್ನು ಸರ್ಕಾರ ವಹಿಸಬೇಕೆಂದೂ, ಅವುಗಳ ಉತ್ಪನ್ನದ ಲೋಪದೋಷಗಳನ್ನು ಗಣನೆಗೆ ತಂದುಕೊಳ್ಳದೆ ತೃಪ್ತಿಪಟ್ಟುಕೊಳ್ಳಬೇಕೆಂದೂ ಹೇಳುವುದು ಯಾವ ದೃಷ್ಟಿಯಿಂದಲೂ ಉಚಿತವೆನಿಸದು.

## ಭ್ರಷ್ಟಾಚಾರದ ಉಗಮ

ಕೈಗಾರಿಕೆ ಉದ್ಯಮಗಳಿಗೆ ಲೈಸನ್ಸ್ ಕೊಡುವುದರಲ್ಲಿ ತಡವಾಗಿ ಭ್ರಷ್ಟಾಚಾರಕ್ಕೆ ಎಡೆಸಿಕ್ಕಂತಾಗಿದೆ ಯೆಂಬ ದೂರು ಅನೇಕ ಕಡೆಗಳಿಂದ ಕೇಳಿ ಬರುತ್ತಿದೆ. ಹತೋಟಿ ಮತ್ತು ಲೈಸೆನ್ಸಿಂಗ್ ಪದ್ಧತಿ ಜಾರಿ ಇರುವ ಕಡೆಗಳಲ್ಲಿ ಭ್ರಷ್ಟಾಚಾರ ತಾನಾಗಿ ಹುಟ್ಟಿಕೊಳ್ಳುತ್ತದೆ. ಆದ್ದರಿಂದ ಅವಶ್ಯಕವಾದ ಕೆಲವು ಕ್ಷೇತ್ರಗಳಲ್ಲಿ ಮಾತ್ರವೇ ಲೈಸನ್ಸ್ ಪದ್ಧತಿಯನ್ನು ಉಳಿಸಿಕೊಂಡು ಇತರ ಕ್ಷೇತ್ರಗಳಲ್ಲಿ ಅದನ್ನು ನಡೆಸಿಕೊಳ್ಳುವುದು ಸರಿಯಾದ ಮಾರ್ಗ.

"ಕೈಗಾರಿಕೋದ್ಯಮ ಮತ್ತು ಆರ್ಥಿಕ ಅಭಿವೃದ್ಧಿಗೆ ನೌಕರಶಾಹಿಯ ವಿಳಂಬ ನೀತಿಯಿಂದ ಹಾನಿಯಾಗುವುದು ಪ್ರಗತಿಯ ಮಾರ್ಗವೆನಿಸದು. ಕೈಗಾರಿಕೋದ್ಯಮಕ್ಕೆ ಸಂಬಂಧಿಸದ ಕಾಗದ ಪತ್ರಗಳನ್ನು ಇತ್ಯರ್ಥಗೊಳಿಸಲು ಕಾಲಾವಧಿಯನ್ನು ಗೊತ್ತು ಮಾಡಿ ಅದರಂತೆ ನಡೆದುಕೊಳ್ಳದ ಅಧಿಕಾರಿಗಳನ್ನು ಶಿಕ್ಷಿಸುವುದರಿಂದ ಪರಿಸ್ಥಿತಿ ಉತ್ತಮಗೊಳ್ಳುವುದು. ಕೋಟ್ಯಾಂತರ ಜನಸಮುದಾಯದ ಆಗುಹೋಗು ಕಷ್ಟನಷ್ಟಗಳ ಸಮಸ್ಯೆಯನ್ನು ಎದುರಿಸಬೇಕಾದ ಭಾರತದಂತಹ ವಿಶಾಲ ದೇಶದಲ್ಲಿ ಕೆಲವು ದಿನಗಳ ವಿಳಂಬವೂ ಆರ್ಥಿಕ ಪ್ರಗತಿಯನ್ನು ಬಹುವಾಗಿ ಕುಂಠಿತಗೊಳಿಸುವುದು.

## ಆಡಳಿತ ವ್ಯವಸ್ಥೆಯ ಸುಧಾರಣೆ

"ವ್ಯವಸಾಯ, ಕೈಗಾರಿಕೆ, ಸಮಾಜಸೇವೆ, ಈ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಸರ್ಕಾರಗಳು ಕಳೆದ ೨೨ ವರ್ಷಗಳಲ್ಲಿ ಕ್ರಾಂತಿಕಾರಿ ಸುಧಾರಣೆಗಳನ್ನು ಅನುಷ್ಠಾನಕ್ಕೆ ತಂದಿವೆಯಾದರೂ ಮಾಡಬೇಕಾದ ಕಾರ್ಯಗಳು ಇನ್ನೂ ಸಾಕಾದಷ್ಟು ಉಳಿದಿವೆ. ಕಾಂಗ್ರೆಸ್ಸಿನ ರೀತಿನೀತಿ ಯೋಜನೆ ಕಾನೂನುಗಳು ಪೂರ್ಣರೂಪದಲ್ಲಿ ಕಾರ್ಯಗತ ವಾಗದಿರುವ ಮುಖ್ಯ ಕಾರಣವೆಂದರೆ ಪ್ರಾಮಾಣಿಕ ಸಮರ್ಥ ಕ್ರಿಯಾಶೀಲ ಆಡಳಿತಗಾರರ ಅಭಾವವೇ ಎಂದು ನನ್ನ ಅಭಿಪ್ರಾಯ. ಈಗಿನ ಆಡಳಿತ ಯಂತ್ರ ಸಮಾಜ ಕಲ್ಯಾಣ ರಾಜ್ಯದ ಉದ್ದೇಶ ಸಾಧನೆಗೆ ಅನುಕೂಲಕರವಾಗಿಲ್ಲವೆಂಬುದು. ಮೊದಲಿಂದ ನನ್ನ ಅಭಿಪ್ರಾಯ. ಬ್ರಿಟಿಷರ ಕಾಲದಿಂದ ನಮಗೆ ಬಂದ "ಬ್ಯೂರೋಕ್ರಸಿ" ಆಡಳಿತ ಪದ್ಧತಿಯ ಶಿಸ್ತು ಮತ್ತು ಸಾಮರ್ಥ್ಯವನ್ನು ನಾವು ಒಪ್ಪಬಹುದಾದರೂ ಅಧಿಕಾರಿವರ್ಗದ ಆಯ್ಕೆ. ಹತೋಟಿ ಮತ್ತು ಶಿಸ್ತಿನ ವಿಚಾರದಲ್ಲಿ ಪುನಃ ಪರಿಶೀಲನೆ ನಡೆಸಬೇಕಾಗಿದೆ. ಸಂವಿಧಾನದಲ್ಲಿ ಸರ್ಕಾರೀ ನೌಕರರಿಗೆ ಸಂಬಂಧಿಸಿದ ನಿಬಂಧನೆ ಗಳು ಮುಖ್ಯವಾಗಿ ೩೧೧ ನಿಬಂಧನೆಯ ತಿದ್ದುಪಡಿಯಾಗ ಬೇಕೆಂದು ನಾನು ಮೊದಲಿನಿಂದ ಹೇಳುತ್ತಿದ್ದೇನೆ.

"ಕಾಂಗ್ರೆಸ್ಸಿನ ಗುರಿಸಾಧಿಸಬೇಕಾದರೆ ಇಂತಹ ಕ್ರಾಂತಿಕಾರಿ ಬದಲಾವಣೆ ಈಗ ಅಗತ್ಯ ಅಧ್ಯಕ್ಷರೂ ನೀತಿಭ್ರಷ್ಟರೂ ಆದ ಅಧಿಕಾರಿಗಳನ್ನು ಕೂಡಲೆ ಕೆಲಸದಿಂದ ತೆಗೆದುಹಾಕುವ ಅಧಿಕಾರ ಸರ್ಕಾರಕ್ಕಿರಬೇಕು. ಈ ವಿಚಾರದಲ್ಲಿ ಸಂವಿಧಾನದ ನಿಬಂಧನೆ ಗಳನ್ನು ಅನುಸರಿಸುವುದರಿಂದ ಕಾಲಹರಣವಷ್ಟೇ ಅಲ್ಲದೆ ಅಸಾಮರ್ಥ್ಯ ನೀತಿಭ್ರಷ್ಟತೆಗಳಿಗೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ಸಂವಿಧಾನದಲ್ಲಿ ಹೇಳಿರುವ "Seniority cum merit" ಎಂಬ ಶಬ್ದಕ್ಕೆ ಸಮಾನಶಬ್ದಕ್ಕೆ ದಕ್ಷತೆಯಿಲ್ಲದೆ

ನೀತಿ ಭ್ರಷ್ಟನಾದ ಅಧಿಕಾರಿಯನ್ನು ಆತ ಹೆಚ್ಚು ವರ್ಷಗಳ ಕಾಲ ನೌಕರಿಯಲ್ಲಿದ್ದನೆಂಬ ಒಂದೇ ಕಾರಣದಿಂದ ಮುಂದೆಯೂ ಅಧಿಕಾರದಲ್ಲಿಟ್ಟು ಕೊಳ್ಳಬೇಕು ಎಂಬುದರ ಹೊರತಾಗಿ ಬೇರೆ ಯಾವ ಅರ್ಥವೂ ಇರುವುದಿಲ್ಲ, ದಕ್ಷರಾದವರನ್ನು ಸೇವಾವಧಿ ಸಾಲದೆಂಬ ಕಾರಣದಿಂದ ನೇಮಿಸಿ ಕೊಳ್ಳದಿರಲು ಈ ನಿಬಂಧನೆ ಅಡ್ಡಿಯಾಗುತ್ತದೆ. ಈ ವಿಚಾರದಲ್ಲಿ ಸರ್ಕಾರಕ್ಕೆ ಹೆಚ್ಚಿನ ಅಧಿಕಾರ ಸ್ವಾತಂತ್ರ್ಯಗಳನ್ನು ಕೊಡುವ ಶಾಸನವನ್ನು ನಾವು ತೀವ್ರವಾಗಿ ಯೋಚಿಸಬೇಕಾಗಿದೆ."

ವ್ಯವಸಾಯ, ಆರ್ಥಿಕ ವ್ಯವಸ್ಥೆ, ಆಡಳಿತ ಪದ್ಧತಿಯ ಸುಧಾರಣೆ, ಈ ವಿಚಾರಗಳಲ್ಲಿ ಕ್ರಾಂತಿಕಾರಕ ಮಾರ್ಪಾಡುಗಳನ್ನು ಸೂಚಿಸುವ ಈ ಬಿಚ್ಚು ನುಡಿಗಳನ್ನು ಶ್ರೀ ನಿಜಲಿಂಗಪ್ಪನವರು ಮೂರು ವರ್ಷಗಳ ಹಿಂದೆ ಹರಿಯಾನದ ಫರೀದಾಬಾದಿನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾ ಸಂಸ್ಥೆಯ ಅಧಿವೇಶನದ ಅಧ್ಯಕ್ಷ ಪೀಠದಿಂದ ವ್ಯಕ್ತಪಡಿಸಿದರೆಂಬುದು ಆಶ್ಚರ್ಯದ ಸಂಗತಿ. ಅವರ ಪ್ರಗತಿಪರ ಚಿಂತನೆಗೆ ಇದು ಉಜ್ಜ್ವಲ ನಿದರ್ಶನವಾಗಿದೆ. ಅವರ ಈ ಅಭಿಪ್ರಾಯಗಳು ಆಗಿನ ಪ್ರತಿಷ್ಠಿತ ವ್ಯಕ್ತಿಗಳಲ್ಲಿ ಟೀಕಿಸಲ್ಪಟ್ಟಿದ್ದಾದರೂ, ಆ ಮಾತುಗಳ ವಾಸ್ತವತೆ ಆಮೇಲಿನ ಘಟನೆಗಳಿಂದ ಜನರಿಗೆ ಮನದಟ್ಟಾಗಿರುತ್ತದೆ. "ಕಾಲಾಯ ತಸ್ಮೈ ನಮಃ" ಎಂಬ ಸುಭಾಷಿತದ ಅರ್ಥಗಾಂಭೀರ್ಯವನ್ನು ಈ ಸಂಬಂಧದಲ್ಲಿ ನಾವು ನೆನೆಯಬೇಕು.

ಅಧಿಕಾರಾವಧಿ ಮುಗಿದ ಅನಂತರ ಸಂಸ್ಥಾ ಕಾಂಗ್ರೆಸ್ಸಿನ ಅಧ್ಯಕ್ಷ ಪೀಠದಿಂದ ನಿವೃತ್ತರಾದ ಮೇಲೂ ಶ್ರೀ ನಿಜಲಿಂಗಪ್ಪನವರ ವಿಚಾರಧಾರೆ ನಾಡಿನ ಆರ್ಥಿಕ ಪ್ರಗತಿಯ ಕಡೆಗೆ ಅವಿಚ್ಛಿನ್ನವಾಗಿ ಹರಿಯುತ್ತಿದೆಯೆಂಬುದು, ಈಚೆಗೆ ಬೆಂಗಳೂರಲ್ಲಿ ಒಂದು ಸಮಾರಂಭದಲ್ಲಿ ಆಡಿದ (ಮಾತಾಡಿದ) ಈ ನುಡಿಗಳಿಂದ ವ್ಯಕ್ತವಾಗುತ್ತದೆ.

"ಕರ್ನಾಟಕಕ್ಕೆ ದುಡಿದು ತ್ಯಾಗಮಾಡಿದವರನ್ನು ಮುಖ್ಯ ಅತಿಥಿಗಳೆಲ್ಲಾ ಕೃತಜ್ಞತೆಯಿಂದ ಸ್ಮರಿಸಿ ಸ್ವರ್ಣಯುಗ ಕಂಡ ಕರ್ನಾಟಕದ ಗತವೈಭವಕ್ಕೆ ಹೆಮ್ಮೆ ಪಟ್ಟರೆ ಸಾಲದು. ಇರುವ ಸಂಪನ್ಮೂಲ ಬಳಸಿ ಸಂಪದಭಿವೃದ್ಧಿ ಸಾಮಾಜಿಕ ನ್ಯಾಯ, ಧರ್ಮ ನೀತಿಗಳ ಸುವರ್ಣ ಯುಗವನ್ನು ಮತ್ತೆ ತರಲು ಪ್ರತಿಯೊಬ್ಬರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಕಷ್ಟಪಟ್ಟು ದುಡಿಯುವ ನಿಷ್ಠೆಯ ಪ್ರತಿಜ್ಞೆಯಿಂದ ದುಡಿಯಬೇಕು" ಎಂದು ಕರೆ ನೀಡಿದರು.

"ಯೋಗಕ್ಕಿಂತ ಉದ್ಯೋಗ ದೊಡ್ಡದು. ಮಂತ್ರಿಸಿದರೆ ಮಾವಿನಕಾಯಿ ಉದುರೋದಿಲ್ಲ. ನೀರಾವರಿ ವಿದ್ಯುಚ್ಛಕ್ತಿ ಮತ್ತು ಅರಣ್ಯ ಸಂಪತ್ತು ಹೆಚ್ಚಿಸಲು ಪಂಚವಾರ್ಷಿಕ ಯೋಜನೆಯ ಒಟ್ಟು ಮೊತ್ತದಲ್ಲಿ ಅರ್ಧವನ್ನು ಅದಕ್ಕಾಗಿಯೇ ಖರ್ಚು ಮಾಡಬೇಕು. ಈ ರೀತಿ ಮಾಡಿದರೆ ಮಾತ್ರ ಸಂಪತ್ತು ಸೃಷ್ಟಿಯಾಗಿ ಭವ್ಯ ಭಾರತ ಮತ್ತು ಸಂಪದ್ಯುಕ್ತ ಕರ್ನಾಟಕ ಕಟ್ಟಲು ಸಾಧ್ಯ" ಎಂದು ಶ್ರೀ ನಿಜಲಿಂಗಪ್ಪನವರು ಶ್ರಮಜೀವಿಗಳು ದುಡಿದು ಸಂಪತ್ತು ಹೆಚ್ಚಿಸಬೇಕು ಎಂದು ಕಾರ್ಮಿಕರಿಗೆ ಕರೆ ನೀಡಿದರು.

"ಕರ್ನಾಟಕ ಆಗಲು ಕೆಲವರು ಕಾದು ನಿಂತು ನೋಡಿದರು. ಕೆಲವರು ವಿರೋಧ ಮಾಡಿದರು, ಕೆಲವರು ಬಹಳ ಪ್ರಯತ್ನಪಟ್ಟರು. ಅಂತೂ ಆಯಿತು. ಬರಿಯ ಹೆಸರು ಬಂದರೆ ಸಾಲದು. ಮುಂದೇನು ಎಂದು ನಾವೇ ಯೋಚಿಸಿ ದೃಢ ನಿಶ್ಚಯಮಾಡಿ ಕಾರ್ಯರೂಪಕ್ಕೆ ತರಬೇಕು" ಎಂದು ಹೇಳಿದರು.

ನಾಮಕರಣ ನಿಧಾನವಾದುದಕ್ಕೆ ಆಕ್ಷೇಪಣೆ ಅನಗತ್ಯ ಎಂದ ಶ್ರೀ ಕೆಂಗಲ್ ಅವರು "ಮಗು ಹುಟ್ಟಿದ ಕೂಡಲೇ ನಾಮಕರಣ ಮಾಡೋದಿಲ್ಲ. ಕರ್ನಾಟಕ ಹುಟ್ಟುವುದಕ್ಕೂ ಮಗು ಹುಟ್ಟುವಷ್ಟೇ ಕಷ್ಟ ಆಯಿತು. ಎಲ್ಲ ಒಂದಾಗಿ ಸಂತೋಷದಿಂದ ಹೆಸರಿಟ್ಟು ಹೊಸ ಚರಿತ್ರೆ, ಅಭಿವೃದ್ಧಿ ಸಾಧಿಸಲು ಯತ್ನಿಸೋಣ."

## ವ್ಯಕ್ತಿ ಪರಿಚಯ

ನಿಜಲಿಂಗಪ್ಪನವರ ವ್ಯಕ್ತಿತ್ವ, ಪ್ರತಿಭೆ, ಗುಣ ಘನತೆಗಳ ಪರಿಚಯ ಮಾಡಿ ಕೊಡುವುದೆಂದರೆ ಪ್ರಕೃತಿಯ ಸೊಬಗನ್ನು ಕೈಗನ್ನಡಿಯಲ್ಲಿ ಗಗನದ ವಿಶಾಲತೆಯನ್ನು ಕ್ಯಾಮರಾದ ಕಣ್ಣಿನಿಂದ, ಸಮುದ್ರದ ಆಳವನ್ನು ಕಿರಿದಾದ ದೋಣಿಯಿಂದ ಅರಿಯಲು ಪ್ರಯತ್ನಿಸಿದಂತೆ.

ಒಂದು ಸಾರಿ ಅವರನ್ನು ನೋಡಿ ಮಾತಾಡಿದ ಬಳಿಕ ಎಂದಿಗೂ ಮರೆಯಲಾಗದ ವ್ಯಕ್ತಿತ್ವ ಅವರದು.

"ತುಂಬುಗೆನ್ನೆಯ ದುಂಡುಮುಖ, ಸಮಕಟ್ಟಾದ ದೇಹ, ಆರೋಗ್ಯ ಭಾಗ್ಯದಿಂದ ಜಾಜ್ವಲ್ಯಮಾನವಾದ ಮುಖಕಾಂತಿ, ಕಣ್ಣುಗಳ ಸರಳ ದೃಷ್ಟಿ, ನಿರಾಡಂಬರ ಸೌಶೀಲ್ಯಗಳ ಪ್ರತೀಕದಂತಿರುವ ಶುಭ್ರವಾದ ಖಾದಿ ಬಿಳಿಯುಡಿಗೆ, ಹಿರಿತನದ ಕುರುಹಾಗಿ ಬೆಳ್ಳಿಯ ಎಳೆಗಳಂತಿರುವ ತಲೆಗೂದಲಿಂದ ಮಿರುಗುವ ಬೊಕ್ಕತಲೆ ಗುಲಾಬಿ ಬಣ್ಣದ ದೇಹಕಾಂತಿ, ಮಧುರ ಕಂಠ, ಮೃದು ಭಾಷೆ, ಹಿತಮಿತವಾದ ಮಾತು, ಹೃದಯದ ಕಲ್ಮಶವನ್ನು ತೊಡೆದು ಒಲವು ನಲಿವುಗಳನ್ನು ನೀಡಿ ಶತ್ರುಗಳನ್ನು ನಿರಾಯುಧರನ್ನಾಗಿ ಮಾಡುವ ಮಂದಹಾಸ. ಎಲ್ಲರೊಡನೆಯೂ ತೋರುವ ಸೌಜನ್ಯ ವರ್ತನೆ, ಅನೌಪಚಾರಿಕ ಮಾತುಕತೆ, ತೀಕ್ಷ್ಣವಾದರೂ ಅನುತಾಪವನ್ನು ಸೂಚಿಸುವ ಕಣ್ಣುಗಳು, ಅದಕೊಪ್ಪುವ ಧಡೂತಿ ಕಟ್ಟು ಸುಲೋಚನ."

೭೬ರ "ಹರೆಯ"ದಲ್ಲಿ ಅಡಿಯಿಟ್ಟಿರುವ ನಿಜಲಿಂಗಪ್ಪನ ವರನ್ನು "ವಾರ್ಧಿಕ್ಯ" ಮುಟ್ಟಲೂ ಹಿಂಜರಿದಂತಿದೆ. ಇಂದೂ ಅವರ ವ್ಯಕ್ತಿತ್ವ ತರುಣ ಜನಾಂಗದ ಆದರ್ಶ ಆಕಾಂಕ್ಷೆಗಳಲ್ಲಿ ಸಹಾನುಭೂತಿ ಉತ್ಸಾಹಗಳು ಅವರನ್ನು "ತರುಣ"ರನ್ನಾಗಿಯೇ ಉಳಿಸಿದೆ. ಆದರ್ಶಪತಿಯಂತೆ ಗಾರ್ಹಸ್ಥ್ಯ ಜೀವನ ನಡೆಸಿದ ಅವರು ಇಂದು ಆದರ್ಶ ತಂದೆ-ತಾತ ಆಗಿದ್ದಾರೆ. ಮಕ್ಕಳ ಸಮೂಹದಲ್ಲಿ ಅವರು ವಯಸ್ಸು ಪದವಿ ಜವಾಬ್ದಾರಿಗಳನ್ನು ಮರೆತು ಆನಂದದಿಂದ ನಲಿಯುತ್ತಾರೆ.

ರಾಜಕೀಯ ಜಂಜಾಟದಲ್ಲಿ ಸಿಲುಕಿದರೂ ಅವರು ಕಲಾ ಪ್ರೇಮ, ರಸಿಕತೆಗಳನ್ನು ಕಳೆದುಕೊಂಡಿಲ್ಲ, ಸಂಗೀತ ಮುಂತಾದ ಲಲಿತ ಕಲೆಗಳಲ್ಲಿ ಆಸಕ್ತಿ, ತಾರುಣ್ಯದಲ್ಲಿ ಕ್ರೀಡಾ ಪಟುಗಳಾಗಿದ್ದು ಕ್ರಿಕೆಟ್ ಟೆನ್ನಿಸ್ ಆಟಗಾರರೆಂದು ಪ್ರಸಿದ್ಧರಾಗಿದ್ದರು.

ಭಾಷೆಗಳನ್ನು ಕಲಿಯುವುದರಲ್ಲಿ ಅವರು ನಿಷ್ಣಾತರು, ತೆಲುಗು, ತಮಿಳು, ಹಿಂದೀ ಭಾಷೆಗಳಲ್ಲಿ ನಿರರ್ಗಳವಾಗಿ ಮಾತಾಡಬಲ್ಲರು. ಇಂಗ್ಲಿಷ್ ಮತ್ತು ಕನ್ನಡಗಳಲ್ಲಿ ಅವರ ಮಾತು ಬರಹಗಳು ಸರಳ ಶೈಲಿಯ ಕೆಲವೇ ವಾಕ್ಯಗಳಲ್ಲಿ ಮಹತ್ವದ ಭಾವನೆಗಳನ್ನೂ, ವಿಚಾರಗಳನ್ನೂ ಸೂಚಿಸಬಲ್ಲ ಅನುಪಮ ಆಕರ್ಷಕ ಶಕ್ತಿಯನ್ನು ಪಡೆದಿವೆ.

ಪುಸ್ತಕಗಳನ್ನು ಓದುವುದು ಅವರ ಇನ್ನೊಂದು ಮುಖ್ಯ ಹವ್ಯಾಸ. ಕಾರ್ಯಾವಸರದಲ್ಲಿ

ಬಿಡುವಾದಾಗ ಓದಲು ಯಾವುದಾದರೊಂದು ಪುಸ್ತಕ ಅವರ ಹತ್ತಿರ ಇರುತ್ತದೆ. ಪ್ರವಾಸದಲ್ಲಿ ವ್ಯವಹಾರಿ ಕಾಗದ ಪತ್ರಗಳಂತೆ ಪುಸ್ತಕಗಳನ್ನೂ ತೆಗೆದುಕೊಂಡು ಹೋಗುವುದು ಮೊದಲಿಂದ ಅವರ ಅಭ್ಯಾಸ, ರಸೆಲ್, ವೆಲ್ಸ್, ರಾಧಾಕೃಷ್ಣನ್, ವಿವೇಕಾನಂದರು ಮೊದಲಾಗಿ ಸ್ಟಾನ್ಲಿ ಗಾರ್ಡನರ್‌ರವರೆಗೆ ಎಲ್ಲ ಬಗೆಯ ಸಾಹಿತ್ಯದಲ್ಲಿಯೂ ಹರಡಿದ ಅವರ ಅಭಿರುಚಿ, ಬೇಂದ್ರೆ, ಕುವೆಂಪು, ಅಡಿಗ, ಗೋಕಾಕರ ಕಾವ್ಯ ಕಾದಂಬರಿಗಳ ಪರಿಚಯವೂ ಅವರಿಗಿದೆ.

"ನಿಜಲಿಂಗಪ್ಪನವರು ಬಹಳ ಮೃದು ಸ್ವಭಾವದವರು, ದಾಕ್ಷಿಣ್ಯಪರರು, ಬೇಗ ನಿರ್ಧಾರ ಮಾಡುವುದಿಲ್ಲ" ಎಂದು ಕೆಲವರು ಆಕ್ಷೇಪಿಸಿದುದುಂಟು. ನಿಜಲಿಂಗಪ್ಪನವರ ಸದಾಚಾರ, ಸದ್ವರ್ತನೆಗಳು, ಸಕಲ ಜೀವರಿಗೆ ಲೇಸನ್ನೇ ಬಯಸುವ ಅವರ ಚಿತ್ತವೃತ್ತಿ, ವಿಶಾಲ ಮನೋಭಾವ, ಅವಸರದ ನಿರ್ಧಾರಗಳಿಂದ ಯಾರಿಗೆ ಅನ್ಯಾಯವಾಗುವುದೋ ಎಂಬ ಶಂಕೆ, ಅನ್ಯರ ಹಿತಕ್ಕಾಗಿ ತನ್ನ ಹಿತಗಳನ್ನು ಮರೆಯುವ ತ್ಯಾಗಶೀಲ ವರ್ತನೆ, ಈ ಸದ್ಗುಣಗಳು ಸಜ್ಜನರನ್ನು ಎಲ್ಲ ಯುಗಗಳಲ್ಲಿಯೂ ಈ ಬಗೆಯ ಆಕ್ಷೇಪಗಳಿಗೆ ಗುರಿಪಡಿಸುವುದೆಂಬುದನ್ನು ಇತಿಹಾಸದಿಂದ ಅರಿಯಬಹುದು. ಇಂತಹ ತ್ಯಾಗಶೀಲ ಮಹಿಮಾನ್ವಿತ ವ್ಯಕ್ತಿಗಳನ್ನು ಬೌದ್ಧರ ಧಾರ್ಮಿಕ ಸಾಹಿತ್ಯದಲ್ಲಿ "ಬೋಧಿಸತ್ವ" ಎಂದು ಕರೆದಿದ್ದಾರೆ. ಈ ಅಪೂರ್ವ ಪ್ರಶಸ್ತಿಗೆ ಅರ್ಹರಾದ ಮಹಾತ್ಮಾಗಾಂಧಿ, ಪಂಡಿತ್ ನೆಹರೂ ಇವರ ಸಾಲಿನಲ್ಲಿ ನಿಜಲಿಂಗಪ್ಪನವರೂ ಒಬ್ಬರು.

ಭಾರತದ ಯಾವುದೇ ಪ್ರಾಂತ್ಯದಲ್ಲಿಯಾದರೂ ನಿಜಲಿಂಗಪ್ಪನವರು ಅಪರಿಚಿತರಲ್ಲ. ಅವರಿಗೆ ಎಲ್ಲ ರಾಜ್ಯಗಳಲ್ಲಿ ಸುಸ್ವಾಗತವಿದೆ, ಸ್ನೇಹವಿದೆ, ಸನ್ಮಾನವಿದೆ, ಸಹಚರ್ಯವಿದೆ- ಎಂದರೆ ಯಾರಿಗೂ ಆಶ್ಚರ್ಯವೆನಿಸಬಹುದು. ಇವರ ತ್ಯಾಗಶೀಲ, ಸದ್ಗುಣಗಳಿಂದ ತೃಪ್ತಿಪಡೆದು ಸನ್ಮಾನಿಸಿದ ಅಗ್ರನಾಯಕರಲ್ಲಿ ಸರ್ದಾರ್ ಪಟೇಲ್, ಗೋವಿಂದ ವಲ್ಲಭ ಪಂತ್, ಪಂಡಿತ್ ನೆಹರೂ, ಡಾ. ರಾಜೇಂದ್ರ ಪ್ರಸಾದ್, ಡಾ. ಬಿ. ಸಿ. ರಾಯ್, ಲಾಲ್ ಬಹದೂರ್ ಶಾಸ್ತ್ರಿ ಇವರು ಮುಖ್ಯರಾಗಿದ್ದರು. ಈಗಿನ ನಾಯಕರಲ್ಲಿ ಡಾ. ರಾಧಾಕೃಷ್ಣನ್, ಡಾ. ಜಾಕೀರ್ ಹುಸೇನ್, ಶ್ರೀಮತಿ ಇಂದಿರಾ ಗಾಂಧಿ, ಎಸ್. ಕೆ. ಪಾಟೀಲ್, ಕಾಮರಾಜ ನಾಡಾರ್, ವೈ. ಬಿ. ಚವ್ಹಾಣ್, ಈ ಉನ್ನತ ನಾಯಕರೂ, ಅನೇಕ ಮಂದಿ ರಾಜ್ಯಪಾಲರೂ, ಮುಖ್ಯಮಂತ್ರಿಗಳೂ ನಿಜಲಿಂಗಪ್ಪನವರು ಆಡಿದ ಉದ್ಬೋಧಕ ನುಡಿಗಳು ಭಾರತಕ್ಕೆ ಅನ್ವಯಿಸುತ್ತವೆ. ಆ ಮಾತುಗಳಿವು:

"ನಮ್ಮ ಇತಿಹಾಸ ಬಹಳ ಮಹತ್ವದ್ದು; ನಮ್ಮ ಸಂಸ್ಕೃತಿ ಬಹು ಪ್ರಾಚೀನ ಕಾಲದ್ದು. ನಮ್ಮ ಜನಜೀವಾಳ ಮಹದಾಶಯ ಗಳಿಂದ ಪ್ರೇರಣೆ ಪಡೆದದ್ದು. ಆ ನಮ್ಮ ಇತಿಹಾಸ ಇನ್ನೂ ಮಹತ್ವ ದಾಗುವಂತೆ, ಆ ಸಂಸ್ಕೃತಿ ಇನ್ನೂ ಹೆಚ್ಚಿನ ಘನತೆಗೇರುವಂತೆ, ಜನಜೀವನ ಇನ್ನೂ ಉದಾತ್ತವಾಗು ವಂತೆ ನಾವು ಪ್ರಯತ್ನಿಸಬೇಕು. ಪ್ರಾಂತೀಯ ಭಿನ್ನಭಾವನೆಗಳನ್ನು ಬಿಟ್ಟು ಒಬ್ಬರನ್ನೊಬ್ಬರು ಅರಿತು ಕೊಳ್ಳಬೇಕು. ಒಂದಾಗಿ ಬಾಳಿ ಕಷ್ಟ ಸುಖಗಳನ್ನು ಒಂದಾಗಿ ಅನುಭವಿಸಬೇಕು. ಆಗ ನಮ್ಮ ಬದುಕು ಸಮೃದ್ಧವೂ ಸಕ್ರಿಯವೂ ಆಗುತ್ತದೆ. ವಿಷಮತೆ ನಾಶವಾಗಿ ಅಮೃತ ಹರಿಯುತ್ತದೆ. ಅದಕ್ಕೆ ಸಾಧಕವಾದ ಆತ್ಮ ಜ್ಯೋತಿ ನಮ್ಮ ಅಂತರಂಗವನ್ನು ಬೆಳಗಿ ಭಾರತವನ್ನು ತೇಜೋಮಯವಾಗಿ ಮಾಡಲಿ".

ನಿಜಲಿಂಗಪ್ಪನವರ ತ್ಯಾಗ ಜೀವನದ ವೈಶಾಲ್ಯ ಸಮಗ್ರತೆ ಗಳಿಗೆ ಕನ್ನಡಿ ಹಿಡಿದಂತಿದೆ.



# ಶ್ರೀ ಎಸ್. ನಿಜಲಿಂಗಪ್ಪನವರ ಸ್ಮರಣೆ ಮತ್ತು ಭಾರತದಲ್ಲಿ ಪಕ್ಷ ವ್ಯವಸ್ಥಿತ ಸರ್ಕಾರ

ಜೆ. ಎಂ. ಇಮಾಮ್

ಇಂಗ್ಲಿಷಿನಿಂದ ಅನುವಾದ : ಎಸ್. ಸಿ. ಸುವರ್ಣಾದೇವಿ

ನನ್ನ ಮತ್ತು ಶ್ರೀ ಎಸ್. ನಿಜಲಿಂಗಪ್ಪನವರ ಪರಿಚಯ ನಾವು ಚಿತ್ರದುರ್ಗದಲ್ಲಿ ಹೈಸ್ಕೂಲು ವಿದ್ಯಾರ್ಥಿಗಳಾಗಿದ್ದಾಗ ಆಯಿತು. ಇಡೀ ಚಿತ್ರದುರ್ಗ ಜಿಲ್ಲೆಗೆ ಒಂದೇ ಒಂದು ಹೈಸ್ಕೂಲು ಇದ್ದುದರಿಂದ, ಅವರು ದಾವಣಗೆರೆಯಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸಾದ ನಂತರ ಚಿತ್ರದುರ್ಗಕ್ಕೆ ಬರಬೇಕಾಯಿತು. ಉಜ್ವಲ ಪಾಂಡಿತ್ಯದ ಜೀವನಶೈಲಿ ಅವರದಾಗಿತ್ತು. ಅವರು ಕಾನೂನು ಪದವಿಯನ್ನು ಪಡೆದನಂತರ ಚಿತ್ರದುರ್ಗದಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ಬಹಳ ಬೇಗ ವಕೀಲಿ ವೃತ್ತಿಯಲ್ಲಿ ಅಭಿವೃದ್ಧಿ ಹೊಂದಿದರು ಮತ್ತು ಸ್ಥಳೀಯ ವಕೀಲರ ಸಂಘದಲ್ಲಿ ಅತ್ಯಂತ ಆದರಣೀಯರಾದ ಸದಸ್ಯರಾದರು.

೧೯೩೫ರಲ್ಲಿ ನನ್ನನ್ನು ಜಿಲ್ಲಾ ಮಂಡಳಿ ಅಧ್ಯಕ್ಷನಾಗಿ ಚುನಾಯಿಸಲಾಯಿತು. ಆದ್ದರಿಂದ ನಾನು ಚಿತ್ರದುರ್ಗಕ್ಕೆ ಬಂದು ನೆಲೆಸಿದೆ. ನಾವು ನೆರೆಹೊರೆಯವರಾದೆವು ಹಾಗೂ ಆಪ್ತ ಸ್ನೇಹಿತರಾದೆವು. ಅವರು ಅತ್ಯಂತ ಉಲ್ಲಸಿತ ಮನೋಭಾವದ ಉತ್ತಮ ಆಟಗಾರರಾಗಿದ್ದರು. ಅವರ ನೆಚ್ಚಿನ ಆಟವೆಂದರೆ - ಟೆನ್ನಿಸ್ ಪ್ರತಿದಿನ ನಾವು ಕ್ಲಬ್‌ನಲ್ಲಿ ಭೇಟಿಯಾಗುತ್ತಿದ್ದೆವು. ನಾವು ಆಡುತ್ತಿದ್ದ ಒಂದೇ ಒಂದು ಇಸ್ಪೀಟು ಆಟವೆಂದರೆ, ೨೮ ಅತ್ಯಂತ ಕಡಿಮೆ ಹಣವನ್ನು ಕಟ್ಟಿ ಆಡುತ್ತಿದ್ದೆವು. ಯಾರೂ ಸಹ ದಿನದಲ್ಲಿ ಒಂದು ರೂಪಾಯಿಗಿಂತ ಹೆಚ್ಚು ಕಳೆದುಕೊಳ್ಳುತ್ತಿರಲಿಲ್ಲ. ಇನ್ನಿತರ ಎಲ್ಲ ಚುರುಕು ಬುದ್ಧಿಯ ಇಸ್ಪೀಟು ಆಟಗಳನ್ನು ಮೂಲೆಗೆ ತಳ್ಳಿ, ಕ್ಲಬ್‌ಗಳನ್ನು ಜೂಜಾಟದ ಬಿಲಗಳಾಗಿ ಮಾಡುತ್ತಿರುವ 'ರಮ್ಮಿ' ಆಟ ಆಗ ಗೊತ್ತಿರಲಿಲ್ಲ.

ಅವರು ಸಾಮಾಜಿಕ ಕೆಲಸಗಳನ್ನು ಮಾಡುತ್ತಿದ್ದರು ; ತಮ್ಮ ಕಕ್ಷಿಗಾರರಿಗೆ ಅನವಶ್ಯಕವಾಗಿ ಮೊಕದ್ದಮೆಗಳಲ್ಲಿ ಸಿಲುಕಬೇಡಿರೆಂದು ಬುದ್ಧಿಹೇಳುತ್ತಿದ್ದರು.

ಕೆಲವೊಮ್ಮೆ ನಾವಿಬ್ಬರೂ ಒಟ್ಟಿಗೇ ಹಳ್ಳಿಗಳಿಗೆ ಭೇಟಿಕೊಟ್ಟು ಕೌಟುಂಬಿಕ ಕಲಹಗಳನ್ನು ಪರಿಹರಿಸಲು ಅಥವಾ ಒಟ್ಟು ಕುಟುಂಬದ ಆಸ್ತಿಯ ಭಾಗ ಮಾಡಲು ಸಹಾಯ ಮಾಡುತ್ತಿದ್ದೆವು.

ಶ್ರೀ ಎಸ್. ನಿಜಲಿಂಗಪ್ಪನವರು ಸ್ವತಃ ಕಾಂಗ್ರೆಸ್ ಪಕ್ಷದ ಸದಸ್ಯರಾದರೂ ಸಹ, ರಾಜಕೀಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿಸಲಿಲ್ಲ. ವಕೀಲಿ ವೃತ್ತಿಯಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸ ಬೇಕೆಂದಿದ್ದರು. ಶಾಸನ ಸಭೆಯ ಸದಸ್ಯರಾಗುವ ಅಭಿಲಾಷೆಯೂ ಅವರಿಗಿರಲಿಲ್ಲ. ಆದರೆ ಅವರು ಒಂದು ಶಕ್ತಿಯಾಗಿದ್ದರು ಮತ್ತು ಅವರ ಉತ್ತೇಜನ ಉಳಿದ ಉಮೇದುವಾರರ ಗೆಲುವಿಗೆ ಕಾರಣವಾಯಿತು.

೧೯೩೮-೩೯ರಲ್ಲಿ ತುರುವನೂರಿನಲ್ಲಿ 'ಅರಣ್ಯ ಸತ್ಯಾಗ್ರಹ' ಎಂಬ ಒಂದು ಚಳುವಳಿಯನ್ನು ಕಾಂಗ್ರೆಸ್‌ನವರು ಕೈಗೊಂಡರು ಆ ಸಮಯದಲ್ಲಿ ನೂರಾರು ಜನರನ್ನು ಬಂಧಿಸಿ ಜೈಲಿಗೆ ಕಳುಹಿಸಲಾಯಿತು ಆಗ ಶ್ರೀ ನಿಜಲಿಂಗಪ್ಪನವರು ದ್ವಂದ್ವಮನ ಸ್ಥಿತಿಯಲ್ಲಿದ್ದರು. ಏಕೆಂದರೆ ಅವರ ಕೆಲವು ಸ್ನೇಹಿತರೂ ಹಾಗೂ ನಾನೂ ಈ ಚಳುವಳಿಯಲ್ಲಿ ಭಾಗವಹಿಸಬೇಡಿರೆಂದೂ, ಇದು ಅವರ ವಕೀಲಿ ವೃತ್ತಿಗೆ ಹಾನಿಯನ್ನುಂಟು ಮಾಡುತ್ತದೆಂದೂ ತಿಳಿಯಪಡಿಸಿದ್ದೆವು; ಆದರೆ ಚಳುವಳಿಯ ಕರೆ ಅತ್ಯಂತ ಪ್ರಬಲವಾಗಿತ್ತು. ಆದ್ದರಿಂದ ಶ್ರೀ ಎಸ್. ನಿಜಲಿಂಗಪ್ಪನವರು ಒಂದು ದಿನ ತುರುವನೂರಿಗೆ ಹೋಗಿ ಈಚಲು ಮರವನ್ನು ಕಡಿಯಲು ಪ್ರಯತ್ನಿಸುವುದರ ಮೂಲಕ ಸತ್ಯಾಗ್ರಹಗದಲ್ಲಿ ಧುಮುಕಿದರು. ಮರುದಿನ ಮಧ್ಯರಾತ್ರಿ ಅವರನ್ನು ಬಂಧಿಸಲು ಪೋಲೀಸಲು ತಮ್ಮ ವ್ಯಾನಿನಲ್ಲಿ ಅವರ ಮನೆಯ ಬಾಗಿಲಿಗೆ ಬಂದರು. ಶ್ರೀ ಓ. ವೀರಬಸಪ್ಪ ಹಾಗೂ ನಾನು ಆ ಸಮಯದಲ್ಲಿ ಉಪಸ್ಥಿತರಿದ್ದೆವು. ಶ್ರೀ ನಿಜಲಿಂಗಪ್ಪನವರು ನಮಗೆಲ್ಲ ವಿದಾಯ ಹೇಳಿ, ವಯೋವೃದ್ಧ ತಾಯಿಯ ಆಶೀರ್ವಾದ ಪಡೆದು, ತಮ್ಮ ಮಡದಿ ಹಾಗೂ ಮಕ್ಕಳನ್ನು ಆತ್ಮೀಯವಾಗಿ ಬೀಳ್ಕೊಟ್ಟು ಪೋಲೀಸ್ ವ್ಯಾನನ್ನುಹತ್ತಿದರು. ತರುವಾಯ ನ್ಯಾಯಾಧೀಶರ ಸಮ್ಮುಖದಲ್ಲಿ ನಡೆದ ವಿಚಾರಣೆಯಲ್ಲಿ ತಪ್ಪಿತಸ್ಥರೆಂದು ರುಜವಾತಾದ್ದರಿಂದ, ಅವರಿಗೆ ಹದಿನೆಂಟು ತಿಂಗಳ ಜೈಲುವಾಸದ ಶಿಕ್ಷೆಯಾಯಿತು. ಈ ನಿಷ್ಠುರವಾದ ಸಜೆಯು ಎಲ್ಲೆಡೆ ಜನಗಳ ಸಹಾನುಭೂತಿ ಗಳಿಸಿತು ಹಾಗೂ ಚಳುವಳಿ ತೀವ್ರವಾಗಲು ಕಾರಣವಾಯಿತು

೧೯೪೦ರಲ್ಲಿ ಜಿಲ್ಲಾ ಮಂಡಳಿಗೆ ಚುನಾವಣೆ ನಡೆಯಿತು. ಕಾಂಗ್ರೆಸ್ ತನ್ನ ಉಮೇದು ವಾರರನ್ನು ನಿಲ್ಲಿಸಿ, ಅನೇಕ ಘಟಾನುಘಟಿಗಳನ್ನು ಸೋಲಿಸಿ ಭರ್ಜರಿ ಜಯಗಳಿಸಿತು. ಜಿಲ್ಲೆಗೆ ಒಳ್ಳೆಯ ಸೇವೆ ಸಲ್ಲಿಸಿದೆ ಎಂಬ ಹೆಗ್ಗಳಿಕೆ ಇದ್ದರೂ ಚುನಾವಣೆಯಲ್ಲಿ ಸೋತವರಲ್ಲಿ ನಾನೂ ಒಬ್ಬನಾಗಿದ್ದೆ. ಅನಂತರ ಶ್ರೀ ನಿಜಲಿಂಗಪ್ಪನವರನ್ನು ವಕೀಲಿ ವೃತ್ತಿಯಿಂದ ಬಹಿಷ್ಕರಿಸಿದರು. ಅದು ಅವರ ವಕೀಲಿ ಜೀವನ ಶೈಲಿಯ ಕೊನೆಯಾಯಿತು. ಅನಂತರ ಅವರು ಮಾಡಿರುವಂತಹ ತ್ಯಾಗಗಳು ಎಲ್ಲರಿಗೂ ತಿಳಿದ ವಿಷಯಗಳೇ ಆಗಿವೆ.

೧೯೪೨ರಲ್ಲಿ ಮಹಾತ್ಮಗಾಂಧಿಯವರ ಆಣತಿಯಂತೆ ಕೈಗೊಂಡ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಉಲ್ಲೇಖ ಮಾಡಲೇಬೇಕು. ಗಾಂಧೀಜಿಯವರು ಚಳುವಳಿ ಶಾಂತಯುತವಾಗಿ ನಡೆಯಲು ಬಯಸಿದ್ದರೂ ಸಹ, ಅದು ಹಿಂಸಾತ್ಮಕ ರೂಪಕ್ಕೆ ತಿರುಗಿ, ವಿಧ್ವಂಸಕ ಕೃತ್ಯ ಹಾಗೂ ಪ್ರಾಣಹಾನಿಯಲ್ಲಿ ಕೊನೆಗೊಂಡಿತು. ಅನೇಕ ಕಾಂಗ್ರೆಸ್ ಮುಖಂಡರು ಹಾಗೂ ಸಾವಿರಾರು

ಸ್ವಯಂ ಸೇವಕರನ್ನು ಬಂಧಿಸಲಾಯಿತು. ಬಂದೀಖಾನೆಗಳು ಅಧಿಕ ಸಂಖ್ಯೆಯ ಜನರಿಂದ ತುಂಬಿದವು ಹಾಗೂ ಖಾಸಗಿ ಮನೆಗಳನ್ನು ಕೂಡಾ ಕೋರಿಕೆಯ ಮೇರೆಗೆ ಜೈಲುಗಳಾಗಿ ಪರಿವರ್ತಿಸಲಾಯಿತು. ಶ್ರೀ ನಿಜಲಿಂಗಪ್ಪನವರನ್ನು ಕೋಲಾರದ ಜೈಲಿನಲ್ಲಿ ಉಳಿಸಿಕೊಳ್ಳಲಾಯಿತು. ಈ ರೀತಿ ಚಳುವಳಿಯನ್ನು ಹತೋಟಿಗೆ ತರಲಾಯಿತು. ಈ ಚಳುವಳಿಯ ಸಮಯದಲ್ಲಿ ಶ್ರೀ ರಾಮನಾಥನ್‌ರವರು ಕಾನೂನು ಮತ್ತು ವ್ಯವಸ್ಥೆಯ ಸಚಿವರಾಗಿದ್ದರು. ಸ್ವಲ್ಪ ಸಮಯದ ನಂತರ ಇವರು ನಿವೃತ್ತಿ ಹೊಂದಿದರು. ನನಗೆ ಆ ಇಲಾಖೆ ಲಭಿಸಿತು.

ಜೈಲಿನಲ್ಲಿದ್ದ ಬಂಧಿತರನ್ನು ಪೆರೋಲ್ ಮೇಲೆ ಬಿಡುಗಡೆ ಮಾಡುವ ಅವಕಾಶವಿತ್ತು. ಆದರೆ ಶ್ರೀ ರಾಮನಾಥನ್‌ರವರು ಈ ವಿಷಯದಲ್ಲಿ ಅತ್ಯಂತ ಕಟ್ಟುನಿಟ್ಟಾಗಿದ್ದರು. ನಾನು ಕಾನೂನು ಮತ್ತು ಸುವ್ಯವಸ್ಥೆ ಖಾತೆಯ ಅಧಿಕಾರ ವಹಿಸಿಕೊಂಡ ದಿನವೇ ಶ್ರೀಮತಿ ರತ್ನಮ್ಮ ಮಧ್ವಾರಾವ್‌ರವರು ವಕೀಲರ ಮುಖಾಂತರ ಕಳುಹಿಸಿದ ಅರ್ಜಿಯು ನನ್ನ ಕೈಸೇರಿತು. ಶ್ರೀಮತಿ ರತ್ನಮ್ಮನವರು ತಮ್ಮ ಅನಾರೋಗ್ಯದಿಂದ ನರಳುತ್ತಿದ್ದ ಮಗುವಿನ ಶುಶ್ರೂಷೆ ಮಾಡಲು ಪೆರೋಲ್ ಮೇಲೆ ತಮ್ಮನ್ನು ಬಿಡುಗಡೆ ಮಾಡಬೇಕೆಂದು ಕೋರಿ ಬರೆದ ಅರ್ಜಿ ಅದಾಗಿತ್ತು. ಈ ಮಹಿಳೆಯ ಮನೆತನದವರ ಪರಿಚಯ ನನಗೆ ಚೆನ್ನಾಗಿತ್ತು. ಇವರು ಶಿವಮೊಗ್ಗದ ಅತ್ಯಂತ ಸುಪರಿಚಿತ ವಕೀಲರಾದ ಶ್ರೀ ಸಿ. ಸುಬ್ಬಾರಾವ್‌ರವರ ಮನೆತನದವರು. ಈ ಮಹಿಳೆಯ ಪತಿ ನನ್ನ ಸ್ನೇಹಿತರಾಗಿದ್ದರು. ಆದ್ದರಿಂದ ಆ ದಿನವೇ ನಾನು. ಸ್ಥಳೀಯ ಜಿಲ್ಲಾ ಮ್ಯಾಜಿಸ್ಟ್ರೇಟರು ಹಾಗೂ ಪೋಲೀಸ್ ವರಿಷ್ಠಾಧಿಕಾರಿಯವರೊಡನೆ ಸಮಾಲೋಚಿಸುವುದನ್ನು ಅಲಕ್ಷಿಸಿ, ಆ ಕ್ಷಣವೇ ಆಕೆಯ ಬಿಡುಗಡೆಗಾಗಿ ಆಜ್ಞೆಮಾಡಿದೆ.

ಆ ದಿನದಿಂದ ಪೆರೋಲ್ ಮೇಲೆ ಬಿಡುಗಡೆ ಮಾಡಲು ಕೋರಿ ನೂರಾರು ಅರ್ಜಿಗಳ ಸುರಿಮಳೆಯಾಯಿತು. ನಾನು ಈ ವಿಚಾರದಲ್ಲಿ ಬಹಳ ಉದಾರವಾಗಿದ್ದೆ ಮತ್ತು ಅನೇಕರನ್ನು ಪೆರೋಲ್ ಮೇಲೆ ಬಿಡುಗಡೆ ಮಾಡಿದೆ. ಆಗ ಕಿವಿಯ ತೊಂದರೆಯಿಂದ ನರಳುತ್ತಿದ್ದ ಶ್ರೀ ಕೆ.ಸಿ. ರೆಡ್ಡಿಯವರನ್ನು ವೈದ್ಯಕೀಯ ಚಿಕಿತ್ಸೆಗೆ, ಅಸ್ವಸ್ಥರಾಗಿದ್ದ ತಮ್ಮ ತಂದೆ ರಾವ್‌ಸಾಹೇಬ್ ಚನ್ನಯ್ಯನವರನ್ನು ಭೇಟಿಯಾಗಲು ಶ್ರೀ ಹೆಚ್. ಸಿ. ದಾಸಪ್ಪನವರನ್ನು ಹಾಗೂ ರಾಮನಗರದಲ್ಲಿದ್ದ ವಿವಾಹ ಸಮಾರಂಭಕ್ಕೆ ಹೋಗಲು ಶ್ರೀ ಕೆ. ಹನುಮಂತಯ್ಯನವರನ್ನು ಪೆರೋಲ್ ಮೇಲೆ ಬಿಡುಗಡೆ ಮಾಡುವ ಭಾಗ್ಯ ನನ್ನದಾಯಿತು. ಎಂಬುವ ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸಬಹುದು. ಶ್ರೀ ಎಸ್. ನಿಜಲಿಂಗಪ್ಪನವರನ್ನು ಬಿಡುಗಡೆ ಮಾಡಲು ಬಹಳ ಕಾತರದಿಂದಿದ್ದೆ. ಅವರಿಂದ ಬಿಡುಗಡೆಯ ಕೋರಿಕೆ ಪತ್ರವನ್ನು ತರಲು ನಮ್ಮಿಬ್ಬರಿಗೂ ಪರಿಚಯವಿರುವ ಸ್ನೇಹಿತರೊಬ್ಬರಿಗೆ ಹೇಳಿದೆ. ಆದರೆ ಶ್ರೀ ನಿಜಲಿಂಗಪ್ಪನವರು ಪೆರೋಲ್ ಮೇಲೆ ಬಿಡುಗಡೆ ಹೊಂದಲು ನಿರಾಕರಿಸಿದರು. ಹಾಗೂ ಶಿಕ್ಷೆಯನ್ನು ಅನುಭವಿಸಲು ಬಯಸಿದರು!

ಅನಂತರ ಶ್ರೀ ಎಸ್. ನಿಜಲಿಂಗಪ್ಪನವರು ಸಲ್ಲಿಸಿದ ಸೇವೆ ಸುವಿದಿತ ಮತ್ತು ಇದಕ್ಕೆ ವಿಶೇಷವಾದ ವಿವರಣೆಯ ಅಗತ್ಯವಿಲ್ಲ. ಅವರು ನಮ್ಮ ದೇಶದ ಸ್ವಾತಂತ್ರ್ಯ ಶ್ರೀ ಎಸ್. ನಿಜಲಿಂಗಪ್ಪನವರು ಆಗಿನ ಕರ್ನಾಟಕ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ನಂತರ ಹಾಗೂ ಅಖಿಲ ಕರ್ನಾಟಕದ ಸಾಧನೆಯ ಜವಾಬ್ದಾರಿಯನ್ನು ಹೊತ್ತನಂತರ, ಅವರ ಕಾರ್ಯ ಚಟುವಟಿಕೆಗಳ

ಪರಿಧಿ ದೊಡ್ಡದಾಯಿತು. ಛಿದ್ರಛಿದ್ರವಾಗಿದ್ದ, ವಿವಿಧ ರಾಜ್ಯಗಳಲ್ಲಿ ಹಂಚಿ ಹೋದ ಕನ್ನಡ ಮಾತನಾಡುವ ಜನಗಳ ಪ್ರದೇಶಗಲನ್ನೆಲ್ಲ ಒಗ್ಗೂಡಿಸಿದ ಪ್ರಮುಖ ಶಿಲ್ಪಿ ಇವರು.

೧೯೫೬ರಲ್ಲಿ ಅವರು ವಿಶಾಲ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿಯಾದರು. ಮತ್ತು ಶ್ರೀ ಬಿ.ಡಿ. ಜತ್ತಿಯವರು ಮುಖ್ಯಮಂತ್ರಿಯಾದ ಕಾಲಾವಧಿಯನ್ನು ಹೊರತು ಪಡಿಸಿ, ೧೯೬೭ರಲ್ಲಿ ಅಖಿಲಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗುವವರೆಗೂ ಈ ಸ್ಥಾನದಲ್ಲಿ ಮುಂದುವರೆದರು. ತಮ್ಮ ಅಧಿಕಾರಾವಧಿಯಲ್ಲಿ ಅನೇಕ ಏರಿಳಿತಗಳಿದ್ದರೂ ಸಹ, ವಿರೋಧಿಗಳ ಆಪಾದನೆಗಳಿಗೆ ಎದೆಗುಂದದೆ, ದೃಢ ನಿರ್ಧಾರದಿಂದ ಆಡಳಿತದ ಕಾರ್ಯಭಾರವನ್ನು ನಿರ್ವಹಿಸಿದರು. ದಾವಣಗೆರೆಯಲ್ಲಿ ವೈದ್ಯಕೀಯ ಕಾಲೇಜು ಸ್ಥಾಪನೆ ಚಿಗಟೇರಿ ಆಸ್ಪತ್ರೆಯನ್ನು ಎಲ್ಲ ಆಧುನಿಕ ಸೌಲಭ್ಯಗಳೊಂದಿಗೆ' ಪ್ರಥಮ ದರ್ಜೆ ಆಸ್ಪತ್ರೆಯನ್ನಾಗಿ ಮಾಡಿದ ಪ್ರಗತಿ, ವಿಶಾಲವಾದ ಕಟ್ಟಡದ ಬಾಪೂಜಿ ವೈದ್ಯಕೀಯ ಸಂಸ್ಥೆ, ಒಂದು ಕೋಟಿ ರೂ. ವೆಚ್ಚದಲ್ಲಿ ವಾಣಿವಿಲಾಸ ಸಾಗರ ದಿಂದ ಚಿತ್ರದುರ್ಗಕ್ಕೆ ಜಲಾನುಕೂಲದ ಸೃಷ್ಟಿ - ಇವು ಮುಖ್ಯವಾಗಿ (ಚಿತ್ರದುರ್ಗ ಜಿಲ್ಲೆಗೆ) ಶ್ರೀ ಎಸ್. ನಿಜಲಿಂಗಪ್ಪನವರ ಪ್ರಯತ್ನದಿಂದಾದ ಸ್ಮರಣೀಯ ಕಾರ್ಯಗಳು.

ಅವರ ಕೆಲವು ಅನುಯಾಯಿಗಳು ಸ್ವಾರ್ಥಕ್ಕಾಗಿ ಅವರ ಹೆಸರನ್ನು ಬಳಸಿಕೊಂಡರೂ ಸಹ, ನನಗೆ ತಿಳಿದ ಹಾಗೆ ಅವರು ಪ್ರಾಮಾಣಿಕ ವ್ಯಕ್ತಿಯಾಗಿದ್ದರು. ಈ ಅನುಯಾಯಿಗಳೇ ಮುಂದೆ ಇವರನ್ನು ಹೊರತಳ್ಳಿ ಇವರ ವೈರಿಗಳಾದರು.

ಕಾಂಗ್ರೆಸ್ ಇತಿಹಾಸದಲ್ಲಿಯೇ ಅತ್ಯಂತ ಕುತೂಹಲಕರವಾದ ಘಟನೆಯೆಂದರೆ, ಇವರು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, ಸ್ವಾರ್ಥ ಸಾಧನೆಗಾಗಿ ಪ್ರಜಾಪ್ರಭುತ್ವದ ದುರುಪಯೋಗವನ್ನು ಬಹಿರಂಗ ಪಡಿಸುವಲ್ಲಿ ಹಾಗೂ ಅಂತಹ ಪ್ರಜಾಪ್ರಭುತ್ವದ ಅಪಹಾಸ್ಯ ಮಾಡುವಲ್ಲಿ ಇವರು ತೋರಿದ ಪಾತ್ರ ಮಹತ್ತ್ವದ್ದಾಗಿದೆ.

ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿಯವರ ಶೋಚನೀಯ ಮರಣದ ನಂತರ ಹೊಸ ಪ್ರಧಾನ ಮಂತ್ರಿಯವರನ್ನು ಕಾಂಗ್ರೆಸ್ ಸಂಸದೀಯ ಪಕ್ಷದಿಂದ ಚುನಾಯಿಸಬೇಕಾಗಿತ್ತು. ಅನುಭವ ಹಾಗೂ ಜೇಷ್ಠತೆಯ ಆಧಾರದ ಮೇಲೆ ಶ್ರೀ ಮುರಾರ್ಜಿ ದೇಸಾಯಿಯವರು ಪ್ರಧಾನ ಮಂತ್ರಿ ಹುದ್ದೆಗೆ ತಾವು ಹಕ್ಕುದಾರರೆಂದು ಮುಂದೆ ಬಂದರು. ಆದರೆ ಶ್ರೀಮತಿ ಗಾಂಧಿಯವರು ಆಯ್ಕೆಯಾದರು. ಆಗಿನ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಕಾಮರಾಜ್‌ರವರು ಹಾಗೂ, ಶ್ರೀ ನಿಜಲಿಂಗಪ್ಪನವರು ಮತ್ತು ಅವರ ಸಿಂಡಿಕೇಟ್ ಸದಸ್ಯರು ಶ್ರೀಮತಿ ಗಾಂಧಿಯವರ ಉಮೇದುವಾರಿಕೆಯನ್ನು ಪ್ರಮುಖವಾಗಿ ಅವರ ತಂದೆ ಜವಾಹರ್‌ಲಾಲ್ ನೆಹರೂರವರ ನೆನಪಿನ ಗೌರವಾರ್ಥವಾಗಿ ಅನುಮೋದಿಸಿದರು. ಶ್ರೀಮತಿ ಗಾಂಧಿಯವರ ಯಶಸ್ಸಿಗೆ ಶ್ರೀ ಕಾಮರಾಜ್ ಹಾಗೂ ಶ್ರೀ ನಿಜಲಿಂಗಪ್ಪನವರೇ ಪ್ರಮುಖ ಹೊಣೆಗಾರರೆಂದರೆ ಅತಿಶಯೋಕ್ತಿಯಲ್ಲ.

೧೯೬೭ರ ಚುನಾವಣೆಯ ನಂತರ ಅದೇ ಘಟನೆಗಳ ಪುನರಾವರ್ತನೆಯಾಯಿತು. ಶ್ರೀ ಮುರಾರ್ಜಿಯವರು ಪುನಃ ತಮ್ಮ ಹಕ್ಕನ್ನು ಮುಂದಿಟ್ಟರು. ಶ್ರೀ ನಿಜಲಿಂಗಪ್ಪನವರು ಮತ್ತು ಶ್ರೀ ಕಾಮರಾಜ್‌ರವರು ಪುನಃ ಶ್ರೀಮತಿ ಗಾಂಧಿಯವರಿಗೆ ಬೆಂಬಲ ಸೂಚಿಸಿದರು. ಆ ಸಂದರ್ಭದಲ್ಲಿ ಶ್ರೀಮತಿ ಗಾಂಧಿಯವರು ಪ್ರಧಾನ ಮಂತ್ರಿಯವರಾಗಿ ಮುಂದುವರಿಯಬೇಕು ಹಾಗೂ

ಶ್ರೀ ಮುರಾರ್ಜಿಯವರು ಉಪಪ್ರಧಾನ ಮಂತ್ರಿಯಾಗಬೇಕು ಎಂಬ ಒಪ್ಪಂದಕ್ಕೆ ಬರಲಾಯಿತು. ಹೀಗೆ ಚುನಾವಣೆಯನ್ನು ನಿವಾರಿಸಲಾಯಿತು. ಶ್ರೀ ನಿಜಲಿಂಗಪ್ಪ ಹಾಗೂ ಶ್ರೀಮತಿ ಗಾಂಧಿಯವರ ಬಾಂಧವ್ಯ ಸ್ನೇಹ ಹಾಗೂ ಆತ್ಮೀಯತೆಯಿಂದ ಕೂಡಿತ್ತು.

ಶ್ರೀ ಕಾಮರಾಜ್‌ರವರು ಅಹಿತಕರ ಸನ್ನಿವೇಶಗಳಲ್ಲಿ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ರಾಜಿನಾಮೆ ಕೊಟ್ಟರು. ಈ ಸ್ಥಾನಕ್ಕೆ ಒಬ್ಬ ಹೊಸ ಕಾಂಗ್ರೆಸ್ ಮುಖಂಡರನ್ನು ತುಂಬ ಬೇಕಾಗಿತ್ತು. ಶ್ರೀಮತಿ ಇಂದಿರಾಗಾಂಧಿಯವರನ್ನೊಳಗೊಂಡು ಕಾಂಗ್ರೆಸ್ ಹೈ ಕಮ್ಯಾಂಡ್ ಶ್ರೀ ನಿಜಲಿಂಗಪ್ಪನವರನ್ನು ಆಯ್ಕೆ ಮಾಡಿತು. ಆದರೆ ಶ್ರೀ ಎಸ್. ನಿಜಲಿಂಗಪ್ಪನವರ ಕೆಲವು ಸ್ನೇಹಿತರು, ಅವರಿಗೆ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಪದವಿ ಹೂವಿನ ಹಾಸಿಗೆಯಲ್ಲ ಎಂಬ ಕಾರಣಕ್ಕಾಗಿ ಮುಖ್ಯಮಂತ್ರಿಯಾಗಿ ಮುಂದುವರಿಯಲು ಸಲಹೆ ಮಾಡಿದರು. ಪ್ರಧಾನಮಂತ್ರಿ ನೆಹರೂ ಹಾಗೂ ಹಿಂದಿನ ಕಾಂಗ್ರೆಸ್ ಅಧ್ಯಕ್ಷರ ನಡುವಿನ ಸಂಬಂಧವನ್ನು ನೆನಪಿಸಿಕೊಳ್ಳಲಾಯಿತು. ನೆಹರೂ ಜೊತೆ ಒಮ್ಮತಕ್ಕೆ ಬರಲು ಸಾಧ್ಯವಾಗದೆ ಶ್ರೀ ಜೆ. ಬಿ. ಕೃಪಲಾನಿಯವರು ಅಧ್ಯಕ್ಷ ಸ್ಥಾನಕ್ಕೆ ಹಾಗೂ ಕಾಂಗ್ರೆಸ್ಸಿಗೆ ರಾಜಿನಾಮೆ ಕೊಟ್ಟರು. ಅದೇ ರೀತಿ ಶ್ರೀ ಪುರುಷೋತ್ತಮದಾಸ್ ಟಂಡನ್‌ರವರು ನೆಹರೂ ಜೊತೆಗಿನ ಭಿನ್ನಾಭಿಪ್ರಾಯದ ಕಾರಣ ರಾಜಿನಾಮೆ ಕೊಟ್ಟರು. ಶ್ರೀ ಕಾಮರಾಜ್‌ರವರೂ ಸಹ ಅಹಿತಕರ ಸನ್ನಿವೇಶಗಳಲ್ಲಿಯೇ ತಮ್ಮ ಪದವಿಯನ್ನು ತ್ಯಜಿಸಿದ್ದರು. ನೆಹರೂಗೆ ಅನುಗುಣವಾಗಿರದ ಹೊರತು, ಯಾವ ಕಾಂಗ್ರೆಸ್ ಅಧ್ಯಕ್ಷರೂ ತಮ್ಮ ಸ್ಥಾನದಲ್ಲಿ ಮುಂದುವರೆಲು ಸಾಧ್ಯವಿರಲಿಲ್ಲ. ನೆಹರೂ ಒಬ್ಬರೇ ಪ್ರಧಾನ ಮಂತ್ರಿಯವರಾಗಿಯೂ, ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿಯೂ ಮುಂದುವರಿಯುವ ಪ್ರಸ್ತಾಪವಿತ್ತು. ಆದರೆ ವಿಲಕ್ಷಣ ಸನ್ನಿವೇಶವನ್ನು ತಪ್ಪಿಸುವುದಕ್ಕಾಗಿ ಮತ್ತು ಪ್ರಧಾನ ಮಂತ್ರಿ ಹಾಗೂ ಪಕ್ಷದ ಅಧ್ಯಕ್ಷರ ನಡುವೆ ಪದೇ ಪದೇ ನಡೆಯುವ ಮುಖಾಮುಖಿ ಘರ್ಷಣೆಗೆ ಪೂರ್ಣವಿರಾಮವಿಡಲು ಶ್ರೀಮತಿ ಗಾಂಧಿಯವರನ್ನು ಕಾಂಗ್ರೆಸ್ ಅಧ್ಯಕ್ಷರಾಗಿ ಮಾಡಲಾಯಿತು. ಹಿತಕರವಾದ ಮೈಸೂರು ಮುಖ್ಯಮಂತ್ರಿ ಸ್ಥಾನವನ್ನು ಬಿಡುವ ಮುನ್ನ ಶ್ರೀ ನಿಜಲಿಂಗಪ್ಪನವರು ಈ ಎಲ್ಲ ಸಂಗತಿಗಳನ್ನು ಗಮನಿಸಿದ್ದಾರೆಂಬುದರ ಬಗೆಗೆ ನನಗೆ ಖಾತ್ರಿಯಿಲ್ಲ. ಶ್ರೀಮತಿ ಗಾಂಧಿಯವರೊಂದಿಗಿನ ಸ್ನೇಹಮಯೀ ಆತ್ಮೀಯ ಬಾಂಧವ್ಯ ಅವರನ್ನು ಜೋಗುಳದಂತೆ 'ನಿದ್ದೆ'ಗೆ ತಳ್ಳಿತು. ಆಗ ಅವರಿಗಾಗಿ ನೇಯ್ದ ಬಲೆಯಲ್ಲಿ ಬಿದ್ದರೇನೋ ಎಂದು ಈಗ ತೋರುತ್ತದೆ. ಅಧ್ಯಕ್ಷ ಪದವಿಯನ್ನು ಒಪ್ಪಿಕೊಳ್ಳುವಂತೆ ಶ್ರೀಮತಿ ಗಾಂಧಿಯವರು ಮನ ಒಲಿಸಿದರು.

ಪ್ರಾರಂಭದ ಹಂತದಲ್ಲಿ ಈ ಇಬ್ಬರು ನಾಯಕರ ನಡುವಿನ ಸಂಬಂಧ ಸ್ನೇಹದಿಂದ ಕೂಡಿತ್ತು. ಆದರೆ ಬಹಳ ಬೇಗ ಭಿನ್ನಾಭಿಪ್ರಾಯಗಳು ನುಸುಳಿದ್ದರಿಂದ. ಅವರಿಬ್ಬರ ಸಂಬಂಧ ಬಹಳಷ್ಟು ಬಿಗಡಾಯಿಸಿತು ಬಹುಶಃ ಶ್ರೀ ನಿಜಲಿಂಗಪ್ಪನವರು ಶ್ರೀ ಮುರಾರ್ಜಿ ದೇಸಾಯಿ ಹಾಗೂ ಇನ್ನಿತರ ಸಿಂಡಿಕೇಟ್ ಸದಸ್ಯರೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವುದನ್ನು ಶ್ರೀಮತಿ ಗಾಂಧಿಯವರು ಇಚ್ಛಿಸಲಿಲ್ಲ. ಶ್ರೀಮತಿ ಗಾಂಧಿಯವರಿಂದ ನೇಮಿಸಲ್ಪಟ್ಟ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯರನ್ನು ಶ್ರೀ ನಿಜಲಿಂಗಪ್ಪನವರು ಹೊರ ಹಾಕಿದರು. ಇದರ ಜೊತೆಗೆ ಸಮತಾವಾದಕ್ಕೆ ಬಹಳಷ್ಟು ಹತ್ತಿರವಾಗಿದ್ದ, ಶ್ರೀಮತಿ ಗಾಂಧಿಯವರ ಉತ್ಕಟ ಸಮಾಜವಾದಕ್ಕೆ ನಿಜಲಿಂಗಪ್ಪನವರು ಏನೂ ಕೊಡುಗೆಯನ್ನು ಕೊಡಲಿಲ್ಲ. ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಯ ಸಮ್ಮುಖದಲ್ಲಿ ಮಾಡಿದ

ಅವರ ಒಂದು ಭಾಷಣದಲ್ಲಿ ಅವರು, ಖಾಸಗಿ ಉದ್ಯಮಗಳಿಗೆ ಪ್ರೋತ್ಸಾಹವನ್ನು ಪ್ರತಿಪಾದಿಸಿದರು. ಆದ್ದರಿಂದ ಅವರಿಗೆ 'ಪ್ರಗತಿ ವಿರೋಧಿ' ಎಂದು ಹಣೆಪಟ್ಟಿ ಹಚ್ಚಲಾಯಿತು.

ಶ್ರೀ ಝಕೀರ್ ಹುಸೇನ್‌ರವರು ಇದ್ದಕ್ಕಿದ್ದ ಹಾಗೇ ಮರಣ ಹೊಂದಿದರು. ದೇಶದ ಹೊಸ ರಾಷ್ಟ್ರಪತಿಯವರನ್ನು ಚುನಾಯಿಸಬೇಕಾಯಿತು. ಕಾಂಗ್ರೆಸ್ ಅಭ್ಯರ್ಥಿಯನ್ನು ಆರಿಸಲು ಕಾಂಗ್ರೆಸ್ ಸಂಸದೀಯ ಸಮಿತಿಯು ಬೆಂಗಳೂರಿನಲ್ಲಿ ಸಭೆ ಸೇರಿತು. ಶ್ರೀಮತಿ ಗಾಂಧಿಯವರು ಶ್ರೀ ಜಗಜೀವನರಾಂ ಅವರಿಗೆ ಬೆಂಬಲ ವ್ಯಕ್ತಪಡಿಸಿದರು. ಮತ್ತು ಶ್ರೀ ಮುರಾರ್ಜಿ ದೇಸಾಯಿಯವರು ಶ್ರೀ ಎನ್. ಸಂಜೀವರೆಡ್ಡಿಯವರ ಹೆಸರನ್ನು ಪ್ರಸ್ತಾಪಿಸಿದರು. ೬:೨ ಬಹುಮತಗಳ ಅಂತರದಲ್ಲಿ ಶ್ರೀ ಎನ್. ಸಂಜೀವರೆಡ್ಡಿ ಯವರು ಅಧಿಕೃತ ಅಭ್ಯರ್ಥಿಯಾಗಿ ಆಯ್ಕೆಯಾದರು. ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಮುರಾರ್ಜಿ ದೇಸಾಯಿ, ಹಾಗೂ ಶ್ರೀ ಚವ್ಹಾಣ್‌ರವರು ಶ್ರೀ ಸಂಜೀವರೆಡ್ಡಿಯವರ ಪರ ಮತ್ತು ಶ್ರೀಮತಿ ಗಾಂಧಿ ಹಾಗೂ ಶ್ರೀ ಎಫ್. ಎ. ಅಹಮದ್‌ರವರು ಶ್ರೀ ಜಗಜೀವನರಾಂ ಅವರ ಪರ ಮತ ಚಲಾಯಿಸಿದರು. ಆದ್ದರಿಂದ ಶ್ರೀ ಎನ್. ಸಂಜೀವರೆಡ್ಡಿಯವರು ರಾಷ್ಟ್ರಪತಿ ಸ್ಥಾನಕ್ಕೆ ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿಯಾದರು. ಇದು ಕಾಂಗ್ರೆಸ್ ಪಕ್ಷ ಒಡೆದು ಹೋಳಾಗುವುದರ ಸೂಚನೆಯಾಯಿತು. ಶ್ರೀಮತಿ ಗಾಂಧಿಯವರು ಮುರಾರ್ಜಿಯವರನ್ನು ಅವರ ಹಣಕಾಸು ಖಾತೆಯಿಂದ ಬಿಡುಗಡೆ ಮಾಡಿದರು. ಅಂತಿಮವಾಗಿ ಮುರಾರ್ಜಿಯವರು ಆ ಸ್ಥಾನಕ್ಕೆ ರಾಜಿನಾಮೆ ಕೊಟ್ಟರು.

ಶ್ರೀಮತಿ ಗಾಂಧಿಯವರು ತಾವು ಬಹುಮತ ನಿರ್ಧಾರಕ್ಕೆ ಬದ್ಧರಾಗಿರುವುದಾಗಿಯೂ ಮತ್ತು ಶ್ರೀ ಸಂಜೀವ ರೆಡ್ಡಿಯವರನ್ನು ಅನುಮೋದಿಸುವುದಾಗಿಯೂ ಮೊದಲು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ನಾಮ ನಿರ್ದೇಶನ ಪತ್ರದಲ್ಲಿ ಸಹ ಅವರು ರೆಡ್ಡಿಯವರ ಹೆಸರನ್ನು ಪ್ರಸ್ತಾಪಿಸಿದ್ದರು ಮತ್ತು ಶ್ರೀ ರೆಡ್ಡಿಯವರಿಗೆ ಬೆಂಬಲ ಕೊಡುವುದಾಗಿ ವೈಯಕ್ತಿಕವಾಗಿಯೂ ಆಶ್ವಾಸನೆ ಕೊಟ್ಟಿದ್ದರು.

ಅಷ್ಟರಲ್ಲಿ, ಪ್ರದೇಶ ಕಾಂಗ್ರೆಸ್ ಸಮಿತಿ ನಿರ್ಧಾರ ಕೈಗೊಂಡ ಒಂದು ಘಂಟೆಯ ಅವಧಿಯಲ್ಲಿ ಶ್ರೀ ವಿ. ವಿ. ಗಿರಿಯವರು ತಾವು ರಾಷ್ಟ್ರಪತಿ ಸ್ಥಾನಕ್ಕೆ ಸ್ವತಂತ್ರ ಅಭ್ಯರ್ಥಿಯಾಗಿ ಚುನಾವಣೆಗೆ ನಿಲ್ಲುವುದಾಗಿ ಪ್ರಕಟಿಸಿದರು. ಒಂದು ವಾರದ ನಂತರ ಶ್ರೀ ಜಗಜೀವನರಾಂ ಮತ್ತು ಶ್ರೀ ಎಫ್ ಎ. ಅಹಮದ್‌ರವರು ತಮ್ಮ ಆತ್ಮಸಾಕ್ಷಿಯಂತೆ ನಡೆದುಕೊಳ್ಳುವುದಾಗಿ ತಿಳಿಸಿ, ಶ್ರೀ ರೆಡ್ಡಿಯವರಿಗೆ ಕೊಟ್ಟ ಬೆಂಬಲವನ್ನು ಹಿಂತೆಗೆದುಕೊಳ್ಳುವುದರ ಮೂಲಕ ಒಂದು ದೊಡ್ಡ ಬಾಂಬ್ ಹಾಕಿದರು. ಕೂಡಲೇ ಶ್ರೀಮತಿ ಗಾಂಧಿಯವರು 'ಆತ್ಮಸಾಕ್ಷಿ' ವಿಚಾರಸರಣಿಯನ್ನು ಮುಂದಿಟ್ಟು, ತಮ್ಮ ಬೆಂಬಲವನ್ನು ಶ್ರೀ ವಿ. ವಿ. ಗಿರಿಯವರಿಗೆ ಕೊಟ್ಟರು. ಕಾಂಗ್ರೆಸ್ ಪಾಳೆಯದಲ್ಲಿ ಇಂಡಿಕೇಟ್ ಮತ್ತು ಸಿಂಡಿಕೇಟ್ ಎಂದು ಜಿಲ್ಲಾಮಟ್ಟದ ವಿಭಜನೆಯಾಯಿತು. ಇದೇ ವಿಭಜನೆ ರಾಜ್ಯ ಶಾಸನ ಸಭೆಯಲ್ಲೂ ಪ್ರತಿಭಟಿಸಿತು. ದೇಶದಲ್ಲೆಲ್ಲಾ ಭರದಿಂದ ಪ್ರಚಾರ ಮಾಡಲಾಯಿತು. ಶ್ರೀಮತಿ ಇಂದಿರಾ ಗಾಂಧಿ ಸಂಪುಟದ ಸಚಿವರೆಲ್ಲ ಶ್ರೀ ವಿ. ವಿ. ಗಿರಿಯವರ ಪರ ಪ್ರಚಾರದಲ್ಲಿ ತೊಡಗಿದ್ದರು. ಮತದಾನದ ದಿನ ಶ್ರೀ ನಿಜಲಿಂಗಪ್ಪನವರು ಹಾಗೂ ಶ್ರೀಮತಿ ಗಾಂಧಿಯವರನ್ನೊಳಗೊಂಡು ಎರಡೂ ಕಡೆಯ ಮುಖಂಡರು ತಮ್ಮ ತಮ್ಮ ಅಭ್ಯರ್ಥಿಯಪರ ಪ್ರಚಾರ ಮಾಡುತ್ತಾ ಲೋಕಸಭೆ

ಮತಗಟ್ಟೆಯ ಬಳಿ ಹಾಜರಿದ್ದರು. ಪಕ್ಷದ ಅಧಿಕೃತ ಅಭ್ಯರ್ಥಿಯು ಸೋಲಲ್ಪಟ್ಟು ಶ್ರೀ ವಿ. ವಿ. ಗಿರಿಯವರು ಆಯ್ಕೆಯಾದರು.

ಕಾಂಗ್ರೆಸ್ ಕಟ್ಟಳೆ ವಿರುದ್ಧ ನಡೆದುಕೊಂಡವರ ಮೇಲೆ ಶಿಸ್ತುಕ್ರಮ ಕೈಗೊಳ್ಳಲಾಯಿತು. ಶ್ರೀಮತಿ ಗಾಂಧಿ ಮತ್ತು ಅವರ ಜೊತೆಯವರನ್ನು ಕಾಂಗ್ರೆಸ್ ಪಕ್ಷದಿಂದ ಉಚ್ಚಾಟಿಸಲಾಯಿತು. ಪಕ್ಷಕ್ಕೆ ನಿಷ್ಠೆಯುಳ್ಳ ಕೆಲವು ಸಚಿವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರು. ಆದರೆ ಲೋಕಸಭೆಯ ಅನೇಕ ಕಾಂಗ್ರೆಸ್ ಸದಸ್ಯರು ಶ್ರೀಮತಿ ಗಾಂಧಿಯವರ ಪರ ಹೋಗಲು ಬಯಸಿದರು. ಲೋಕಸಭೆಯಲ್ಲಿದ್ದ ಸಚಿವರ ಸಂಖ್ಯೆ ೨೮೦ ಇವರಲ್ಲಿ ೨೦೦ ಕ್ಕೂ ಹೆಚ್ಚು ಸಚಿವರು ಕಾಂಗ್ರೆಸ್ ಹೊಸ್ತಿಲನ್ನು ದಾಟಿ ಇಂದಿರಾಗಾಂಧಿಯವರ ಗುಂಪನ್ನು ಸೇರಿದರು. ಕೇವಲ ೬೪ ಜನ ಲೋಕಸಭೆ ಸದಸ್ಯರು ಮಾತ್ರ ಹಳೆಯ ಸಂಘಟನೆಗೆ ನಿಷ್ಠಾನವಂತರಾಗಿ ಉಳಿದರು. ಇವರು ಶ್ರೀ ಮುರಾರ್ಜಿ ಹಾಗೂ ಡಾ. ರಾಮ್ ಸುಭಗ್‌ಸಿಂಗ್ ಅವರ ನೇತೃತ್ವದಲ್ಲಿ ವಿರೋಧೀ ಸ್ಥಾನದಲ್ಲಿ ಕುಳಿತರು.

ಹೀಗೆ ಹಳೆಯ ಕಾಂಗ್ರೆಸ್‌ನಿಂದ ಹೊಸ ಕಾಂಗ್ರೆಸ್ ಪಕ್ಷದ ಉದಯವಾಯಿತು. ಇದರ ಪ್ರಭಾವ ರಾಜ್ಯ ಶಾಸನ ಸಭೆಯ ಮೇಲೂ ಆಯಿತು. ಆಡಳಿತ ಕಾಂಗ್ರೆಸ್ ಪಕ್ಷದ ಮಧ್ಯಂತರ ಸಲಹಾ ಸಮಿತಿಗಳನ್ನು ಪ್ರತಿಯೊಂದು ರಾಜ್ಯದಲ್ಲಿಯೂ ನೇಮಿಸಲಾಯಿತು. ಈ ಅಹಿತಕರ ಘಟನೆಗಳು ಸದಸ್ಯರ ಸ್ವಾಮಿದ್ರೋಹ ಹಾಗೂ ಪಕ್ಷಾಂತರ ಮೇಲೆ ಬೆಳಕು ಚೆಲ್ಲಿದವು. ಈ ಪಕ್ಷಾಂತರಗಳು ಸದಸ್ಯರ ನೈತಿಕತೆಯನ್ನು ಬತ್ತಿಸುವ ಭಯಂಕರ ಪಿಡುಗುಗಳಾದವು. ನಮ್ಮ ನಾಯಕರಿಗೆ ತತ್ವಗಳ ಹಾಗೂ ಸಿದ್ಧಾಂತಗಳ ಮಾರ್ಗದರ್ಶನವಿದೆಯೇ ಮತ್ತು ಈ ಗದ್ದಲದಲ್ಲಿ ಪ್ರಜಾಪ್ರಭುತ್ವ ಸಫಲವಾಗಲು ಸಾಧ್ಯವೇ, ಎಂಬುದೇ ಸೋಜಿಗದ ಸಂಗತಿಯಾಗಿದೆ.

ಸ್ವಾತಂತ್ರ್ಯ ಪಡೆದು ಮುವತ್ನಾಲ್ಕು ವರ್ಷಗಳು ಉರುಳಿ ಹೋದವು. ಆದರೆ ನಾಗರಿಕನ ಮೂಲಭೂತ ಜವಾಬ್ದಾರಿಗಳು ನಮಗೆ ಮನವರಿಕೆಯಾಗಿಲ್ಲ. ಪ್ರಜೆಗಳನ್ನು ಪ್ರತಿನಿಧಿಸುವ ನಮ್ಮ ನಾಯಕರು ಹಾಗೂ ಶಾಸಕರು ವ್ಯಕ್ತಿಗತ ಹಗೆತನದಿಂದ ಮಾರ್ಗದರ್ಶಿತರಾಗುತ್ತಿದ್ದಾರೆ, ಆದರೆ ತತ್ವ ಹಾಗೂ ಸಿದ್ಧಾಂತ ಗಳಿಂದಲ್ಲ. ಅವರಿಗೆ ಮುಂದಿನ ಅವಕಾಶಗಳ ಮೇಲೆ ಕಣ್ಣಿದೆ. ಒಮ್ಮೆ ಸಚಿವರಾದರೆ, ಸದಾ ಸಚಿವರಾಗಬೇಕು. ಸಚಿವರ ವಿರುದ್ಧ ಭ್ರಷ್ಟಾಚಾರ ಹಾಗೂ ಪಕ್ಷಪಾತದ ದೂರಿದೆ. ಆದರೆ ಬಲವಾದ ವಿರೋಧ ಪಕ್ಷದ ಕೊರತೆಯಿಂದಾಗಿ ಸಚಿವರು ಸುರಕ್ಷಿತವಾಗಿದ್ದಾರೆ.

ಎರಡು ಸುಸಂಘಟಿತ ಪಕ್ಷಗಳಿದ್ದಾಗ ಮಾತ್ರ ಪಕ್ಷ ವ್ಯವಸ್ಥೆಯ ಸರ್ಕಾರ ಸಫಲವಾಗಲು ಸಾಧ್ಯ. ಆದರೆ ಇಪ್ಪತ್ತೈದು ವರ್ಷಗಳ ನಂತರವೂ ಸಹ, ಪರ್ಯಾಯ ಸಿದ್ಧಾಂತವಿರುವ ಹಾಗೂ ಆಡಳಿತ ನಡೆಸುವ ಸರ್ಕಾರ ಉಚ್ಚಾಟನೆಯಾದಾಗ, ಆ ಸರ್ಕಾರದ ಸ್ಥಳವನ್ನು ಆಕ್ರಮಿಸಬಲ್ಲ ಒಂದು ಸಮರ್ಥ ವಿರೋಧ ಪಕ್ಷವನ್ನು ದೇಶ ಕೊಟ್ಟಿಲ್ಲ ಈಗ ನಮ್ಮಲ್ಲಿ ಅನೇಕ ರಾಜಕೀಯ ಪಕ್ಷಗಳಿವೆ ಮತ್ತು ಚುನಾವಣಾಧಿಕಾರಿಯವರ ಪ್ರಕಾರ ಎಪ್ಪತ್ತಕ್ಕೂ ಹೆಚ್ಚು ಪಕ್ಷಗಳಿವೆ ಹಾಗೂ ಇನ್ನೂ ಅನೇಕ ಪಕ್ಷಗಳು ಅಸ್ತಿತ್ವಕ್ಕೆ ಬರುವ ಅವಕಾಶಗಳಿವೆ. ಅನೇಕವು ಧರ್ಮ, ಜಾತಿ ಹಾಗೂ ವ್ಯಕ್ತಿಗತ ಹಗೆತನದ ಆಧಾರದ ಮೇಲಿವೆ. ನಮ್ಮ ದೇಶದಲ್ಲಿ ಅನುಯಾಯಿಗಳಿಗಿಂತ ನಾಯಕರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಹಳೆ ಅಥವಾ ಹೊಸ ಕಾಂಗ್ರೆಸ್, ಜನಗಳಿಗೆ ಸಾಕಾಗಿದೆ. ಆದರೆ ಬಹುಮತ ಪಡೆಯುವ ಹಾಗೂ ಸರ್ಕಾರವನ್ನು ರಚಿಸುವ ಬೇರೆ ಪಕ್ಷ ಯಾವುದು? ಎಲ್ಲ ವಿರೋಧ

ಪಕ್ಷಗಳೂ ಒಟ್ಟಾಗಿ ಸೇರಿ ಏಕಪಕ್ಷವಾಗಿ, ಪರ್ಯಾಯ ಕಾರ್ಯಕ್ರಮ ಗಳಿಂದ, ಜನರಲ್ಲಿ ಭರವಸೆ ಮೂಡಿಸುವುದನ್ನು ಬಿಟ್ಟರೆ, ಬೇರೆ ಪಕ್ಷದ ಸಾಧ್ಯತೆಯಿಲ್ಲ.

ವಿರೋಧ ಪಕ್ಷದ ಕೊರತೆಯಲ್ಲಿ ಕಾಂಗ್ರೆಸ್ ಪಕ್ಷದ ಸರ್ವಾಧಿಕಾರ ಹಾಗೂ ನಿರಂಕುಶ ಪ್ರಭುತ್ವವಿದೆ. ಭಾರತದಲ್ಲಿ ಪ್ರಜಾಪ್ರಭುತ್ವ ಒಂದು ನಕಲಿಯಾಗಿದೆ. ಬಹುಮತವನ್ನು ಉಳಿಸಿಕೊಳ್ಳುವುದಕ್ಕಾಗಿ ಆಡಳಿತ ಪಕ್ಷ ಗೌರವಯುತವಾದ ವಿಧಾನಗಳನ್ನು ಅಳವಡಿಸಿಕೊಂಡಿಲ್ಲ. 'ಗರೀಬೀ ಹಟಾವೋ' ರೀತಿಯ ಚುನಾವಣಾ ವಾಗ್ದಾನಗಳನ್ನು ಕೊಟ್ಟಿದೆ. ಈ ವಾಗ್ದಾನಗಳನ್ನು ಚುನಾವಣಾ ಸಮಯದಲ್ಲಿ ಮಾತ್ರ ಮಾಡಲಾಗಿದೆ ಮತ್ತು ಅವುಗಳ ಜಾರಿಯಾಗಿಲ್ಲ. ಮತದಾನದ ತರುವಾಯ ಜನಗಳ ಆಶೋತ್ತರಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿಲಾಗಿದೆ. ಮಂತ್ರಿ ಮಂಡಲ ಅಸಮರ್ಥ ಜನಗಳಿಂದ ತುಂಬಿದೆ. ಅವರಲ್ಲಿ ಕೆಲವರು ಅವಿದ್ಯಾವಂತರೂ ಇದ್ದಾರೆ. ಬಹುಮತ ಪಕ್ಷದ ಪ್ರತಿಯೊಬ್ಬ ಶಾಸಕನೂ ಸಚಿವನಾಗುವ ಅಭಿಲಾಷೆಯುಳ್ಳವ ನಾಗಿರುತ್ತಾನೆ. ಅವನ ಅನುಭವ ಅಥವಾ ಅರ್ಹತೆ ಗಣನೆಯಲ್ಲಿಲ್ಲ, ಮಿತಿಮೀರಿದ ಭ್ರಷ್ಟಾಚಾರವಿದೆ ಮತ್ತು ಕೆಲವು ಸಚಿವರ ವಿರುದ್ಧ ಅಧಿಕಾರ ದುರುಪಯೋಗದ ಗಂಭೀರ ಆರೋಪಗಳಿವೆ.

ಅಸಮರ್ಥತೆ, ಭ್ರಷ್ಟಾಚಾರ ಹಾಗೂ ಬೆಲೆಯೇರಿಕೆಯಿಂದಾಗಿ ಪರಿಸ್ಥಿತಿ ನಿರಾಶಾದಾಯಕವಾಗಿದೆ ಹಾಗೂ ಅರಾಜಕತೆಯಿಂದ ಕೂಡಿದೆ. ಭಾರತದ ಅನೇಕ ಶ್ರೇಷ್ಠ ಮುತ್ಸದ್ದಿಗಳು ಭಾರತದಲ್ಲಿ ಸಂಸದೀಯ ಸರ್ಕಾರದ ಬದಲು ಅಮೆರಿಕಾದಲ್ಲಿರುವಂತೆ ಅಧ್ಯಕ್ಷೀಯ ಸರಕಾರವಿರಬೇಕೆಂದು ಅಭಿಪ್ರಾಯ ಪಡುತ್ತಾರೆ. ಅಥವಾ ಭಾರತದ ರಾಷ್ಟ್ರಪತಿಗೆ ಆಡಳಿತದ ಮೇಲೆ ಹಿಡಿತವಿರುವಂತೆ ಹೆಚ್ಚಿನ ಅಧಿಕಾರವನ್ನು ಕೊಡಬೇಕೆಂದು ಬಯಸುತ್ತಾರೆ. ಅನೇಕ ರಾಜ್ಯಗಳ ಮೇಲೆ ಅಧ್ಯಕ್ಷೀಯ ಆಡಳಿತವನ್ನು ಹೇರಲಾಗಿದೆ ಎಂಬ ವಾಸ್ತವಾಂಶವೇ ಅಧ್ಯಕ್ಷೀಯ ಸರಕಾರದ ಅವಶ್ಯಕತೆಗೆ ಸಾಕ್ಷಿಯಾಗಿದೆ.

ಶಾಸಕರು ಹಾಗೂ ಲೋಕಸಭೆಯ ಸದಸ್ಯರು ಸಚಿವರಾಗುವ ಅಥವಾ ಕಾರ್ಯ ನಿರ್ವಾಹಕ ಸ್ಥಾನ ಹೊಂದುವುದನ್ನು ತಡೆಗಟ್ಟಲು ಕೆಲವು ನಿಬಂಧನೆಗಳನ್ನು ಹಾಕಬೇಕು. ಆಡಳಿತದ ಹತೋಟಿ ಹಾಗೂ ರಾಜ ನೀತಿಗಳನ್ನು ಆಚರಣೆಗೆ ತರುವಲ್ಲಿ ಅವರು ತಮ್ಮ ಕರ್ತವ್ಯವನ್ನು ಶಾಸಕಾಂಗಕ್ಕೆ ಮೀಸಲಿಡಬೇಕು. ಕಾರ್ಯ ನಿರ್ವಾಹಕ ಸ್ಥಾನದ ಕಾರ್ಯಗಳನ್ನು ನಡೆಸುವಲ್ಲಿ ಅಧ್ಯಕ್ಷರು, ಶಾಸಕಾಂಗದಿಂದ ಹೊರಗೆ ಸಮರ್ಥ ವ್ಯಕ್ತಿಗಳನ್ನು ಆರಿಸಿಕೊಳ್ಳಬೇಕು ಇದು ವಾತಾವರಣವನ್ನು ಶುದ್ಧಗೊಳಿಸುತ್ತದೆ ಮತ್ತು ದೇಶಸೇವೆಯ ಪಣತೊಟ್ಟ ಜನಪ್ರತಿನಿಧಿಗಳ ನೈತಿಕಮಟ್ಟವನ್ನು ಸುಧಾರಿಸುತ್ತದೆ.

ಭಾರತದಲ್ಲಿ ಬ್ರಿಟಿಷರ ಮಾದರಿಯನ್ನನುಸರಿಸಿ ಸಂಸದೀಯ ಸರಕಾರವನ್ನು ಅಳವಡಿಸಿಕೊಳ್ಳ ಲಾಯಿತು. ದೇಶದಿಂದ ದೇಶಕ್ಕೆ ಪರಿಸ್ಥಿತಿಗಳು ಬದಲಾಗುತ್ತವೆ. ಇಂಗ್ಲೆಂಡ್, ಸಜಾತೀಯ ಒಂದೇ ಭಾಷೆ ಮಾತನಾಡುವ ಜನಸಂಖ್ಯೆಯಿರುವ ಒಂದು ಸಣ್ಣ ದೇಶ. ಅಲ್ಲಿ ಸಾಂಪ್ರದಾಯಿಕವಾಗಿ ಸುಸಂಘಟಿತವಾದ, ಪರ್ಯಾಯ ರಾಜನೀತಿಗಳಿರುವಂತಹ ಎರಡು ಬಲವಾದ ಪಕ್ಷಗಳಿವೆ. ನೂರಕ್ಕೆ ನೂರರಷ್ಟು ಜನಸಂಖ್ಯೆ ಅಕ್ಷರಸ್ಥರಾಗಿದ್ದಾರೆ. ಮತ್ತು ಅದು ಶಿಸ್ತು ಬದ್ಧವಾದ ದೇಶವಾಗಿದೆ. ಬ್ರಿಟಿಷರ ಚುನಾವಣೆಗಳು ಯಾವಾಗಲೂ ಪ್ರಾಮಾಣಿಕವಾಗಿರುತ್ತವೆ. ಆದರೆ ಈ ಪರಿಸ್ಥಿತಿ ಭಾರತದಲ್ಲಿಲ್ಲ. ಆದ್ದರಿಂದ ಭಾರತದಲ್ಲಿ ಸಂಸದೀಯ ಸರಕಾರ ಹೊಂದುವುದಿಲ್ಲ. ❑

# ಅಪರೂಪದ ರಾಜಕಾರಣಿ

ಡಾ. ಎಚ್. ಎಲ್. ತಿಮ್ಮೇಗೌಡ

ಅಧಿಕಾರ ಬಂದರೂ ಅಧಿಕಾರದ ಆಮಿಷಕ್ಕೆ ಒಳಗಾಗದೆ ಸತ್ಯವಂತರಾಗಿ, ಜಾತ್ಯತೀತ ರಾಜಕೀಯ ಜೀವನವನ್ನು ನಡೆಸಿಕೊಂಡು ಬಂದಿರುವ ಕೆಲವೇ ವ್ಯಕ್ತಿಗಳ ಪೈಕಿ ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರೂ ಒಬ್ಬರು.

೧೯೪೭ನೇ ಆಗಸ್ಟ್ ೧೫ರಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ರಾಜ್ಯದಲ್ಲಿ ಪ್ರಜಾರಾಜ್ಯ ಬರದ ಪ್ರಯುಕ್ತ ಅದೇ ಸೆಪ್ಟೆಂಬರ್ ೧ ನೇ ದಿನಾಂಕ ದಿಂದ 'ಮೈಸೂರು ಚಲೋ' ಅರಮನೆ ಸತ್ಯಾಗ್ರಹ ಪ್ರಾರಂಭವಾಯಿತು. ನಿಜಲಿಂಗಪ್ಪನವರು ಅರಮನೆಯ ಮುಂದೆ ಬಂದು ಸತ್ಯಾಗ್ರಹ ಮಾಡಿದಾಗ ಅವರ ದಸ್ತಗಿರಿಯಾಯಿತು. ಅನಂತರ ಸಾವಿರಾರು ಸತ್ಯಾಗ್ರಹಿಗಳ ದಸ್ತಗಿರಿಯಾಗಿ, ಕೆಲವೆಡೆ ಪೋಲೀಸರ ಗುಂಡೇಟಿನಿಂದ ಐದಾರು ಜನ ಮೃತರಾದರು. ಸರ್ಕಾರದ ದೌರ್ಜನ್ಯಕ್ಕೆ ಜನರು ಹೆದರದೆ ಚಳವಳಿ ಉಗ್ರರೂಪ ತಾಳುತ್ತಿರುವುದನ್ನು ಕಂಡು, ಮಹಾರಾಜರು ಪ್ರಜೆಗಳ ಅಭಿಪ್ರಾಯಕ್ಕೆ ಮಣಿದು ಪ್ರಜಾಸರ್ಕಾರ ಸ್ಥಾಪನೆಗೆ ಒಪ್ಪಿಗೆ ನೀಡಿದರು. ೧೯೪೭ರ ಅಕ್ಟೋಬರ್‌ನಿಂದ ಶ್ರೀ ಕೆ. ಸಿ. ರೆಡ್ಡಿ ಮುಖ್ಯ ಮಂತ್ರಿಯಾದರು.

ಕಾಲು ಶತಮಾನ ಕಾಲ ಕರ್ನಾಟಕ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ನಿಜಲಿಂಗಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ, ಹಲವಾರು ವರ್ಷಗಳ ಕಾಲ ತುರಂಗವಾಸ ಅನುಭವಿಸಿದ್ದಲ್ಲದೆ ಹರಿದು ಹಂಚಿಹೋಗಿದ್ದ ಬೇರೆ ಬೇರೆ ರಾಜ್ಯಗಳಲ್ಲಿ ಸೇರಿಹೋಗಿದ್ದ ಕನ್ನಡದ ಭಾಗಗಳನ್ನು ಮೈಸೂರಿಗೆ ಸೇರಿಸಿ, ಅಖಂಡ ಕರ್ನಾಟಕವನ್ನು ರೂಪಿಸಲು ಅವಿಶ್ರಾಂತವಾಗಿ ಹೋರಾಡಿ ಕೊನೆಗೆ ಜಯಗಳಿಸಿದ ಅಪ್ರತಿಮಶೂರರು.

ಯಾವಾಗಲೂ ಸತ್ಯ ನಿಷ್ಠೆಯಿಂದ ದುಡಿಯುತ್ತಿದ್ದ ಎಸ್ಸೆನ್ನರಿಗೆ ರಾಷ್ಟ್ರೀಯ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯಲ್ಲಿ ಯಾವಾಗಲೂ ಸದಸ್ಯತ್ವ ಕಾದಿರುತ್ತಿತ್ತು. ಪಂಡಿತ್ ಜವಾಹರಲಾಲ್ ನೆಹ್ರೂ, ಸರ್ದಾರ್ ವಲ್ಲಭ್ ಭಾಯಿ ಪಟೇಲ್ ಮತ್ತಿತರ ಅಖಿಲ ಭಾರತ ಮುಖಂಡರ ಜೊತೆಗಾರನಾಗಿ ಶ್ರಮಿಸಿದ ಏಕೈಕ ಕನ್ನಡಿಗನೆಂದರೆ ನಿಜಲಿಂಗಪ್ಪನವರು. ಅಧಿಕಾರ ಅರಸಿಕೊಂಡು ಬಂದಾಗಲೂ ಅದನ್ನು ಸ್ವೀಕರಿಸದೆ ಸ್ನೇಹಿತರಿಗೋಸ್ಕರ ಅದನ್ನು ಬಿಟ್ಟುಕೊಟ್ಟ ಅಪರೂಪ ರಾಜಕಾರಣಿಯ ಗುಣಗಳು ಎಸ್ಸೆನ್‌ರಲ್ಲಿದೆ.

೧೯೫೮ರಲ್ಲಿ ಅವರು ಮುಖ್ಯಮಂತ್ರಿಯಾಗಿದ್ದಾಗ ಕಾಂಗ್ರೆಸ್ ಶಾಸಕಾಂಗ ಪಕ್ಷದಲ್ಲಿ ಅವರ ನಾಯಕತ್ವದ ಬಗ್ಗೆ ಕೆಲವರು ಅಸಮಾಧಾನ ವ್ಯಕ್ತಪಡಿಸಿದರು. ಆಗ ಅವರು ಸಂತೋಷದಿಂದ ನಾಯಕತ್ವಕ್ಕೆ ರಾಜೀನಾಮೆ ನೀಡಿ ಪುನಃ ನಾಯಕರ ಆಯ್ಕೆಯಾಗಲು ಅವಕಾಶ ಮಾಡಿಕೊಟ್ಟರು. ಸ್ನೇಹಿತರ ಒತ್ತಾಯದಿಂದ ಮತ್ತೆ ನಾಯಕತ್ವಕ್ಕೆ ಸ್ಪರ್ಧಿಸಿದರು. ಕೇವಲ ಐದು ಮತಗಳ ಅಂತರಿಂದ ಸೋತರು. ಅವರು ಸೋತದ್ದು ಮುಖ್ಯವಲ್ಲ ಆಯ್ಕೆಯ ಸಂದರ್ಭದಲ್ಲಿ ಅವರು ಯೊರೊಬ್ಬ ಶಾಸಕನನ್ನೂ ತನಗೆ ಮತ ನೀಡಬೇಕೆಂದು ಕೇಳಲಿಲ್ಲ. ಹಾಗೆ ಅವರು ಕೇಳಿದ್ದರೆ ಹೆಚ್ಚು ಬಹುಮತದಿಂದ ಆಯ್ಕೆಯಾಗುವುದರಲ್ಲಿ ಸಂಶಯವಿರಲಿಲ್ಲ. ಆದರೆ ಎಸ್ಸೆನ್‌ರ ನಿಲುವೇ ಬೇರೆ. ಅಧಿಕಾರಕ್ಕಾಗಿ ಕೈ ಚಾಚಿ ಬೇಡುವುದು ಅವರ ಜಾಯಮಾನವಲ್ಲ.

೧೯೭೭ರಲ್ಲಿ ರಾಷ್ಟ್ರಾಧ್ಯಕ್ಷರ ಚುನಾವಣೆಯ ಸಂದರ್ಭದಲ್ಲಿ ಆಗಿನ ನಾಯಕರೆಲ್ಲಾ ನಿಜಲಿಂಗಪ್ಪನವರನ್ನು ರಾಷ್ಟ್ರಾಧ್ಯಕ್ಷರನ್ನಾಗಿ ಮಾಡಲು ತುಂಬಾ ಯತ್ನಿಸಿದರು. ಸಾಮಾನ್ಯರಿಗೆ ಎಂಥ ಅಪೂರ್ವ ಅವಕಾಶ! ಆದರೆ ನಿಜಲಿಂಗಪ್ಪನವರು 'ನಾನು ಕಾಂಗ್ರೆಸ್ ಅಧ್ಯಕ್ಷ ನಾಗಿದ್ದಾಗ ಶ್ರೀಮತಿ ಇಂದಿರಾ ಗಾಂಧಿಯವರ ವಂಚನೆಯಿಂದ ನೀಲಂ ಸಂಜೀವ ರೆಡ್ಡಿ ಸೋತು ಹೋದರು. ಈಗ ಅವರನ್ನೇ ನಿಲ್ಲಿಸಿ ಅವರು ರಾಷ್ಟ್ರಾಧ್ಯಕ್ಷರಾಗುವಂತೆ ಮಾಡಬೇಕಾದ್ದು ನಮ್ಮ ಕರ್ತವ್ಯ' ಎಂದು ಖಂಡತುಂಡವಾಗಿ ನುಡಿದರು. ಅದರಂತೇ ನೀಲಂ ರಾಷ್ಟ್ರಾಧ್ಯಕ್ಷರಾಗಿ ಆಯ್ಕೆಯಾದರು. ಎಂತಹ ಮಹತ್ತರ ನಿಲುವು ಎಸ್ಸೆನ್‌ರದು!

ನಿಜಲಿಂಗಪ್ಪನವರ ದೃಷ್ಟಿಯಲ್ಲಿ ಗ್ರಾಮೋದ್ಧಾರಕ್ಕೆ ಮೊದಲ ಆದ್ಯತೆ. ಹಳ್ಳಿಗಳು ಉದ್ಧಾರವಾಗಬೇಕು. ಬಡ ರೈತನ ಆರ್ಥಿಕ ಸ್ಥಿತಿಗತಿ ಉತ್ತಮವಾಗಬೇಕು, ಪ್ರತಿ ಪ್ರಜೆಗೂ ಅನ್ನ, ಬಟ್ಟೆ ಮತ್ತು ವಸತಿ ದೊರಕಬೇಕು ಎಂಬ ಜನಹಿತ ಯೋಜನೆಗಳು ಅವರವು. ಈ ಉದ್ದೇಶದಿಂದಲೇ ಅವರು ತಮ್ಮ ಅಧಿಕಾರಾವಧಿಯಲ್ಲಿ ಕಬಿನಿ, ಹಾರಂಗಿ, ಹೇಮಾವತಿ, ಭದ್ರಾ, ಮಲಪ್ರಭ, ಘಟಪ್ರಭ ಮುಂತಾದ ನೀರಾವರಿ ಅಣೆಕಟ್ಟುಗಳ ಮತ್ತು ಶರಾವತಿ ವಿದ್ಯುತ್ ಉತ್ಪಾದನಾ ಕೇಂದ್ರದ ಕೆಲಸಗಳನ್ನು ಶುರು ಮಾಡಿದರು. ಕಾಳಿ ವಿದ್ಯುತ್ ಯೋಜನೆಯನ್ನು ಮಂಜೂರು ಮಾಡಿದರು. ಬಹಳಷ್ಟು ಭೂಮಿಗೆ ನೀರಾವರಿ ಸೌಕರ್ಯ ಕಲ್ಪಿಸಿಕೊಟ್ಟರು. ಬಾವಿಗಳಿಗೆ ಪಂಪ್ ಸೆಟ್ ಒದಗಿಸಿದರು. ಹಲವಾರು ಕೈಗಾರಿಕೆಗಳನ್ನು ಸ್ಥಾಪಿಸಲು ಕಾರಣರಾದರು. ಭೂ-ಸುಧಾರಣೆಯನ್ನು ಮಾಡಲು ತೀರ್ಮಾನಿಸಿ ಜತ್ತಿಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಿಸಿದರು. ೬೫ಕ್ಕೂ ಹೆಚ್ಚು ವಯಸ್ಸಾದ ನಿರ್ಗತಿಕರಿಗೆ ಮಾಸಾಶನ ನೀಡುವ ಯೋಜನೆಯನ್ನು ಆರಂಭಿಸಿದರು.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದವರಿಗೆ ತಾಂತ್ರಿಕ ಶಾಲೆಗಳಲ್ಲಿ, ಸರ್ಕಾರಿ ಕೆಲಸಗಳಲ್ಲಿ ಸ್ಥಾನ ಮೀಸಲಾತಿ ಶುರುವಾದದ್ದು ಎಸ್ಸೆನ್‌ರವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲೇ ಹರಿಜನ-ಗಿರಿಜನರಿಗೆ ಹೆಚ್ಚು ಸೌಲಭ್ಯಗಳನ್ನು ನೀಡುವಲ್ಲಿ ಮೇಲ್ಪಂಕ್ತಿ ಹಾಕಿದವರೂ ಅವರೇ.

ನಿಜಲಿಂಗಪ್ಪನವರದು ಸ್ವಚ್ಛ ಹೃದಯ. ಯಾವೊಬ್ಬ ವ್ಯಕ್ತಿಯ ಮೇಲೆ ಅವರಿಗೆ ಒಳ್ಳೆಯ ಅಭಿಪ್ರಾಯ ಉಂಟಾದರೆ ಆತನಿಗೆ ತಮ್ಮ ಕೈಲಾದಷ್ಟು ಸಹಾಯ ಮಾಡುತ್ತಿದ್ದರು. ಅವರ ಬಗ್ಗೆ ಬೇರೆಯವರು ಒಡಕು ಮಾತಾಡಿದರೆ ಅದನ್ನು ತಾವೇ ಪ್ರತ್ಯಕ್ಷವಾಗಿ ಪರಿಶೀಲಿಸಿದೆ ಬಿಡುತ್ತಿರಲಿಲ್ಲ.

ಎಸ್ಸೆನ್‌ರಂಥ ಜಾತ್ಯತೀತ ರಾಜಕಾರಣಿ ಸಿಗುವುದು ಅಪರೂಪ. ಅವರು ಲಿಂಗಾಯಿತ ಮನೆಯಲ್ಲಿ ಹುಟ್ಟಿದರೂ ಲಿಂಗವನ್ನು ಧರಿಸುತ್ತಿಲ್ಲ. ಯಾವ ಮಠಾಧಿಪತಿಗಳನ್ನೂ ಹೋಗಿ ನೋಡುವುದಿಲ್ಲ. ಯಾರಾದರೂ ಸಮಾಜಕ್ಕೆ ಒಳ್ಳೆಯ ಸೇವೆ ಸಲ್ಲಿಸಿದರೆ ಅವರ ವಿಚಾರವಾಗಿ ಒಳ್ಳೆಯ ಮಾತಾಡುತ್ತಾರೆ. ಆದರೆ ದುರದೃಷ್ಟ ಇಂಥ ನಿಜಲಿಂಗಪ್ಪನವರ ಮೇಲೂ ಜಾತಿವಾದಿ ಎಂಬ ಅಪವಾದ ಒಂದು ಕಾಲದಲ್ಲಿ ಬಂದಿತ್ತು.

ಸ್ನೇಹ, ಕರುಣೆ ತುಂಬಿದ ಹೃದಯ ಎಸ್ಸೆನ್ನರದು. ಅನುಭವಿಸಿದವರಿಗೆ ಗೊತ್ತು ಅವರೆಂಥಾ ಮಮತಾಮಯಿ ಎಂದು. ನನ್ನ ಜೀವನದ ಒಂದು ಘಟನೆಯನ್ನೇ ನಾನು ಹೇಳಬಯಸುತ್ತೇನೆ. ನಾನು ರಕ್ತದ ಕ್ಯಾನ್ಸರ್‌ನಿಂದ ನರಳುತ್ತಿದ್ದ ದಿನಗಳು. ಕೆಲವು ಇಂಜಕ್ಷನ್ ಟ್ಯೂಬ್‌ಗಳನ್ನು ಅಮೇರಿಕಾದಿಂದ ತರಿಸಬೇಕಾಗಿತ್ತು. ವಿಮಾನದಲ್ಲಿ ತರಿಸಿದರೂ ಆ ಔಷಧಿಯನ್ನು ರೆಫ್ರಿಜರೇಟರ್‌ನಲ್ಲೇ ಇಟ್ಟು ತರಬೇಕಾಗಿತ್ತು. ಏರ್ ಇಂಡಿಯಾ ಇಂಟರ್ ನ್ಯಾಷನಲ್ ವಿಮಾನದಲ್ಲಿ ಆ ಸೌಲಭ್ಯವಿತ್ತು. ಆದರೆ ಆ ಸೌಲಭ್ಯ ಎಲ್ಲರಿಗೂ ಸಿಗುವಂತಿರಲಿಲ್ಲ. ಒಮ್ಮೆ ನನ್ನನ್ನು ನೋಡಲು ಬಂದ ಎಸ್ಸೆನ್‌ರಿಗೆ ನಾನು ಈ ವಿಷಯ ತಿಳಿಸಿ ಔಷಧಿ ಕಳಿಸಲು ಸಿದ್ಧವಿರುವ ಅಮೇರಿಕಾದಲ್ಲಿದ್ದ ನನ್ನ ಮಿತ್ರರ ಹೆಸರು ಹೇಳಿದೆ. ಆ ಕೂಡಲೇ ಎಸ್ಸೆನ್ನರು ತಮ್ಮ ಬಿಡಾರಕ್ಕೆ ತೆರಳಿ, ದಿನವೆಲ್ಲ ಟ್ರಂಕ್ ಕಾಲ್ ಮಾಡಲೆತ್ನಿಸಿ, ಸಂಬಂಧಿಸಿದ ಅಧಿಕಾರಿಗಳು, ಮಂತ್ರಿ ರಾಜ ಬಹದ್ದೂರರನ್ನು ಒಪ್ಪಿಸಿ ಔಷಧಿಗಳನ್ನು ಬೆಂಗಳೂರಿಗೆ ತರಿಸಲು ಅವರಿಗೆ ಜವಾಬ್ದಾರಿ ವಹಿಸಿದರು. ಅನಂತರ ಪುನಃ ಆಸ್ಪತ್ರೆಗೆ ಬಂದು ನನಗೆ ವಿಷಯ ತಿಳಿಸಿ 'ನೆಮ್ಮದಿಯಿಂದಿರು' ಎಂದರು. ಎಂತಹ ಪಿತೃವಾತ್ಸಲ್ಯ.

ಸ್ವಚ್ಛತೆಯನ್ನು ಬಯಸುವ ನಿಜಲಿಂಗಪ್ಪನವರಿಗೆ ಇಂದಿನ ಕಲುಷಿತ ರಾಜಕೀಯವನ್ನು ಕಂಡರೆ ಅಸಹ್ಯ. ಪಕ್ಷದ ಕಾರ್ಯ ಮಾಡುವಾಗ ಯೌವನದ ಉತ್ಸಾಹ ಪಕ್ಷದ ಕೆಲಸ ವ್ಯವಸ್ಥಿತ ರೀತಿಯಲ್ಲಿ ಸಾಗದಿರುವುದನ್ನು ಕಂಡು ಸಂಬಂಧಿಸಿದವರಿಗೆ ಛೀಮಾರಿ ಹಾಕುವಷ್ಟು ಕಾಳಜಿ.

ಸರಳ ಜೀವಿಯಾದ ಎಸ್ಸೆನ್ನರು ಯಾವ ಕೆಟ್ಟ ಚಟಗಳಿಗೂ ಬಲಿಯಾಗಿಲ್ಲ. ತುಂಬು ಜೀವನ ಅವರದು. ಅವರಲ್ಲಿರುವ ಒಳ್ಳೆಯ ಗುಣಗಳಲ್ಲಿ ಕೆಲವನ್ನಾದರೂ ಈಗಿನ ಪೀಳಿಗೆ ತಮ್ಮ ಬದುಕಲ್ಲಿ ಅಳವಡಿಸಿಕೊಂಡರೆ ದೇಶದ ರಾಜಕೀಯ ಹಸನಾಗುವುದರಲ್ಲಿ ಸಂಶಯವಿಲ್ಲ.



# ನಾ ಕಂಡ ನಿಜಲಿಂಗಪ್ಪನವರು

ವಿ. ಎಸ್. ಕೃಷ್ಣಅಯ್ಯರ್

ಭಾರತದ ಹಿರಿಯ ನಾಯಕರಲ್ಲೊಬ್ಬರಾದ ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರ ಹೆಸರನ್ನು ಕೇಳದವರಿಲ್ಲ ವೆಂದರೆ ಅತಿಶಯೋಕ್ತಿಯಾಗಲಾರದು. ಕರ್ನಾಟಕದಲ್ಲಂತೂ ಇವರ ಹೆಸರನ್ನರಿಯದ ಕನ್ನಡಿಗರೇ ಇಲ್ಲ. ಇವರು ನಾಡಿಗೆ ಸಲ್ಲಿಸಿದ ಸೇವೆ ಅಪಾರ. ಸ್ವಾತಂತ್ರ್ಯ ಹೋರಾಟಗಾರರಾಗಿ, ಕರ್ನಾಟಕ ಏಕೀಕರಣದ ಅಗ್ರನಾಯಕರಾಗಿ, ಕರ್ನಾಟಕ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾಗಿ, ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ರಾಷ್ಟ್ರಕ್ಕೆ ರಾಜ್ಯಕ್ಕೆ ಅಪಾರ ಸೇವೆಸಲ್ಲಿಸಿದ್ದಾರೆ. ಎಂಬತ್ತು ವರ್ಷದ ವಯಸ್ಸಿನಲ್ಲಿ ಇವರು ಸೇವೆಯಿಂದ ನಿವೃತ್ತರಾಗಿಲ್ಲ. ತಮ್ಮ ಬಳಿ ಬಂದವರಿಗೆ ಸಲಹೆ-ಮಾರ್ಗದರ್ಶನಗಳನ್ನು ನೀಡುತ್ತಲೇ ಇದ್ದಾರೆ. ಸದಾ ರಾಷ್ಟ್ರದ ಹಿತ ಚಿಂತನೆಯಲ್ಲೇ ಇವರು ಮಗ್ನರಿರುತ್ತಾರೆ.

ಶ್ರೀ ನಿಜಲಿಂಗಪ್ಪನವರು ಈಗ್ಗೆ ಎಂಬತ್ತು ವರ್ಷಗಳ ಹಿಂದೆ ಚಿತ್ರದುರ್ಗ ಜಿಲ್ಲೆಯ ಹಲವಾಗಲು ಹಳ್ಳಿಯಲ್ಲಿ ಬಡ ಕುಟುಂಬದಲ್ಲಿ ಜನ್ಮ ತಾಳಿದರು. ನ್ಯಾಯಶಾಸ್ತ್ರದಲ್ಲಿ ಪದವೀಧರರಾಗಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ಸ್ವಾತಂತ್ರ್ಯ ಸಂಗ್ರಾಮ ಇವರನ್ನು ಕೈಬೀಸಿ ಕರೆಯುತ್ತಿತ್ತು. ಚಿತ್ರದುರ್ಗ ಜಿಲ್ಲೆಯ ಪ್ರಸಿದ್ಧ ತುರುವನೂರಿನ ಅರಣ್ಯ ಸತ್ಯಾಗ್ರಹದಲ್ಲಿ ಮುಖ್ಯಪಾತ್ರವಹಿಸಿ ಸೆರೆಮನೆ ಸೇರಿದರು. ವಕೀಲಿ ವೃತ್ತಿಯಿಂದಲೂ ಕಡ್ಡಾಯವಾಗಿ ಹೊರಬರಬೇಕಾಯಿತು. ಸರ್ಕಾರ ಕಾಂಗ್ರೆಸ್ ಮುಖಂಡರನೇಕರ ವಕೀಲಿ ಸನ್ನದನ್ನು ಕಿತ್ತುಕೊಂಡಿತು. ಆ ನಾಯಕರೆಲ್ಲಾ ಸಂಪೂರ್ಣ ಕಾಲಾವಧಿಯ ರಾಷ್ಟ್ರೀಯ ಹೋರಾಟಗಾರರಾದರು. ಅವರಲ್ಲಿ ನಿಜಲಿಂಗಪ್ಪ ನವರೂ ಒಬ್ಬರು.

ಸ್ವಾತಂತ್ರ್ಯ ಹೋರಾಟದಲ್ಲಿ ಎಷ್ಟು ಕಾಲ ಜೈಲಿನಲ್ಲಿ ಕೊಳೆಯಬೇಕಾಗಿ ಬಂದರೂ ಎಂದೂ ಎದೆ ಗುಂದಿದವರಲ್ಲ. 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಮುಖ್ಯ ಪಾತ್ರ ವಹಿಸಿ, ದೀರ್ಘ ಕಾಲದ ಸೆರೆವಾಸದ ನಂತರ ಬಿಡುಗಡೆ. ೧೯೪೫ರ ತುಮಕೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ಇವರದೇ! ಅಧ್ಯಕ್ಷ ಪೀಠದಿಂದ ಮೈಸೂರು ಕಾಂಗ್ರೆಸ್ಸಿಗರಿಗೆ ಅಂತಿಮ ಹೋರಾಟಕ್ಕೆ ಸಜ್ಜಾಗಲು ಕರೆ ನೀಡಿದ್ದಲ್ಲದೆ, ಗಾಂಧೀಜಿಯವರ ಆದೇಶವನ್ನು ಪಾಲಿಸಲು ಹಾಗೂ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳಲು ಕರೆ ನೀಡಿದರು. ಹೋರಾಟದ ಫಲವಾಗಿ ಭಾರತದ ಸ್ವಾತಂತ್ರ್ಯ ಪ್ರಾಪ್ತಿ.

ಸ್ವರಾಜ್ಯ ಬಂದ ಕೂಡಲೇ ನಿಜಲಿಂಗಪ್ಪನವರು, ಅಧಿಕಾರ-ಪದವಿಗಳ ಕಡೆ ಹೊರಳಿದವರಲ್ಲ. ಸ್ವಾತಂತ್ರ್ಯ ಎಷ್ಟು ಮುಖ್ಯವೋ ಕರ್ನಾಟಕ ಏಕೀಕರಣವನ್ನೂ ಅಷ್ಟೇ ಮುಖ್ಯವೆಂದು ಗಣಿಸಿದರು ಅವರು. ಕರ್ನಾಟಕ ಕಾಂಗ್ರೆಸ್ಸಿನ ಅಧ್ಯಕ್ಷರಾದ ಇವರು ಕರ್ನಾಟಕದ ಏಕೀಕರಣಕ್ಕಾಗಿ ಹೋರಾಟ ನಡೆಸಿದರು. ಇವರಲ್ಲಿ ನಿಜಲಿಂಗಪ್ಪನವರೇ ಅಗ್ರಗಣ್ಯರು. ಅದಕ್ಕಾಗಿ ಕನ್ನಡಿಗರು ಅವರಿಗೆ ಸದಾ ಋಣಿಗಳಾಗಿರಬೇಕು. ಅದರ ಫಲವಾಗಿ ಕರ್ನಾಟಕ ಏಕೀಕರಣವಾಯಿತು. ಏಕೀಕೃತ ಕರ್ನಾಟಕದ ಮೊಟ್ಟ ಮೊದಲ ಮುಖ್ಯಮಂತ್ರಿಯಾಗಿ ಇವರು ಚುನಾಯಿತರಾದರು. ನಿಜವಾಗಿಯೂ ಆ ಸ್ಥಾನ ಅವರಿಗೆ ಅರ್ಹವಾದುದಾಗಿತ್ತು.

ನಿಜಲಿಂಗಪ್ಪನವರು ಪಕ್ಕಾ ಗಾಂಧಿವಾದಿಗಳು. ಹಾಗೂ ಸ್ಥಿತಪ್ರಜ್ಞರು. ಸೋಲು-ಗೆಲವು ಅವರಿಗೆ ಸಮಾನ. ಗೆದ್ದಾಗ ಉಬ್ಬದೆ ಸೋತಾಗ ಅಳುಕದೇ ಇರುವ ವ್ಯಕ್ತಿತ್ವ ಇವರದು. ಸೋಲು-ಗೆಲುವು ಅವರ ದೃಷ್ಟಿಯಲ್ಲಿ ಸಾಮಾನ್ಯ. ತತ್ವ-ನಿಷ್ಠೆ ಅತಿ ಮುಖ್ಯ.

೧೯೬೮ರಲ್ಲಿ ಅಖಿಲ ಭಾರತ ಕಾಂಗ್ರೆಸ್ಸಿನ ಅಧ್ಯಕ್ಷ ಪದವಿ ಇವರಿಗೆ ದೊರೆಯಿತು. ಇಂಥ ಪದವಿ ಕನ್ನಡಿಗರೊಬ್ಬರಿಗೆ ದೊರೆತುದು ನಿಜವಾಗಿಯೂ ಕನ್ನಡಿಗರಿಗೆ ಹೆಮ್ಮೆ. ರಾಜಕೀಯದಲ್ಲಿ ಎಂತಹ ಕಟು ಪರಿಸ್ಥಿತಿ ಬಂದಾಗಲೂ ಅಳುಕದೆ, ನೀತಿಯ ಬಲದಿಂದ ಅಚಲವಾಗಿ ನಿಂತವರು ಇವರು. ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗಲೂ ಇವರು ನೀತಿ ತತ್ವಗಳ ಬೆನ್ನು ಬಿಡದೆ ನಿಂತರು. ಅಂದಿನಿಂದ ಪ್ರಾರಂಭವಾದ ರಾಜನೀತಿಯ ಅಧಃಪತನವನ್ನು ಅವರು ಧೈರ್ಯವಾಗಿ ಎದುರಿಸಿದ್ದಾರೆ.

ಇವರಿಗೆ ಅಧಿಕಾರದ ವ್ಯಾಮೋಹವಿಲ್ಲ. ಜನತಾ ಸರ್ಕಾರ ರಚನೆಯಾದಾಗಲೂ ಅಧಿಕಾರದ ಕಡೆ ಹೊರಳಿಯೂ ನೋಡಲಿಲ್ಲ. ಆದರೆ ರಾಜಕೀಯದಿಂದ ಇವರು ನಿವೃತ್ತರಲ್ಲ. ನಿಷ್ಠ ರಾಜಕಾರಣಿಗಳಿಗೆ ಇಂದಿಗೂ ಮಾರ್ಗದರ್ಶನ ನೀಡುತ್ತಿದ್ದಾರೆ. ದೇಶದ ಆಗು ಹೋಗುಗಳನ್ನು ಕುರಿತು ಚರ್ಚಿಸುತ್ತಾರೆ. ಅನೀತಿ-ಅನ್ಯಾಯಗಳನ್ನು ಖಂಡಿಸುತ್ತಾರೆ. ದೇಶದ ಅಧೋಗತಿ ಯನ್ನು ಕಂಡು ಕಳವಳ ಪಡುತ್ತಾರೆ. ಅದನ್ನು ಸರಿಪಡಿಸುವ ಹವಣಿಕೆ ಈ ಎಂಬತ್ತರ ಪ್ರಾಯದಲ್ಲೂ ಅವರಿಗಿದೆ.

ಸಹನೆ, ವಿಶಾಲ ಹೃದಯ, ಉದಾರ ಮನೋಧರ್ಮ, ನೇರ ನಡೆ-ನುಡಿ, ಸರಳ ಜೀವನ, ಇದೇ ನಿಜಲಿಂಗಪ್ಪನವರ ವ್ಯಕ್ತಿತನ. ಇವರ ಮಾರ್ಗದರ್ಶನ ಕರ್ನಾಟಕಕ್ಕೆ ಸದಾ ಅವಶ್ಯಕ. ❑

# ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು

**ರಾಮಕೃಷ್ಣ ಹೆಗಡೆ**

'ಕರ್ನಾಟಕದ ಶಿಲ್ಪಿ' ಶ್ರೀ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು ತಮ್ಮ ಜೀವನದ ೭೨ನೇ ವಯಸ್ಸಿನಲ್ಲಿ ಕಾಲಿಡುವಾಗ ಒಂದು ಘಟನೆ ನೆನಪಾಗುತ್ತದೆ. ಅಧಿಕಾರ ದಾಹವು ರಾಜಕೀಯ ಕ್ಷೇತ್ರವನ್ನು ಅಂಟುರೋಗದಂತೆ ಪಸರಿಸಿದ ಈ ಕಾಲದಲ್ಲಿ ಮತ್ತು ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕೋಸ್ಕರ ತತ್ವ, ನಿಷ್ಠೆ, ಪ್ರಾಮಾಣಿಕತೆಗಳನ್ನು ಬಲಿಕೊಡತಕ್ಕಂಥ ಈ ಕಾಲದಲ್ಲಿ ಅದೊಂದು ಮೂರ್ಖ ವಿಚಾರವಾಗಿ ಕಂಡೀತು. ಆದರೆ ಇತಿಹಾಸ ಸೃಷ್ಟಿ ಯಾಗುವುದು ಅನೇಕ ಕೆಟ್ಟ ಜನರ ದುರ್ನಡತೆಯಿಂದಲ್ಲ, ಕೆಲವೇ ಒಳ್ಳೆಯ ಜನರ ಸಜ್ಜನಿಕೆ ಮತ್ತು ಸನ್ಮಾರ್ಗ ವೃತ್ತಿಯಿಂದ.

೧೯೫೮ನೇ ಇಸವಿ ಏಪ್ರಿಲ್ - ಮೇ ತಿಂಗಳು, ಕರ್ನಾಟಕ [illegible] ಮಂಡಲದ ದೀರ್ಘ ಅಧಿವೇಶನ ನಡೆದಿತ್ತು. ಎರಡನೆ ಬಾರಿ ಕರ್ನಾಟಕದ ಮುಖ್ಯಮಂತ್ರಿಯಾಗಿ ಒಮ್ಮತದಿಂದ ಶ್ರೀ ನಿಜಲಿಂಗಪ್ಪನವರ ಆಯ್ಕೆಯಾಗಿ ಒಂದು ವರ್ಷ ಮಾತ್ರ ಆಗಿತ್ತು. ಪ್ರದೇಶ ಕಾಂಗ್ರೆಸ್ ಕಮಿಟಿಯಲ್ಲಿ ಹಾಗೂ ಶಾಸನ ಮಂಡಲದ ಕಾಂಗ್ರೆಸ್ ಪಕ್ಷದಲ್ಲಿ ಶ್ರೀನಿಜಲಿಂಗಪ್ಪನವರ ಮಂತ್ರಿ ಮಂಡಲವನ್ನು ಉರುಳಿಸುವ ಪಿತೂರಿ ನಡೆದಿತ್ತು. ಹಗಲಿರುಳೂ ಪ್ರಯತ್ನ ನಡೆದಿತ್ತು. ಇದನ್ನು ನೋಡಿ ಗಾಬರಿಯಾದ ಶ್ರೀ ನಿಜಲಿಂಗಪ್ಪನವರ ನಿಷ್ಠ ಅನುಯಾಯಿಗಳು ಮಂತ್ರಿ ಮಂಡಲಕ್ಕೆ ಒದಗಿದ ಬಾಲಗ್ರಹವನ್ನು ನಿವಾರಿಸಲು ಒಂದುಗೂಡಿ ಯೋಚನೆ ಮಾಡಿದರು. ಶ್ರೀ ನಿಜಲಿಂಗಪ್ಪನವರು ರಾಜಕೀಯ ಪಿತೂರಿಯ ದಾವಾನಲದ ಮಧ್ಯದಲ್ಲಿದ್ದರೂ ಸ್ಥಿತಪ್ರಜ್ಞರಂತೆ ನಿರ್ವಿಕಾರದಿಂದಿದ್ದರು. ಆಗಲೂ ಅವರ ಮನಸ್ಸಿನಲ್ಲಿ ಕೇಂದ್ರೀಕೃತವಾದ ವಿಚಾರವೆಂದರೆ ಕರ್ನಾಟಕದ ಕನ್ನಡ ಜನತೆಯ ಅಭಿವೃದ್ಧಿ, ಔದ್ಯೋಗಿಕ, ವ್ಯವಸಾಯಿಕ ಮೊದಲಾದ ಕ್ಷೇತ್ರಗಳಲ್ಲಿ ಕರ್ನಾಟಕದ ವಿಪುಲವಾದ ನೈಸರ್ಗಿಕ ಸಂಪತ್ತನ್ನು ಉಪಯೋಗಿಸಿ ಎಷ್ಟು ಕ್ಷಿಪ್ರವಾಗಿ

ಅಭಿವೃದ್ಧಿಯನ್ನು ಸಾಧಿಸಬಹುದು ಎಂಬುದರ ಬಗ್ಗೆ ಯೋಜನಾ ಆಯೋಗದವರ ಜೊತೆಗೆ ದೀರ್ಘವಾದ ಚರ್ಚೆ ಅವರ ಲಕ್ಷ್ಯವನ್ನು ಸೆರೆ ಹಿಡಿದಿತ್ತು. ಅವರ ಅನುಯಾಯಿಗಳಲ್ಲಿ ಧೈರ್ಯ ಕುಂದುತ್ತಿತ್ತು. ಅಧಿಕಾರದಲ್ಲಿದ್ದರೆ ತಾನೇ ಅಭಿವೃದ್ಧಿಯನ್ನು ಸಾಧಿಸುವುದು. ಅಧಿಕಾರ ಕೈತಪ್ಪಿ ಹೋದರೆ ಶ್ರೀ ನಿಜಲಿಂಗಪ್ಪನವರ ಕನಸು ನನಸಾಗುವ ಬಗೆ ಹೇಗೆ ಇದು ಅವರ ಭಾವನೆ. ಎಲ್ಲರೂ ಸೇರಿ ಈ ವಿಚಾರವನ್ನೂ ಬಿಂಬಿಸುವ ಭಾರವನ್ನು ನನ್ನ ಮೇಲೆ ಹೊರಿಸಿದರು. ನಾನು ಶ್ರೀ ನಿಜಲಿಂಗಪ್ಪನವರನ್ನು ಭೆಟ್ಟಿಯಾಗಿ ಅವರ ವಿರುದ್ಧ ಮತ್ತು ಮಂತ್ರಿ ಮಂಡಲದ ವಿರುದ್ಧ ನಡೆದಿರತಕ್ಕಂಥ ಪಿತೂರಿಯ ಚಿತ್ರವನ್ನು ಕೊಟ್ಟು ಎರಡು ಸೂಚನೆಗಳನ್ನು ಮಾಡಿದೆ, ದೀರ್ಘವಾಗಿ ನಡೆದಿರತಕ್ಕಂಥ ಶಾಸನ ಮಂಡಲದ ಅಧಿವೇಶನವನ್ನು ಮುಂದೂಡುವುದು ಅತ್ಯಂತ ಅಗತ್ಯವಾಗಿ ಆಗಬೇಕಾದ ಯಾವ ಮಹತ್ವದ ಕೆಲಸವೂ ಶಾಸನ ಮಂಡಲದ ಮುಂದೆ ಇರಲಿಲ್ಲ. ಮತ್ತು ಅನೇಕ ದಿನಗಳ ಹಿಂದೆ ಶ್ರೀ ನಿಜಲಿಂಗಪ್ಪನವರು ಮಂತ್ರಿ ಮಂಡಲದ ವಿಸ್ತರಣೆಯ ಬಗ್ಗೆ ಮಾಡಿದ ಪ್ರಕಟಣೆಯನ್ನು ಕೂಡಲೆ ಜಾರಿಗೆ ತಂದು ವಿರುದ್ಧ ಗುಂಪಿನ ಕೆಲವು ಮುಖಂಡರನ್ನು ಮಂತ್ರಿ ಮಂಡಲದಲ್ಲಿ ಸೇರಿಸುವುದು. ಶ್ರೀ ನಿಜಲಿಂಗಪ್ಪನವರು ಈ ಸೂಚನೆಗಳನ್ನು ಒಪ್ಪಲಿಲ್ಲ. ಅವರು ಹೇಳಿದರು : "ನಾವು ಪ್ರಾಮಾಣಿಕರಾಗಿ ನಮ್ಮ ಕೆಲಸವನ್ನು ಮಾಡುತ್ತಾ ಹೋಗೋಣ. ನಮ್ಮ ಪಕ್ಷದ ಶಾಸಕರಲ್ಲಿ ನನಗೆ ವಿಶ್ವಾಸವಿದೆ. ಅವರು ನಾಡಿಗೆ ಅಹಿತವಾಗುವ ಯಾವ ಕೆಲಸವನ್ನೂ ಮಾಡಲಾರರು. ಅದಕ್ಕೂ ಮಿಕ್ಕು ಅವರು ನನ್ನ ಮೇಲೆ ಅವಿಶ್ವಾಸವನ್ನು ವ್ಯಕ್ತ ಪಡಿಸುವುದಾದರೆ ಹಾಗೇ ಮಾಡಲಿ, ಅದಕ್ಕೆ ನಾವೇಕೆ ಹೆದರಬೇಕು. ಸೀನಿದರೆ ಬಿದ್ದು ಹೋಗುವ ಮೂಗನ್ನು ಇಟ್ಟುಕೊಂಡು ನಾನೇನು ಮಾಡಲಿ."

ಕೆಲವೇ ದಿನಗಳಲ್ಲಿ ಶ್ರೀ ನಿಜಲಿಂಗಪ್ಪನವರು ಮಂತ್ರಿ ಮಂಡಲದ ರಾಜೀನಾಮೆ ಕೊಡುವ ಪ್ರಸಂಗ ಬಂದಿತು. ವಿರೋಧಿ ಗುಂಪಿನ ಪ್ರತಿನಿಧಿ ಶ್ರೀ ಜತ್ತಿಯವರು ಮುಖ್ಯ ಮಂತ್ರಿಗಳಾದರು. ರಾಜೀನಾಮೆ ಕೊಟ್ಟ ದಿವಸ ಶ್ರೀ ನಿಜಲಿಂಗಪ್ಪನವರ ವರ್ತನೆಯಲ್ಲೇ ಆಗಲೀ, ಮುಖ ಭಾವದಲ್ಲೇ ಆಗಲೀ ಎಳ್ಳಷ್ಟೂ ಬದಲಾವಣೆ ಇರಲಿಲ್ಲ. ಶ್ರೀ ನಿಜಲಿಂಗಪ್ಪನವರು ತತ್ವ ಭ್ರಷ್ಟರಾಗಲು ಮನಸ್ಸು ಮಾಡಿದ್ದರೆ ಇಂದಿಗೂ ಅಧಿಕಾರದ ಅತಿ ದೊಡ್ಡ ಸ್ಥಾನದಲ್ಲಿ ಇರಬಹುದಾಗಿತ್ತು. ಅಷ್ಟೇಕೆ ಕರ್ನಾಟಕ ಏಕೀಕರಣದ ಚಳುವಳಿಯ ರಾಜಕೀಯ ಧುರೀಣ ಅವರು ಆಗದೆ ಇದ್ದಿದ್ದರೆ, ಏಕೀಕರಣ ಪೂರ್ವದಲ್ಲೂ, ಅವರು ಅಧಿಕಾರದ ಗದ್ದುಗೆಗೆ ಏರಬಹುದಿತ್ತು. ಅವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಪ್ರಧಾನ ಮಂತ್ರಿಗಳ ಮೇಲೆ ಶಿಸ್ತಿನ ಕ್ರಮ ತೆಗೆದುಕೊಂಡಿದ್ದರ ಬಗ್ಗೆ ಸಾರ್ವಜನಿಕರಲ್ಲಿ ಇನ್ನೂ ತಪ್ಪು ಭಾವನೆ ಇದೆ. ವ್ಯಕ್ತಿಯ ಮೇಲಿನ ದ್ವೇಷದಿಂದ ಅವರು ಆ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ವ್ಯಕ್ತಿಯ ತತ್ವ ಭ್ರಷ್ಟತೆಯನ್ನು ಸಹಿಸಲಾರದೆ ಅವರು ನಿಷ್ಠುರವಾದ ಕರ್ತವ್ಯವನ್ನು ಮಾಡಿದರು. ಅಧಿಕಾರದ ವ್ಯಾಮೋಹಕ್ಕಾಗಲೀ, ಪ್ರಚಾರದ ಲವಲವಿಕೆಗಾಲೀ ಅವರು ಎಂದೂ ಮನ ಸೋತವರಲ್ಲ. ಹಸುಳೆಯಂತಹ ನಿರ್ಮಲವಾದ ಅಂತಃಕರಣ ಅವರದು. ಸಾಧುವಿನಂತಹ ನಿರ್ಮಲವಾದ ಜೀವನ ಅವರದು. ಅವರು ರಾಜಕೀಯ ಚಾಣಾಕ್ಷರಾಗಿರಲಿಕ್ಕಿಲ್ಲ. ಆದರೆ ರೋಮರೋಮದಲ್ಲೂ ಸಜ್ಜನಿಕೆ ಸೂಸುತ್ತಿರುವ ವ್ಯಕ್ತಿ. ಹೆನ್ರಿಫೀಲ್ಡಿಂಗ್ ೧೮ ನೇ ಶತಮಾನದಲ್ಲಿ ಒಂದು ಮಾತು ಹೇಳಿದ : "Greatness consists in bringing all manner of mischief on making and goodness in removing it from them". ಶ್ರೀ ನಿಜಲಿಂಗಪ್ಪನವರಲ್ಲಿ ಒಳ್ಳೆಯತನ ತುಂಬಿಕೊಂಡಿದೆ.



# ಶ್ರೇಷ್ಠ ವ್ಯಕ್ತಿ

ಡಾ. ದೇಜಗೌ

ಶ್ರೀಮಾನ್ ಸಿದ್ಧವ್ವನಹಳ್ಳಿ ನಿಜಲಿಂಗಪ್ಪನವರನ್ನು ನಾನು ದೂರದಿಂದ ನೋಡಿರುವುದೇ ಹೆಚ್ಚು ; ಒಂದೆರಡುಸಾರಿ ಮಾತ್ರ ತೀರ ಹತ್ತಿರದಿಂದ ನೋಡುವ, ಎದುರಿಗೆ ಕುಳಿತು ಮಾತಾಡುವ ಅವಕಾಶ ದೊರೆತಿತ್ತು. ನಾನು ಕುಲಪತಿಯಾಗಿ ನೇಮಕಗೊಂಡ ಹೊಸದರಲ್ಲೊಂದು ದಿನ 'ಕುಮಾರ ಕೃಪಾ' ಅತಿಥಿ ಗೃಹದಲ್ಲಿದ್ದೆ. ಅಖಿಲ ಬಾರತ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ನಿಜಲಿಂಗಪ್ಪನವರೂ ಅಲ್ಲಿಯೇ ಉಳಿದುಕೊಂಡಿದ್ದಾರೆಂಬ ವಿಷಯ ತಿಳಿದಾಗ ಅವರನ್ನು ನೋಡೋಣವೆನ್ನಿಸಿತು. ನಾನವರ ಕೋಣೆಯ ಬಳಿ ನಿಂತು ಒಳಗೆ ಹೇಳಿ ಕಳಿಸಿದೆ. "ಕುಲಪತಿ ಸಾಹೇಬರೆ, ಒಳಗೆ ಬರಲಿ" ಎಂದು ಸುದ್ದಿ ಮುಟ್ಟಿಸಿದೊವನೊಡನೆ ಹೇಳಿದ ಮಾತು ಕೇಳಿಸಿತು. ನಾನು ಒಳಗೆ ಕಾಲಿಡುವಷ್ಟರಲ್ಲಿಯೇ ಅವರು ಬಾಗಿಲ ಬಳಿ ಬಂದು "ದಯುಮಾಡಿಸಿ" ಎಂದು ಪ್ರಸನ್ನವದನರಾಗಿ ಆತ್ಮೀಯತೆಯಿಂದ ಬರಮಾಡಿಕೊಂಡರು. "ತಾವು ಕಾರ್ಯನಿರತರಾಗಿರುವಂತೆ ತೋರುತ್ತದೆ. ನಿಮ್ಮ ಕಾರ್ಯಕ್ಕೆ ಭಂಗತರಲಾರೆ. ತಮಗೆ ಗೌರವ ಸಲ್ಲಿಸಿ ಹೋಗಬೇಕೆಂದು ಬಂದೆ. ಮತ್ತೇನು ವಿಶೇಷವಿಲ್ಲ" ಎಂದೆ. "ಕುಳಿತುಕೊಳ್ಳಿ, ಸಾಹೇಬರೆ" ಎಂದು ನನ್ನನ್ನು ತಮ್ಮ ಪಕ್ಕದಲ್ಲಿ ಕೂರಿಸಿಕೊಂಡು "ಯಾರೊ ಅಲ್ಲಿ, ಸಾಹೇಬರು ಬಂದಿದ್ದಾರೆ, ಕಾಫಿ ತಾ" ಎಂದು ತಮ್ಮ ಮುಂದೆ ಬಂದು ನಿಂತವನಿಗೆ ತಾಕೀತು ಮಾಡಿದರು. ಅವರೇ ಮಾತು ಮುಂದುವರಿಸಿ "ಕುಲಪತಿ ಸ್ಥಾನ ದೊಡ್ಡದು, ಸ್ವಾಮಿ. ಅದರ ಕೀರ್ತಿಯನ್ನು ಉಳಿಸಿಕೊಂಡು ಬರಬೇಕಾದರೆ ತುಂಬಾ ಶ್ರಮಪಡಬೇಕು. ನೀವು ಆ ಸ್ಥಾನಕ್ಕೆ ಯೋಗ್ಯರು. ನಿಮಗೆ ಈ ಪದವಿ ಸಿಕ್ಕಿದ್ದು ತುಂಬಾ ಸಂತೋಷ. ಆ ಸ್ಥಾನದ ಕಷ್ಟ ನಿಷ್ಠುರಗಳನ್ನು ನಾನು ಬಲ್ಲೆ. ನೀವಿನ್ನೂ ಯುವಕರಂತೆ ಕಾಣುತ್ತಿರುವುದರಿಂದ ದಕ್ಷತೆಯಿಂದ ಆಡಳಿತ ನಡೆಸಬಲ್ಲಿರೆಂಬ ಭರವಸೆ ನನಗಿದೆ" ಎಂದರು. "ತಮ್ಮ ಆಶೀರ್ವಾದ ಕೈಗೂಡಲೆಂಬುದೇ ನನ್ನ ಆಸೆ. ತಾವು ಅಧ್ಯಕ್ಷ ಭಾಷಣ ಬರೆಯುತ್ತಿರುವಂತೆ ಕಾಣುತ್ತದೆ."

"ಹೌದೌದು. ಅದಕ್ಕಾಗಿಯೇ ಇಲ್ಲಿ ಬಂದು ಬೀಡುಬಿಟ್ಟಿದ್ದೇನೆ." ಕಾಫಿ ಬಂದು ಕುಡಿಯುವ ತನಕ ರಾಜಕೀಯದ ವಿಷಯಗಳನ್ನು ಮುಚ್ಚು ಮರೆಯಿಲ್ಲದೆ ವಿವರಿಸಿದರು. ಅವನ್ನು ಕೇಳಿಸಿಕೊಳ್ಳುವಾಗ ಅವರದು ಹಸುಳೆಯ ಮನಸ್ಸೆಂದು ಭಾಸವಾಗುತ್ತಿತ್ತು. ಸುಮಾರು ಅರ್ಧಗಂಟೆ ಅವರ ಬಳಿ ಕಾಲ ಕಳೆದೆನೆಂದು ತೋರುತ್ತದೆ.

ಮಾರನೆಯ ಬೆಳಿಗ್ಗೆ ನಾನು ಮೈಸೂರಿಗೆ ಹೊರಡಲಿದ್ದೆ. ಮಹಡಿಯಿಂದ ಕೆಳಗಿಳಿದು ಬಂದಾಗ "ಏನು ಸ್ವಾಮಿ ಹೊರಟುಬಿಟ್ಟರೆ?" ಎಂದು ಹೊರಗಡೆಯೆನಿಂತಿದ್ದ ಅವರು ಮಾತನಾಡಿಸಿದರು. "ಹೌದು, ಸಾರ್" "ನಾನೇ ನಿಮ್ಮ ಕೋಣೆಗೆ ಬರೋಣವೆಂದು ಕೊಂಡಿದ್ದೆ. ಯಾರೊ ಬಂದಿದ್ದರಿಂದ ಅವರೊಡನೆ ಮಾತಾಡುತ್ತ ಹೊತ್ತಾಯಿತು." "ನನ್ನ ಕೋಣೆಗೆ ತಾವು ಬರುವುದೇ? ಹೇಳಿಕಳಿಸಿದ್ದರೆ ನಾನೇ ಬರುತ್ತಿದ್ದೆ". "ನಾನು ಬರಬಾರದೆ? ನಾನೇನೇ ಆಗಿದ್ದರೂ ಕುಲಪತಿಗಳ ಬಳಿ ನಾನೇ ಹೋಗಬೇಕಾದ್ದು ಧರ್ಮ." "ಅದು ತಮ್ಮ ಹಿರಿತನವನ್ನು ತೋರಿಸುತ್ತದೆ. ತಮ್ಮ ಆಶೀರ್ವಾದವಿರಲಿ. ಬರುತ್ತೇನೆ" ಕಾರಿನ ಬಳಿ ಬಂದು ನಿಂತು, ಕಾರು ಹತ್ತಿಸಿ ಹೋದರು.

ಅವರ ನಿಷ್ಕಪಟವಾದ ನಡೆನುಡಿಗಳಿಗೆ, ಸರಸ ಸಜ್ಜನಿಕೆ, ಸರಳತೆಗೆ, ಸ್ನೇಹಕ್ಕೆ ಮಾರು ಹೋದೆ. ಕೇವಲ ಕೆಲವೇ ನಿಮಿಷಗಳ ಮಾತುಕತೆಯಿಂದ ಅವರು ಶ್ರೇಷ್ಠ ನಾಯಕರಾದುದರ ರಹಸ್ಯವನ್ನರಿತು ಕೊಂಡೆ.

ಇತ್ತೀಚೆಗೆ ಮಿತ್ರರ ಕಾರ್ಯಚತುರತೆಯಿಂದ ಮೈಸೂರಲ್ಲಿ ರಾಜ್ಯೋತ್ಸವ ಅದ್ದೂರಿಯಿಂದ ಜರುಗಿತಷ್ಟೆ. ರಾಜ್ಯೋತ್ಸವ ಸಮಿತಿ ಸನ್ಮಾನ ಮಾಡಿದ ಮಹನೀಯರಲ್ಲಿ ಅವರೂ ಒಬ್ಬರು. ನಾವು ಸಲ್ಲಿಸುವ ಗೌರವನ್ನೊಪ್ಪಿಕೊಳ್ಳಬೇಕೆಂದು ಪತ್ರ ಬರೆದಾಗ "ಬರುತ್ತೇನೆ. ಕುಲಪತಿಗಳು ಆಜ್ಞೆ ಮಾಡುವಾಗ ಇಲ್ಲವೆನ್ನಲೇ?" ಎಂದು ಉತ್ತರ ಬರೆದರು. ಕ್ರಾಫರ್ಡ್ ಭವನದ ಬಳಿ ಮೆರವಣಿಗೆ ಶುರುವಾದಾಗ "ತಾವು ಮುಂದೆ ಬರಬೇಕು" ಎಂದು ನಾನು ಹೇಳಿದೆ. "ಮುಖ್ಯಮಂತ್ರಿಗಳು ಮುಂದೆ ನಡೆಯಬೇಕು. ನಾವೆಲ್ಲ ಹಿಂದಿರಬೇಕು" ಎಂದರು. "ಉಂಟೆ. ತಾವು ಕರ್ನಾಟಕದ ಶಿಲ್ಪಿಗಳು. ಹಿರಿಯರು. ಇಂದಿಗೂ ನೀವು ಮುಖ್ಯಮಂತ್ರಿಗಳೇ ಸರಿ". "ಆಗಲಿ, ಮುಖ್ಯಮಂತ್ರಿಗಳ ಪಕ್ಕದಲ್ಲಿ ಬರುತ್ತೇನೆ."

ಸನ್ಮಾನವಾದ ನಂತರ ಅವರು ಐದೇ ನಿಮಿಷ ಮಾತಾಡಿದರು. ದೇಶ ಮುಂದುವರಿಯ ಬೇಕಾದ ವಿಷಯವನ್ನು ಸಂಕ್ಷೇಪವಾಗಿ ವಿವರಿಸಿದರು. ಅವರ ಮಾತಿನಲ್ಲಿ ಉದ್ವೇಗವಿರಲಿಲ್ಲ; ಖಾರವಿರಲಿಲ್ಲ, ಕಹಿಯಿರಲಿಲ್ಲ, ಸೇಡಿರಲಿಲ್ಲ, ಅವುಗಳಿಗೆ ಬದಲಾಗಿ ತೂಕವಿತ್ತು, ಸ್ನೇಹವಿತ್ತು, ದೇಶಾಭಿಮಾನವಿತ್ತು, ದೊಡ್ಡಸ್ತಿಕೆಯಿತ್ತು, ಸಮಾರಂಭ ಮುಗಿದನಂತರ ಭೋಜನಕ್ಕಾಗಿ ಮನೆಗೆ ಬಂದರು. ತುಂಬ ಹೊತ್ತು ಇತರ ಅತಿಥಿಗಳೊಡನೆ ಸರಸವಾಗಿ ಮಾತಾಡಿದರು. ಅಷ್ಟು ಹೊತ್ತಿನ ಮಾತುಕತೆಗಳಲ್ಲಿ ದುಡುಕಾಗಲಿ, ಕ್ರೋಧವಾಗಲಿ ಕಾಣಲಿಲ್ಲ. ನಾನು ತಿಳಿದದ್ದಕ್ಕಿಂತ ತುಂಬ ದೊಡ್ಡವರೆಂದು ಅಂದು ನನಗರಿವಾಯಿತು.

ಭಾರತದಲ್ಲಿಂದು ಜಾತೀಯತೆ ದಿನೇ ದಿನೇ ಉಲ್ಬಣವಾಗುತ್ತಿದೆಯಷ್ಟೆ. ಈಗಂತೂ ರಾಜಕೀಯದ ಏಣಿಯನ್ನೇರುವ ಹಂತ ಅದೇ ಆಗಿದೆ. ಅದೊಂದೇ ನಾಯಕರ ಊರುಗೋಲಾಗಿದೆ. ಈ ಸಂಬಂಧವಾಗಿ ಶ್ರೀ ನಿಜಲಿಂಗಪ್ಪನವರನ್ನು ಕುರಿತು ನನ್ನ ನಿಕಟ ಬಂಧು ಶ್ರೀ ಟಿ. ಮಾದಯ್ಯ ಗೌಡರು ಬಹುದಿನಗಳ ಹಿಂದೆ ಹೇಳಿದ ಪ್ರಸಂಗವೊಂದು ನೆನಪಿಗೆ ಬರುತ್ತದೆ. "ನಿಜಲಿಂಗಪ್ಪನವರಲ್ಲಿ

ಜಾತೀಯ ಮನೋಭಾವ ಇದ್ದಂತೆ ತೋರುವುದಿಲ್ಲ. ತಮ್ಮ ಜಾತಿಯವರ ಒತ್ತಾಯಕ್ಕೆ ಸಿಕ್ಕಿಬಿದ್ದು ಒಂದೆರಡು ಕೆಲಸ ಹೆಚ್ಚಾಗಿ ಕೊಟ್ಟಿರಬಹುದು. ಆದರೆ ಅವರು ಪ್ರಧಾನವಾಗಿ ಸಾಚಾ ಮನುಷ್ಯ, ನಿಷ್ಕಲ್ಮಷ ಮನಸ್ಸುಳ್ಳವರು. ಮುಖ್ಯಮಂತ್ರಿಯಾಗಿದ್ದಾಗ ನಾನವರನ್ನು ನೋಡುವ ಸಲುವಾಗಿ ಅವರ ಮನೆಗೆ ಹೋಗಿದ್ದೆ. ದಿವಾನಖಾನೆಯಲ್ಲಿ ಯಾರೊಡನೆಯೊ ಮಾತಾಡುತ್ತಿದ್ದುದರಿಂದ ನಾನು ಹೊರಗಿನ ಪಡಸಾಲೆಯಲ್ಲಿ ಕುಳಿತಿದ್ದೆ. ಕಿಟಕಿಯ ಮೂಲಕ ಅವರ ಮಾತುಕತೆ ನನಗೆ ಕೇಳಿಸುತ್ತಿತ್ತು. ಅವರೊಡನೆ ಮಾತಾಡುತ್ತಿದ್ದವರು ಲಿಂಗಾಯತರಿದ್ದಿರಬೇಕು. ಏನೋ ಬೇಡಿಕೆಗಳನ್ನವರು ಮುಖ್ಯ ಮಂತ್ರಿಗಳ ಮುಂದೆ ಮಂಡಿಸಿರಬೇಕು. ಒಂದು ಘಟ್ಟದಲ್ಲಿ ಉದ್ವಿಗ್ನರಾಗಿ "ನಾನಿರುವುದು ಒಂದೇ ಒಂದು ಕೋಮಿಗಲ್ಲ. ರಾಜ್ಯದ ಎಲ್ಲಾ ಕೋಮುಗಳ ಹಿತಾಸಕ್ತಿಯನ್ನು ಗಮನಿಸಬೇಕಾದ್ದು ಮುಖ್ಯಮಂತ್ರಿಯ ಧರ್ಮ. ನಾನು ಮುಖ್ಯಮಂತ್ರಿಯಾಗಿರುವುದು ನಿಮಗಿಷ್ಟವಿಲ್ಲದಿದ್ದರೆ ಈಗಲೇ ತ್ಯಜಿಸುತ್ತೇನೆ" ಎಂದು ಕೂಗಿಕೊಂಡರು. ನಾನಲ್ಲಿ ಕುಳಿತಿದ್ದದ್ದು ಅವರಿಗೆ ಖಂಡಿತ ತಿಳಿದಿರಲಿಲ್ಲ. "ಪೂನಾದಲ್ಲಿ ನಾವಿಬ್ಬರೂ ಸಹಪಾಠಿಗಳು. ಆದ್ದರಿಂದ ನಾನವರನ್ನು ಚೆನ್ನಾಗಿ ಬಲ್ಲೆ." ಮಾದಯ್ಯ ಗೌಡರ ಈ ಹೇಳಿಕೆ ಅವರ ವ್ಯಕ್ತಿತ್ವದ ಹಿರಿಮೆಯನ್ನೆತ್ತಿ ತೋರಿಸುತ್ತದೆ.

ಎರಡು ಮೂರು ಸಲ ನಿಜಲಿಂಗಪ್ಪನವರ ಭಾಷಣಗಳನ್ನು ಕೇಳಿದ್ದೇನೆ. ಕೋಲಾಹಲವಿಲ್ಲದ ಅವರ ಭಾಷಣಗಳಿಂದ ಅವರ ಸರಳವೂ ಮುಗ್ಧವೂ ಆದ ವ್ಯಕ್ತಿತ್ವ ಎದ್ದು ಕಾಣುತ್ತದೆ. ದೊಡ್ಡ ಅಧಿಕಾರಿಯಾಗಲಿ ಸಣ್ಣ ನೌಕರನಾಗಲಿ ಎಲ್ಲರನ್ನು ಪ್ರೀತಿಯಿಂದ ಏಕರೀತಿಯಾಗಿ ಮಾತಾಡಿಸುವುದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಸಾಮಾನ್ಯವಾಗಿ ಕೆಲವು ಸಚಿವ ಮಿತ್ರರಲ್ಲಿ ಕಾಣಬಹುದಾದ ಅಹಂಕಾರ ತೇಂಕಾರಗಳಾಗಲಿ, ದುರದುಂಬಿತನವಾಗಲಿ ಅವಿವೇಕವಾಗಲಿ, ದುಶ್ಚಟಗಳಾಗಲಿ, ದೌಷ್ಟ್ಯವಾಗಲಿ ಅವರಲ್ಲಿ ಕಾಣುವುದಿಲ್ಲ.

ಶ್ರೀ ನಿಜಲಿಂಗಪ್ಪನವರು ರಾಷ್ಟ್ರದ ಅಗ್ರಗಣ್ಯ ನಾಯಕರಲ್ಲೊಬ್ಬರು. ಈ ತನಕ ಅಖಿಲ ಭಾರತೀಯ ಮಟ್ಟದ ರಾಜಕೀಯ ಪಕ್ಷವೊಂದರ ಅಧ್ಯಕ್ಷರಾದ ಕನ್ನಡಿಗರೆಂದರೆ ಇವರೊಬ್ಬರೆ. ಉತ್ತರದವರು ಆ ಪದವಿಗಳನ್ನು ಸುಲಭವಾಗಿ ದಕ್ಷಿಣದವರಿಗೆ ಬಿಟ್ಟು ಕೊಡುವವರಲ್ಲ. ತಮ್ಮ ವ್ಯಕ್ತಿತ್ವದ ಹಿರಿಮೆಯಿಂದ ಆ ಪದವಿಯನ್ನು ಸಂಪಾದಿಸಿಕೊಂಡು ಕನ್ನಡ ನಾಡಿಗೆ ಹೆಮ್ಮೆಯುಂಟು ಮಾಡಿದ ಹಿರಿಯ ವ್ಯಕ್ತಿ ಅವರು. ಸ್ವಾತಂತ್ರ್ಯ ಸಮಯದಲ್ಲಿ ತ್ಯಾಗವೀರರಾಗಿ ನಿಷ್ಠೆಯಿಂದ ಹೋರಾಡಿ ದೀರ್ಘಕಾಲ ಸೆರೆವಾಸವನ್ನನುಭವಿಸಿದ್ದು ಸರ್ವವೇದ್ಯವಾಗಿದೆ. ಕರ್ನಾಟಕ ಏಕೀಕರಣಕ್ಕಾಗಿ ಶ್ರದ್ಧೆಯಿಂದ ದುಡಿದವರಲ್ಲಿ ಅವರು ಅಗ್ರಗಣ್ಯರು. ನಿಜವಾಗಿ ಕರ್ನಾಟಕ ನಾಮಕರಣ ಅವರ ಅಧಿಕಾರಾವಧಿ ಯಲ್ಲಿಯೇ ಆಗಬೇಕಾಗಿತ್ತು. ಆದರೆ ಹಳೆಯ ಮೈಸೂರಿನ ಜನ ಏನೆಂದು ಕೊಂಡಾರೋ ಎಂಬ ಭಯದಿಂದ ಆ ಪ್ರಕರಣವನ್ನು ಬಿರುಸುಗೊಳಿಸಲಿಲ್ಲ, ತೀವ್ರಗೊಳಿಸಲಿಲ್ಲ. ನಾಮಕರಣ ಪ್ರಸಂಗ ದಿಂದಾಗಿ ವಾತಾವರಣವನ್ನು ಹದೆ ಗೆಡಿಸುವುದು ಆ ಸ್ನೇಹಶೀಲ ವ್ಯಕ್ತಿಗೆ ಹಿಡಿಸಲಿಲ್ಲ. ಉತ್ತರ ಹಾಗೂ ದಕ್ಷಿಣ ಕರ್ನಾಟಕಗಳ ಸ್ನೇಹ ಸೇತುವಂತಿದ್ದು 'ಕರ್ನಾಟಕ ಶಿಲ್ಪಿ' ಎಂಬ ಬಿರುದಿಗೆ ಸರ್ವಯೋಗ್ಯರು. ನಿಜಲಿಂಗಪ್ಪನವರು ಶತಾಯುಷಿಗಳಾಗಿ ಬಾಳಿ ಕರ್ನಾಟಕದ ಪ್ರಗತಿಗೆ ಸದಾ ದುಡಿಯುತ್ತಿರಬೇಕೆಂದು ಕನ್ನಡ ಜನತೆಯ ಆಸೆಯಾಗಿದೆ. ಆ ಆಸೆ ಈಡೇರಲೆಂದು ಪರಮೇಶ್ವರನನ್ನು ಪ್ರಾರ್ಥಿಸುತ್ತೇನೆ. 

# ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು

ಎಲ್. ಸಿದ್ದಪ್ಪ

ಕನ್ನಡಿಗರಾಗಿ, ಕರ್ನಾಟಕದ ಸಮಸ್ತ ಜನ ಕೋಟಿಗೆ ಚಿರಪರಿಚಯವಿರುವ ಭಾರತದ ಹಿರಿಯ ಮುತ್ಸದ್ದಿ ಯಾರೆಂದು ಶ್ರೀ ಸಾಮಾನ್ಯರನ್ನು ಕೇಳಿದರೆ ಅವರು ತಟ್ಟನೆ 'ನಿಜಲಿಂಗಪ್ಪನವರು' ಎಂದು ಆತ್ಮವಂಚನೆ ಇಲ್ಲದೆ ಹೇಳುತ್ತಾರೆ.

ಭಾರತದ ಬಂಧನದ ಬಿಡುಗಡೆಗಾಗಿ, ಕರ್ನಾಟಕ ಏಕೀಕರಣಕ್ಕಾಗಿ, ಅದರ ನಿರ್ಮಾಣಕ್ಕಾಗಿ, ಅಭಿವೃದ್ಧಿಗಾಗಿ ಆಶೆ ಆಮಿಷಗಳನ್ನು ತೊರೆದು ಅನವರತ ಹೋರಾಡಿದ ಜನ ನಾಯಕ ನಿಜಲಿಂಗಪ್ಪನವರು ೧೯೦೨ ಡಿಸೆಂಬರ್ ೧೦ರಂದು ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲ್ಲೂಕು ಹಲವಾಗಲು ಗ್ರಾಮದಲ್ಲಿ ಹುಟ್ಟಿದರು. ಅವರ ತಂದೆ ಅಬಲೂರು ಅಡಿವೆಪ್ಪನವರು. ತಾಯಿ ನೀಲಮ್ಮನವರು. ನಿಜಲಿಂಗಪ್ಪ ಚಿಕ್ಕವರಾಗಿದ್ದಾಗಲೇ ಅವರ ತಂದೆ ಕಾಲವಾದರು. ಮೂರು ವರ್ಷವಿರುವಾಗ ತಂದೆಯನ್ನು ಕಳೆದುಕೊಂಡ ನಿಜಲಿಂಗಪ್ಪನವರಿಗೆ ತಾಯಿಯೇ ಮಾರ್ಗದರ್ಶಿ ಯಾದರು. ಕಡುಬಡತನದ ಸಂಕಷ್ಟಗಳಲ್ಲಿ ಮಗನನ್ನು ಸಾಕುವ ಪೂರ್ಣ ಭಾರ ತಾಯಿಯ ಪಾಲಿಗೆ ಬಿತ್ತು. ಹಲವಾಗಲ ಹಳ್ಳಿಯಿಂದಲೆ ನಿಜಲಿಂಗಪ್ಪನವರ ಓದು ಆರಂಭವಾಯಿತು. ಹೊಲಗೂಲಿ ಮಾಡಿ ನೀಲಮ್ಮನವರು ತಮ್ಮ ಸಂಸಾರವನ್ನು ನಿರ್ವಹಿಸಬೇಕಾಗಿತ್ತು. ಅಂತಹ ಪರಿಸ್ಥಿತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಸಿದ್ದವ್ವನಹಳ್ಳಿಯಲ್ಲಿದ್ದ ನೀಲಮ್ಮನವರ ಸೋದರಿ ತಮ್ಮ ಊರಾದ ಸಿದ್ದವ್ವನಹಳ್ಳಿಗೆ ಅಕ್ಕನನ್ನು ಕರೆಸಿಕೊಂಡರು. ಹಾಗಾಗಿ ಸಿದ್ದವ್ವನಹಳ್ಳಿ ಎನ್ನುವದು ನಿಜಲಿಂಗಪ್ಪನವರ ಹೆಸರಿನ ಒಂದು ಭಾಗವೆನಿಸಿ ಅವರ ಹೆಸರಿನೊಂದಿಗೆ ಉಳಿದುಕೊಂಡಿದೆ. ಆ ತಾಯಿ ಅವರ ಚಿಕ್ಕಮ್ಮನ ಬಗ್ಗೆ ನಿಜಲಿಂಗಪ್ಪನವರು ಬಹಳ ಗೌರವದಿಂದ ನಡೆದುಕೊಂಡರು. ಅವರ ಚಿಕ್ಕಮ್ಮ, ಚಿಕ್ಕಪ್ಪ ಸಿದ್ದವ್ವನಹಳ್ಳಿ ರುದ್ರಪ್ಪನವರ ನೆರವಿನಿಂದ ದಾವಣಗೆರೆ, ಚಿತ್ರದುರ್ಗಗಳಲ್ಲಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಂದುವರೆಸಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ

ಬಿ. ಎ. ಪದವೀಧರರಾಗಿ ಅನಂತರ ೧೯೨೬ರಲ್ಲಿ ಪೂನಾ ವಿಶ್ವವಿದ್ಯಾನಿಲಯದಲ್ಲಿ ಕಾನೂನು ಪದವಿ ಪಡೆದರು. ಸ್ವತಂತ್ರವಾಗಿ ವಕೀಲ ವೃತ್ತಿ ಕೈಗೊಂಡು ಕೆಲವೇ ವರ್ಷಗಳಲ್ಲಿ ಚಿತ್ರದುರ್ಗದ ಒಬ್ಬ ಗಣ್ಯ ವಕೀಲರೆಂದು ಹೆಸರು ಪಡೆದರು. ೧೯೨೭ರ ಸುಮಾರು ಮಹಾತ್ಮ ಗಾಂಧೀಜಿಯವರ ಸ್ವಾತಂತ್ರ್ಯ ಆಂದೋಳನದ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಸಮರದಲ್ಲಿ ಧುಮುಕಿದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎದ್ದು ಕಾಣುವ ಯೋಧರಾದಕಾರಣ ಅನೇಕ ಸಲ ಅವರು ಸೆರೆಮನೆ ವಾಸವನ್ನು ಅನುಭವಿಸ ಬೇಕಾಯಿತು. ಕೊನೆಗೆ ಬ್ರಿಟಿಷ್ ಸರಕಾರ ಅವರ ವಕೀಲ ಸನ್ನದನ್ನು ಕಸಿದುಕೊಂಡಿತು. ಒಮ್ಮೆ ಆಂಗ್ಲ ಆಡಳಿತ ಮನ್ನಾ ಮಾಡಿದ ವಕೀಲ ಸನ್ನದನ್ನು ಪುನಃ ನಿಜಲಿಂಗಪ್ಪನವರು ಪಡೆಯಲೇ ಇಲ್ಲ. ಅದರಿಂದಾಗಿ ದುಡಿಮೆ ಇಲ್ಲದ ಅವರ ಸಂಸಾರ ಎಷ್ಟೋ ಕಷ್ಟಕ್ಕೆ ಈಡಾದರೂ ಎದೆಗುಂದದೆ ನಾಡದೇವಿಯ ಬಂಧನದ ಬಿಡುಗಡೆಗೆ ತಮ್ಮ ತನು ಮನ ಧನಗಳನ್ನು ಸಮರ್ಪಿಸಿದರು.

ಅವರು ಪ್ರಾರಂಭದ ರಾಜಕೀಯದಿಂದ ದಕ್ಷಿಣ ಕರ್ನಾಟಕಕ್ಕೆ ಚಿರಪರಿಚಿತರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ, ಕರ್ನಾಟಕ ಏಕೀಕರಣ ಹೋರಾಟದ ಸೇನಾನಿಯಾಗಿ ಹಾಗೂ ನೇತಾರರಾಗಿ ಸಮಸ್ತ ಕನ್ನಡಿಗರ ಆತ್ಮೀಯ ಬಂಧುಗಳೆನಿಸಿದ್ದಾರೆ. ಕರ್ನಾಟಕದ ಮುಖ್ಯಮಂತ್ರಿಗಳಾಗಿ, ಅಖಿಲಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಪರಿಚಿತರಾಗಿದ್ದಾರೆ. ಭಾರತದ ಹಿರಿಯ ಮುತ್ಸದ್ದಿಗಳಾಗಿದ್ದಾರೆ. ಕರ್ನಾಟಕದಲ್ಲಿ ಗಾಂಧೀವಾದಿ ಗಳಿದ್ದಾರೆಂದರೆ, ಆಗ ನಿಜಲಿಂಗಪ್ಪನವರ ಕಡೆ ಬೆರಳು ಮಾಡಿ ತೋರಿಸಬಹುದು. ಸ್ವಾತಂತ್ರ್ಯ ನಂತರ, ಲೋಕಸಭಾ ಸದಸ್ಯರಾಗಿ, ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಆ ಸಂಸ್ಥೆಯ ರಚನಾತ್ಮಕ ಕಾರ್ಯಕ್ರಮಗಳ ಉಪ ಸಮಿತಿಯ ಅಧ್ಯಕ್ಷರಾಗಿ, ಕಾಂಗ್ರೆಸ್ಸಿನ ಚುನಾವಣಾ ಮಂಡಳದ ಸದಸ್ಯರಾಗಿ, ರಾಷ್ಟ್ರ ಮಟ್ಟದಲ್ಲಿ ಸೇವೆ ಸಲ್ಲಿಸಿದ್ದಾರೆ. ಅದರ ಜೊತೆಗೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, ತಮ್ಮ ಶಕ್ತಿ, ಕಾಲ, ದುಡಿಮೆ ಎಲ್ಲವನ್ನೂ ತ್ಯಾಗಮಯಿಯಾಗಿ ನಾಡಿನ ಅಖಂಡ ಕರ್ನಾಟಕ ಏಕೀಕರಣಕ್ಕಾಗಿ ವಿನಿಯೋಗಿಸಿದರು. ಆ ಮಧ್ಯೆ ಯಾವ ಆಶೆ ಆಮಿಷಗಳಿಗೂ ಬಲಿಯಾಗದೆ ಭಾಷಾವಾರು ಪ್ರಾಂತ್ಯ ರಚನೆಗಾಗಿ ದುಡಿದರು. ಆಗ್ಗೆ ಪ್ರಮುಖ ನಾಯಕರಾಗಿ ಎದೆಗುಂದದೆ ಕಾರ್ಯಸಾಧಿಸಿದ ಕೀರ್ತಿ ನಿಜಲಿಂಗಪ್ಪನವರಿಗೇ ಸಲ್ಲಬೇಕು. ಪ್ರಾಂತ ಪುನರ್ವಿಂಗಡಣೆಯ ಮಹಾ ಶಿಲ್ಪಿಯಾದರು. ಆ ಪರ್ವ ಕಾಲದಲ್ಲಿ ಅವರು ಲೋಕ ಸಭಾಸದಸ್ಯರಾಗಿ, 'ಬಿ' ಮತ್ತು 'ಸಿ' ರಾಜ್ಯಗಳ ಲೋಕ ಸಭಾ ರಾಜ್ಯಸಭಾ ಸದಸ್ಯರುಗಳ ಭಾಷಾವಾರು ಪ್ರಾಂತ್ಯ ರಚನಾ ವಿಶೇಷ ಸಮಿತಿ (Special Committee)ಯ ಅಧ್ಯಕ್ಷರಾಗಿ, ಭಿನ್ನ ಭಿನ್ನ ಮನೋಭಾವದ ಜನರೊಂದಿಗೆ ಹೊಂದಿಕೊಂಡು ಭಾಷಾವಾರು ಪ್ರಾಂತ್ಯ ರಚನೆ, ನಾಡ ಏಕೀಕರಣದ ಹೋರಾಟದ ಧುರೀಣತ್ವದ ಹೊರೆಯನ್ನು ತಮ್ಮ ಹೆಗಲಮೇಲೆ ಹೊತ್ತುಕೊಂಡು, ೧೯೪೫ರಿಂದ ೧೯೫೬ರ ವರೆಗೆ ಕರ್ನಾಟಕ ಏಕೀಕರಣ ಫಲಿಸಿ ಕರ್ನಾಟಕ ರಾಜ್ಯ ನಿರ್ಮಾಣವಾಗುವವರೆಗೂ, ಎಷ್ಟೇ ಎಡರುತೊಡರುಗಳು ಒದಗಿ ತಾಳಲಸಾಧ್ಯವಾಗದೆ ನೋವಾದರೂ-ಹೊತ್ತಭಾರವನ್ನು ಕೆಳಗಿಳಿಸಲಿಲ್ಲ. ಆ ಸಂದಿಗ್ಧ ಪರಿಸ್ಥಿತಿಯನ್ನು ದಾಟುತ್ತಾ - "ಅಧಿಕಾರಕ್ಕೆ ಸನ್ಯಾಸಿಯಾಗಿ ಗೃಹಕ್ಕೆ ಸುದಾಮನಾಗಿ"- ಏಕೀಕರಣ ಎಂದರೆ ನಿಜಲಿಂಗಪ್ಪ, ನಿಜಲಿಂಗಪ್ಪ ಎಂದರೆ ಏಕೀಕರಣವೆಂಬಂತೆ ಅವರು ದುಡಿದು ನಾಡ ನಾಯಕರಾಗಿ ಜನಪ್ರಿಯರಾದರು. ಆಕ್ರಮಣಕಾರಿ ಮನೋಭಾವವಿಲ್ಲದೆ, ಅಸಂಬದ್ಧ

ಕಾರ್ಯ ಗಳನ್ನೆಸಗದೆ, ಅಭಿಮಾನ ಧನರಾಗಿ ಪ್ರೀತ್ಯಾದರಗಳಿಂದಲೇ ಕರ್ನಾಟಕ ಏಕೀಕರಣಕ್ಕಾಗಿ ಕೇಂದ್ರದ ವರಿಷ್ಠ ವರ್ಗದವರ ಮನ ಸೆಳೆದು, ಮಹಾತ್ಮಾಗಾಂಧೀಜಿಯವರ ಆಶೀರ್ವಾದವನ್ನು ಏಕೀಕರಣ ಪರವಾಗಿ, ಭಾಷಾವಾರು ಪ್ರಾಂತ್ಯರಚನೆಗಳ ಪರವಾಗಿ ಪಡೆದು ದುಡಿದರು. ಪ್ರಾಂತ್ಯರಚನಾ ಕಾರ್ಯದಲ್ಲಿ ಭಾರತದ ಪ್ರಮುಖ ನಾಯಕರಲೊಬ್ಬರಾದರು. ಸತತವಾಗಿ ಎಂಟು ವರ್ಷಗಳ ಕಾಲ ಕೆ.ಪಿ.ಸಿ.ಸಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಆ ಸ್ಥಾನದ ಘನತೆಯನ್ನು ಹೆಚ್ಚಿಸಿದರು. ಏಕೀಕರಣ ಪರ್ವಕಾಲಕ್ಕೆ, ಉಗ್ರಧೋರಣೆಯಿಂದಾಗಿ ಅವರು ಕೆ.ಪಿ.ಸಿ.ಸಿಯ ಅಧ್ಯಕ್ಷ ಗದ್ದುಗೆಯನ್ನು ಇಳಿಯ ಬೇಕಾಯಿತು. ಅಧಿಕಾರ ಹೋದರೂ, ಧೈರ್ಯಗುಂದದೆ, ಖಿನ್ನರಾಗದೆ ಮತ್ತಷ್ಟು ಸ್ಥೈರ್ಯ ದಿಂದ ಏಕೀಕರಣ ರಥವನ್ನು ನಡೆಸಿದರು. ಬೆಳಗಾವಿ ಸಭೆ, ಬೆಂಗಳೂರು ಗಡಿನಾಡು ಕನ್ನಡಿಗರ ಸಭೆ, ದಾವಣಗೆರೆಯ ಅಧಿವೇಶನ, ನಿಜಲಿಂಗಪ್ಪ ಅವರನ್ನು ಬೆಂಬಲಿಸಿದವು. ಅಷ್ಟರಲ್ಲಿ ವಿರೋಧಿಗಳು ಸಹ ಮಿತ್ರರಾದರು. ಅದಕ್ಕೆ ಅವರ ನಮ್ರತೆಯ ವೈಶಿಷ್ಟ್ಯ ಕಾರಣವೆನ್ನಬಹುದು. ಅಗ್ಗೆ ಎಲ್ಲರೂ ನಿಜಲಿಂಗಪ್ಪ ಅವರನ್ನು ಸಹಕರಿಸಿದರು. ಸೇನಾನಿ ನಿಜಲಿಂಗಪ್ಪ ಅವರು ನಾಡ ರಾಜಕೀಯ ಯುಧಿಷ್ಠಿರರಾದರು. ನಿಜಲಿಂಗಪ್ಪನವರಷ್ಟು ಕರ್ನಾಟಕ ಸುತ್ತಿದವರು, ಅವರಷ್ಟು ಕರ್ನಾಟಕವನ್ನು ಅರಿತವರು ಇನ್ನೊಬ್ಬರಿಲ್ಲ. ೧೯೫೬ರಲ್ಲಿ ಕರ್ನಾಟಕ ಪ್ರಾಂತ್ಯರಚನೆಯ ಘೋಷಣೆ ಹೊರಟು ನಿಜಲಿಂಗಪ್ಪನವರು ಅಖಿಲ ಕರ್ನಾಟಕದ ಸಮಸ್ತ ಕನ್ನಡಿಗರ ಹೃತ್ಪೂರ್ವಕ ಅಭಿನಂದನೆಗಳಿಗೆ ಪಾತ್ರರಾದರು. ಕರ್ನಾಟಕ ನಿಜಲಿಂಗಪ್ಪ ಅವರಿಗೆ ಪ್ರಥಮ ಮುಖ್ಯಮಂತ್ರಿ ಪದವಿಯನ್ನು ಕೊಟ್ಟು ತನ್ನನ್ನು ತಾನೇ ಗೌರವಿಸಿಕೊಂಡಿತು.

ಅವರು ಅಧಿಕಾರ ವಹಿಸಿಕೊಂಡಾಗಿನಿಂದ ಕಾರ್ಯಾ ಚರಣೆಗೆ ತಂದ ಕ್ರಮಗಳು ಜನತೆ ಮೆಚ್ಚುವಂತಹುಗಳು. ಗೋರ್ವಾಲ ಕಮಿಟಿ ವರದಿ, ಜತ್ತಿ ಭೂ ಸುಧಾರಣಾವರದಿ. ಕರ್ನಾಟಕ ಹಿಂದುಳಿದ ಪ್ರದೇಶಗಳ ಅಭಿವೃದ್ಧಿ, ಕರ್ನಾಟಕ ಮೆಡಿಕಲ್ ಕಾಲೇಜು [illegible] ಕಾವೇರಿ ನೀರಿನ ಪೂರೈಕೆ ಯೋಜನೆ, ಬೆಂಗಳೂರು ವಿಶ್ವ ವಿದ್ಯಾನಿಲಯ ಸ್ಥಾಪನೆ, ಶರಾವತಿ ವಿದ್ಯುತ್ ಅಗರ, ಅನೇಕ ನೀರಾವರಿ ಯೋಜನೆಗಳಿಗ [illegible]ಪಾಯ, ಸರ್. ಎಂ. ವಿಶ್ವೇಶ್ವರಯ್ಯ ಕೈಗಾರಿಕಾವಸ್ತು ಸಂಗ್ರಹಾಲಯ ಸ್ಥಾಪನೆ, ವಿಶ್ವೇಶ್ವರಯ್ಯ ಶತಮಾನೋತ್ಸವ ಸಮಿತಿ ಅಧ್ಯಕ್ಷರಾಗಿ, ಪಾವಟೆ ಶತಮಾನೋತ್ಸವ ಸಮಿತಿ ಅಧ್ಯಕ್ಷರಾಗಿ ಮಾಡಿದ ಕಾರ್ಯ, ಅನೇಕ ಸಕ್ಕರೆ ಕಾರ್ಖಾನೆಗಳ ಸ್ಥಾಪನೆ, ಬಂದರು ಯೋಜನೆ, ಕೃಷ್ಣಾಯೋಜನೆ ಇತ್ಯಾದಿಗಳು ಪ್ರಮುಖ.

ನಾಡೋದಯವಾದ ಸುಮಾರು ಒಂದೂವರೆ ವರ್ಷ ದೊಳಗಾಗಿ ಶ್ರೀ ನಿಜಲಿಂಗಪ್ಪನವರ ಸಚಿವ ಸಂಪುಟ ಅಧಿಕಾರ ದಲ್ಲಿರುವುದು ಬೇಡವಾಯಿತು. "ಸದಸ್ಯರಿಗೆ ಬೇಡವಾದಲ್ಲಿ ಅಧಿಕಾರದಲ್ಲಿ ಉಳಿಯಲು ಆಸೆಪಡುವುದಿಲ್ಲ" ಎಂದು ಒಂದೂ ಆರೋಪವಿಲ್ಲದ ತಮ್ಮ "ಸಭ್ಯ" ಸಂಪುಟದೊಡನೆ ನಗುವಿನಿಂದ ನಿರ್ಗಮಿಸಿದರು. ಅಧಿಕಾರದಿಂದಿಳಿದು ನಿಸ್ವಾರ್ಥಿಯಾದ ನಿಜಲಿಂಗಪ್ಪನವರು ಅಚ್ಚ ಪ್ರಜಾಪ್ರಭುತ್ವವಾದಿಯಾದರು. ಅವರ ವ್ಯಕ್ತಿತ್ವಕ್ಕೆ ಘನತೆ ಹೆಚ್ಚಿತು.

ಅನಂತರ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ, ಭಾರತ ಎಣ್ಣೆ ಕಂಪನಿಯ ಅಧ್ಯಕ್ಷರಾಗಿ (ವೇತನ ಪಡೆಯದೆ ಸೇವೆ ಸಲ್ಲಿಸಿದ್ದು ಕನ್ನಡಿಗರಿಗೆ ಗೌರವ ತಂದಿದೆ.) ರಾಷ್ಟ್ರಕ್ಕೆ ಸೇವೆ ಸಲ್ಲಿಸಿದರು.

ಮೂರನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಹೊಸದುರ್ಗ ಕ್ಷೇತ್ರದಿಂದ ರಾಜ್ಯ ವಿಧಾನ ಸಭೆಗೆ ಸ್ಪರ್ಧಿಸಿ ಮರೆಯಲಾಗದ ಗಣನೀಯ ಪರಾಭವವನ್ನು ಹೊಂದಿದರು. ಆದರೂ ಜನತೆಯ ಪ್ರೀತಿ ಗೌರವಾದಾರಗಳಿಗೆ ಪಾತ್ರರಾದ ಅವರಿಗೆ ಅವರ ಪ್ರಾಮಾಣಿಕತೆ ನಮ್ರತೆಗಳನ್ನು ಗುರುತಿಸಿ, ರಾಜಕೀಯ ಭ್ರಾತೃಗಳು ದೊರೆತು, ಬಾಗಲಕೋಟೆಯಿಂದ ಅವಿರೋಧವಾಗಿ ಆಯ್ಕೆಯಾಗಿ, ಸಹಕಾರದಿಂದ ಆಳುವ ಪಕ್ಷದ ನಾಯಕರಾಗಿ, ಪುನಃ ಮುಖ್ಯ ಮಂತ್ರಿಗಳಾದರು. ಇಷ್ಟೆಲ್ಲಕ್ಕೂ ಅವರ ತ್ಯಾಗ ಹಾಗೂ ಜನಪ್ರಿಯತೆ ಕಾರಣವೆನ್ನಬಹುದು.

ಅವರು ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿ ಏರುಪೇರುಗಳನ್ನು ಹತ್ತಿ ಹತ್ತಾರು ಬಾರಿ ಸೋತು ಗೆದ್ದು, ಮೂರನೇ ಭಾರಿಗೆ ಮುಖ್ಯಮಂತ್ರಿಯಾದರು. ಅದಕ್ಕೆ ಕಾರಣ-ಅವರು "ರಾಜಕೀಯದಲ್ಲಿರಬೇಕಾದುದಕ್ಕಿಂತಲೂ ಒಳ್ಳೆಯವರಾಗಿದ್ದಾರೆ."" ಎಂಬ ಮಾತು ಸಂಪೂರ್ಣ ಸತ್ಯ.

ಮುಖ್ಯಮಂತ್ರಿಯಾಗಿ ನಾಡಿನ ಯೋಜನೆ, ಕೃಷಿ, ಕೈಗಾರಿಕೆ ಬಗ್ಗೆ ಸಾಕಷ್ಟು ದುಡಿದು ಶ್ರಮಿಸಬೇಕೆಂದಿದ್ದ ನಿಜಲಿಂಗಪ್ಪನವರಿಗೆ, ಹಿರಿಯ ಕಾಂಗ್ರೆಸ್ ಧುರೀಣರಾದ ಕಾಮರಾಜ ಮತ್ತಿತರರೂ ಕೂಡಿ ಕಾಂಗ್ರೆಸ್ ಅಧ್ಯಕ್ಷರಾಗಿ ೧೧ನೇ ನವೆಂಬರ್ ೧೯೬೭ರಲ್ಲಿ ಅವಿರೋಧವಾಗಿ ಆಯ್ಕೆ ಮಾಡಿದರು. ಕನ್ನಡಿಗರೊಬ್ಬರು ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾದುದು ಅದೇ ಪ್ರಥಮಸಲ. ಅದು ಅವರ ಅಖಿಲ ಬಾರತ ಮಟ್ಟದ ನಾಯಕತ್ವವನ್ನು ತೋರಿಸುತ್ತದೆ. ಅಂದು ಅವರು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾದುದು ಕರ್ನಾಟಕಕ್ಕೆ ಸಂದ ಮಹಾ ಗೌರವವಾಯಿತು.

ಮುಖ್ಯಮಂತ್ರಿಯಾಗಿ ಹಾಗೂ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ ಕೆಲ ಕಾಲ ಮುಂದುವರೆದು, ಕಾಂಗ್ರೆಸ್ ಅಧ್ಯಕ್ಷರಾಗಿ ದೆಹಲಿಯಲ್ಲಿ ಕಾರ್ಯನಿರ್ವಹಿಸಿದರು. ಅಧ್ಯಕ್ಷರಾಗಿ ಅವರ ಜಪಾನು ಪ್ರವಾಸ ಐತಿಹಾಸಿಕ ಎನ್ನಬಹುದು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷ ಗದ್ದುಗೆಗೆ ಏರಿದ ಅವರು ಸ್ಫೂರ್ತಿಯಿಂದ ದುಡಿಯುತ್ತಾ ಹೋದರು. ಪಕ್ಷರಾಜಕೀಯದಿಂದ ಲಾಭ ಪಡೆಯಬೇಕೆನ್ನುವವರನ್ನು ಎದುರಿಸಿ ಕಾರ್ಯ ಮಾಡುವ ಐತಿಹಾಸಿಕ ಕಾಲ ಬಂದೊದಗಿತು. ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ತಳೆದ ಧೋರಣೆಯನ್ನು ಭಾರತದ ಎಲ್ಲ ಪ್ರಜ್ಞಾವಂತ ಜನರು ಬಲ್ಲರು. ಕಾಮರಾಜರು ಹಿನ್ನೆಲೆಯಲ್ಲಿ ಮಾಡಿದ ಪ್ರಯತ್ನಗಳು ವಿಫಲವಾದವು. ಮುರಾರ್ಜಿಯವರಿಗೆ ಮುಖಭಂಗವಾಯಿತೆನ್ನಬಹುದು. ಇಂದಿರಾಗಾಂಧಿಯವರಿಗೆ ಪಕ್ಷದಿಂದ ಉಚ್ಚಾಟನೆ, ಅವಿಭಾಜ್ಯ ಕಾಂಗ್ರೆಸ್ ಇಬ್ಭಾಗವಾಯಿತೆನ್ನಬಹುದು. ಆದರೆ ನಿಜಲಿಂಗಪ್ಪನವರು ೧೯೬೯ರಲ್ಲೇ ನಿಜವಾದ ಕಾಂಗ್ರೆಸ್ ಅಳಿದು ಹೋಯಿತೆಂದು ಹೇಳುತ್ತಾರೆ. ಕೆಲವು ನಾಯಕರು ಪಕ್ಷದ ಶಿಸ್ತನ್ನು ಉಲ್ಲಂಘಿಸಿ ನಡೆದರು. ಮತ್ತೆ ಕೆಲವರು ತತ್ವಕ್ಕೆ ತಿಲಾಂಜಲಿ ಯನ್ನಿತ್ತರು. ಒಟ್ಟಾರೆ ಪಕ್ಷ ಸ್ಫೂರ್ತಿ ಇಲ್ಲದಾಗಿ ಪಕ್ಷವು ಒಡೆಯಿತು. ಆಗ್ಗೆ ನಿಜಲಿಂಗಪ್ಪನವರು ಸಕಾಲಕ್ಕೆ ತಕ್ಕ ಕ್ರಮಕೈಗೊಳ್ಳಲಿಲ್ಲ ಎಂಬ ವಾದವಿದೆ. ಈ ಬಗ್ಗೆ ಇತಿಹಾಸಕಾರರು ಮೌಲ್ಯ ನಿರ್ಧಾರಮಾಡಿ ಘಟನೆಗಳ ಹಿನ್ನೆಲೆಯ ಪೂರ್ಣ ಸಂಗತಿಗಳನ್ನು ತಿಳಿದು ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ತಲೆದೋರಿದ ಬಿಕ್ಕಟ್ಟು ಮತ್ತು ಪಕ್ಷದ ಒಡಕಿಗೆ ಕಾರಣವನ್ನು ಭಾರತದ ಭಾವೀಜನಾಂಗಕ್ಕೆ ಹೇಳಬೇಕು.

ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಾದ ಚರಿತ್ರಾರ್ಹ ಘಟನೆಗಳಿಂದಾಗಿ ಮುಂದೆ ಸ್ವಲ್ಪಕಾಲ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷರಾಗಿ ಮುಂದುವರೆದ ಸಾದಿಕ್ ಆಲಿಯವರಿಗೆ ಅಧಿಕಾರವಹಿಸಿಕೊಟ್ಟರು, ಆದರೂ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕೊನೆಯ ಅಧ್ಯಕ್ಷ ನಿಜಲಿಂಗಪ್ಪನವರೇ ಎನ್ನಬಹುದು.

ದೇಶದ ಹಿರಿಯ ನಾಯಕ ನಿಜಲಿಂಗಪ್ಪನವರು ಭ್ರಷ್ಟಾಚಾರದ ವಿರುದ್ಧ ಒಂದು ಹೋರಾಟವನ್ನೇ ಆರಂಭಿಸ ಬೇಕೆಂದು ಹೇಳಿದ್ದಾರೆ. ಭ್ರಷ್ಟ ಮಂತ್ರಿ, ಶಾಸಕ, ಅಧಿಕಾರಿಯನ್ನು ಬಹಿಷ್ಕರಿಸಬೇಕೆಂದು; ಅವನನ್ನು ಸತ್ಯ ಹರಿಶ್ಚಂದ್ರ ಎಂದು ಹಾಡಿ ಹರಸುವ ತಪ್ಪು ಮಾಡಬಾರದೆಂದು ಜನರಿಗೆ ಕರೆ ಕೊಟ್ಟಿದ್ದಾರೆ.

ಮಹಾತ್ಮಾ ಗಾಂಧೀಜಿಯವರು ಜೀವಿಸಿರುವಾಗಲೇ ಗಾಂಧೀವಾದಿಗಳು ಅಷ್ಟಾಗಿ ಇಲ್ಲದಿದ್ದ ಕಾಲದಲ್ಲಿ ಮಹಾತ್ಮರು ಹೋದ ೩೪ ವರ್ಷಗಳಾದ ಮೇಲೆ ಗಾಂಧಿ ಅನುಯಾಯಿಗಳು, ಗಾಂಧೀವಾದಿಗಳು ಇದ್ದಾರೆಯೆ? ಎಂದು ವಿಚಾರಪರರು ಯೋಚಿಸುವ ಕಾಲ ಬಂದಿದೆ. ಇಂದು ಭಾರತದಲ್ಲಿ ಜೀವಂತ ವಾಗಿರುವ ರಾಜಕೀಯ ಧುರೀಣರಲ್ಲಿ ಗಾಂಧೀವಾದಿಯಾಗಿ ಗಾಂಧೀ ಅನುಯಾಯಿಯಾಗಿ ಯಾರಾದರೂ ಇದ್ದಾರೆ-ಎಂದರೊ ಅವರೇ ನಿಜಲಿಂಗಪ್ಪನವರು ಎಂದು ಧಾರಾಳವಾಗಿ ಹೇಳಬಹುದು.

ನಿಜಲಿಂಗಪ್ಪನವರು ರಾಷ್ಟ್ರಮಟ್ಟದಲ್ಲಿ ಆಗಿಹೋದ ಮತ್ತು ಈಗಿರುವ ಎಲ್ಲಾ ನಾಯಕ ಶ್ರೇಷ್ಠರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಅಂತೆಯೇ ಭಾರತದ ಹಿರಿಯ ಪ್ರಾಮಾಣಿಕ ಮುತ್ಸದ್ದಿ ಯಾಗಿದ್ದಾರೆ.

ನಿಜಲಿಂಗಪ್ಪನವರಂಥ ಚಾರಿತ್ಯ ಶುದ್ಧಿಯ ಜನರು ಭಾರತದಲ್ಲಿ ಇಂದು ಆಚಾರ್ಯ ಕೃಪಲಾನಿಯವರನ್ನು ಬಿಟ್ಟರೆ ಬೇರೆ ಇನ್ನೊಬ್ಬರಿಲ್ಲ. ಉತ್ತರದಲ್ಲಿ ಕೃಪಲಾನಿ ದಕ್ಷಿಣದಲ್ಲಿ ನಿಜಲಿಂಗಪ್ಪ ದೇಶದ ಕೊನೆಯ ಗಾಂಧಿವಾದಿಗಳೆನ್ನಬಹುದು.

ನಿಜಲಿಂಗಪ್ಪನವರು ನಿರರ್ಗಳವಾಗಿ ಮಾತನಾಡಬಲ್ಲರು. ಕನ್ನಡ ಸೊಬಗನ್ನು ಸವಿಯ ಬೇಕೆನ್ನುವವರು ಅವರ ಮಾತನ್ನು ಕೇಳಬೇಕು. ಅವರು ಯಾವಾಗಲೂ ಜನರೊಂದಿಗೆ ಇರುತ್ತಾರೆ. ಜನರ ಮಧ್ಯೆ ಇರುತ್ತಾರೆ. ಜನರನ್ನು ತಿಳಿದು ಜನರಿಂದ ತಿಳಿಯುವುದೇ ಅವರ ನಿತ್ಯದ ಕಾರ್ಯವೆನ್ನಬಹುದು. ಒಂಟಿಯಾಗಿರುವುದು ಕಡಿಮೆ. ಒಂದು ಪಕ್ಷ ಇದ್ದರೂ ಪುಸ್ತಕಗಳು ಇರಲೇಬೇಕು. ಅವರಿಗೆ ಓದುವುದು ಜೀವನದ ಒಂದು ಭಾಗವೆನಿಸಿದೆ. ರಾಷ್ಟ್ರ ಹಾಗೂ ನಾಡನಿರ್ಮಾಣ ಕಾಲದಲ್ಲಿ ಹಗಲಿರುಳೂ ದುಡಿದವರಾಗಿದ್ದಾರೆ. ಭಾರತಮಾತೆ, ಕನ್ನಡ ರಾಜೇಶ್ವರಿ ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕರುಣಿಸಲೆಂದು ಕನ್ನಡ ಜನಕೋಟಿ ಪ್ರಾರ್ಥಿಸುತ್ತದೆ. ಅಂತೆಯೇ ಶತಾಯುಷಿಗಳಾಗಿ ಬಾಳಲೆಂದು ಕನ್ನಡಿಗರೆಲ್ಲರ ಬಯಕೆ. ಕನ್ನಡಿಗರೆಲ್ಲರೂ ಅವರ ಪಾಲಿನ ಕರ್ತವ್ಯವನ್ನು ಮಾಡಿ ಸಹಕರಿಸುವುದರ ಮೂಲಕ ನಾಡಿನ ಭಾಗ್ಯೋದಯಕ್ಕಾಗಿ ಅವರೊಂದಿಗೆ ಭಾಗಿಯಾಗಿ ಶ್ರಮಿಸೋಣ, ಕರ್ನಾಟಕದ ನಿಜಲಿಂಗಪ್ಪನವರ ವ್ಯಕ್ತಿತ್ವ ವಿಶ್ವವ್ಯಾಪ್ತಿ ಯಾಗಲೆಂದು ಹಾರೈಸೋಣ.



# ನಗುಮೊಗದ ಚಿಲುಮೆ

**ಕೋ. ಚೆನ್ನಬಸಪ್ಪ**

"ನಿಜಲಿಂಗಪ್ಪನವರು ಈಚಲುಮರ ಕಡಿದು ಜೈಲಿಗೆ ಹೋದ್ರಂತೆ."

"ಅನ್ಯಾಯವಾಗಿ ಕೆಟ್ಟು ಹೋದ್ರು."

"ಅವರು ಮುಂದಕ್ಕೆ ಬರೋದ್ನ ನೋಡಿ ಸಹಿಸಲಾರದೆ ಈ ಸತ್ಯಾಗ್ರಹದ ಕುಣಿಗೆ ದಬ್ಬಿದರು."

"ನೋಡುವವರಿಗೆ ನಗೆಪಾಟ್ಲು ಮಾಡಿಕೊಂಡು, ವಕಾಲತ್ತು ಕೆಡಿಸಿಕೊಂಡು, ಮನೆ ಹಾಳುಮಾಡಿಕೊಂಡ್ರು."

-ಹೀಗೆ ನಮ್ಮ ಬಂಧು-ಬಾಂಧವರು ಕಟ್ಟೆಯ ಮೇಲೆ ಕುಳಿತುಕೊಂಡು, ರಾತ್ರಿ ಊಟವಾದ ಮೇಲೆ ಮಾತನಾಡಿ ಕೊಳ್ಳುತ್ತಿದ್ದರು. ಹತ್ತು ಹದಿನೈದು ವರ್ಷದ ಹುಡುಗರಾದ ನಾವು ಆ ಹಿರಿಯ ಕಿರಿಯರಾಡುವ ಮಾತುಗಳನ್ನು ಏನೋ ಆಗಬಾರದ ವಿಪತ್ತು ಯಾರಿಗೋ ಆಗಿದೆ ಎಂದು ಕಣ್ಣರಳಿಸಿ, ಕಿವಿಯರಳಿಸಿ, ಕೇಳಿ ಭಯಗ್ರಸ್ತರಾಗುತ್ತಿದ್ದೆವು.

ಹೀಗೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ ತಾಲ್ಲೂಕುಗಳಲ್ಲಿ, ಚಿತ್ರದುರ್ಗ ಜಿಲ್ಲೆಯಲ್ಲಿ ಜನರು - ಅದರಲ್ಲೂ ಅವರ ಕಕ್ಷಿಗಾರರಾದ ಬಹು ಜನರು ಮಾತನಾಡಿಕೊಳ್ಳುತ್ತಿದ್ದಾಗ ಪ್ರಥಮ ಬಾರಿಗೆ ಶ್ರೀ ನಿಜಲಿಂಗಪ್ಪನವರ ಹೆಸರು ನನ್ನ ಕಿವಿಯ ಮೇಲೆ ಬಿತ್ತು. ಸತ್ಯಾಗ್ರಹ ಎಂಬ ಮಾತು ಕಿವಿಯ ಮೇಲೆ ಬಿದ್ದದ್ದೂ ಅದೇ ಮೊದಲ ಬಾರಿ.

ಅವರ ಹೆಸರನ್ನು ಕೇಳಿದ್ದರೂ ೧೯೪೩ನೆಯ ಇಸ್ವಿಯವರೆಗೆ ಅವರನ್ನು ನಾನು ನೋಡಿಯೇ ಇರಲಿಲ್ಲ. ಆ ವರ್ಷ ನನ್ನ ಮದುವೆಗೆ ಅವರು ಬಂದಾಗಲೇ ಮೊಳಕಾಲ್ಮುರುವಿನಲ್ಲಿ ಮೊದಲ ಬಾರಿಗೆ ಕಂಡದ್ದು. ನಾಲ್ಕು ಸಾಂಪ್ರದಾಯಿಕ

ಮಾತುಗಳನ್ನು ಆಡಿದ್ದೂ ಆಗಲೇ. ಆದರೆ ಆ ಪರಿಚಯ, ಆ ಮಾತು ಕೇವಲ ಮೇಲೆ ಮೇಲೆ ಆದದ್ದು ಮಾತ್ರ.

ಆಮೇಲೆ ೧೯೪೫-೪೬ರಲ್ಲಿ ಕರ್ನಾಟಕ ಏಕೀಕರಣ ಸಮ್ಮೇಳನ ಮತ್ತು ತದನಂತರ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಭೆಗಳಲ್ಲಿ ನಾನವರನ್ನು ಅನೇಕ ಸಲ ನೋಡುವ, ಅವರೊಡನೆ ಮಾತನಾಡುವ, ಅವರೊಡನೆ ಕೂಡಿ ಕೆಲಸ ಮಾಡುವ, ಕೆಲವು ಸಾರಿ ವಿರೋಧಿಸುವ ಕಟುವಾಗಿ ಪತ್ರಿಕೆಯಲ್ಲಿ ಟೀಕಿಸುವ ಸಂದರ್ಭಗಳು ಲೆಕ್ಕವಿಲ್ಲದಷ್ಟು. ಅವರು ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದಾರೆ ಅವರೊಡನೆ ಅದವಾನಿ, ಆಲೂರು, ರಾಯದುರ್ಗ ತಾಲ್ಲೂಕುಗಳಲ್ಲಿ ಸುತ್ತಾಡಿ ಕರ್ನಾಟಕ ಏಕೀಕರಣಕ್ಕಾಗಿ ಕೆಲಸ ಮಾಡಿದೆ. ೧೯೫೧ರಲ್ಲಿ ಕೆ.ಪಿ.ಸಿ.ಸಿ.ಗೆ ನಾನು ರಾಜೀನಾಮೆ ಕೊಟ್ಟು ಅವರನ್ನು ಬಹಿರಂಗವಾಗಿ ವಿರೋಧಿಸಿದೆ, ಕಟುವಾಗಿ ಟೀಕಿಸಿ ಬರೆದೆ ; ಮಾತನಾಡಿದೆ.

ಇಷ್ಟೆಲ್ಲ ಬದಲಾವಣೆಗಳಾದರೂ ಅವರು ನನ್ನ ಬಗ್ಗೆ ಇಟ್ಟುಕೊಂಡ ಪ್ರೀತಿ, ವಿಶ್ವಾಸ ಮಾತ್ರ ಒಂದೇ ಬಗೆಯಾಗಿ ಈ ಇಪ್ಪತ್ತೇಳು ವರ್ಷ ಮುಂದುವರಿದಿದೆ.

೧೯೪೬ರಿಂದ ೧೯೫೩ರವರೆಗೆ ಪಾಟೀಲ ಪುಟ್ಟಪ್ಪ ಮತ್ತು ನಾನು ಶ್ರೀ ನಿಜಲಿಂಗಪ್ಪನವರನ್ನು ಪತ್ರಿಕೆಗಳಲ್ಲಿ ಬಹಿರಂಗ ವೇದಿಕೆಗಳ ಮೇಲೆ-ನಮಗೆ ಆಗ ಸಹಜವಾಗಿದ್ದ ಹರೆಯದ ಕುರುಡು ಹುಮ್ಮಸ್ಸಿನಿಂದ-ಖಂಡಿಸಿದೆವು. ಅವರ ಬಗ್ಗೆ ಬರೆದ, ಆಡಿದ ಕಟು ಮಾತುಗಳನ್ನು ಈಗ ನೆನಸಿಕೊಂಡರೆ, ಮತ್ತೆ ಓದಿದರೆ ದಿಗಿಲಾಗುತ್ತದೆ. ನಮ್ಮನ್ನು ರಾಹು-ಕೇತುಗಳೆಂದು ಹುಬ್ಬಳ್ಳಿಯ ಕೆಲವು ಮುಖಂಡರು ಮೂದಲಿಸಿ, ಕೆಕ್ಕರಿಸಿ ನೋಡುತ್ತಿದ್ದರು. ಆ ಗ್ರಹಗಳಂತೆ ನಾವು ಅವರನ್ನು ಬೆನ್ನು ಹತ್ತಿ ಕಾಡಿದೆವು.

ಆದರೂ ಅವರಿಗೆ ನಮ್ಮ ಮೇಲೆ ಮುನಿಸು ಬರಲಿಲ್ಲ. ಬೇಸರವನ್ನು ತೋರಲಿಲ್ಲ. ತದ್ವಿರುದ್ಧವಾಗಿ, ಯಾವುದೆ ಬಹಿರಂಗ ಸಭೆಯಲ್ಲಿ ಆಗಲಿ, ನಮ್ಮ ಉಗ್ರ ನೀತಿಯನ್ನು ಕುರಿತು ಪ್ರಸ್ತಾಪಿಸುವಾಗ:

"ಕೋಚೆ ಮತ್ತು ಪಾಪು ನನ್ನ ಈ ಧೋರಣೆಯನ್ನು ಒಪ್ಪುವುದಿಲ್ಲ. ಅವರು ಏಕೀಕರಣ ಕೂಡಲೇ ಆಗಬೇಕೆನ್ನುತ್ತಾರೆ, ಮಹಾರಾಜರನ್ನೆಲ್ಲ ಮೂಲೆಗೆ ತಳ್ಳಿ ಮೈಸೂರು ಮತ್ತು ಹೈದರಾಬಾದ್ ಕರ್ನಾಟಕ ಒಂದಾಗಬೇಕೆನ್ನುತ್ತಾರೆ. ನನಗೂ ಏಕೀಕರಣಬೇಕು. ಆದರೆ ಅವರಷ್ಟು ಹುರುಪು ನೆನಗಿಲ್ಲ. ನನಗೆ ವಯಸ್ಸಾಗಿದೆ.." ಎಂದು ದೊಡ್ಡದಾಗಿ ನಗುತ್ತಿದ್ದರು. ಆ ನಗುವಿನಲ್ಲಿ ನಾವು ಸೇರುತ್ತಿದ್ದೆವು.

ಶ್ರೀ ನಿಜಲಿಂಗಪ್ಪನವರಿಗೆ ಈರ್ಷ್ಯೆ, ಅಸೂಯೆ, ಮತ್ಸರ ಇರುವುದು ನನಗಂತೂ ಕಂಡು ಬಂದಿಲ್ಲ. ಅದು ನನ್ನ ಅನುಭವ ತದ್ವಿರುದ್ಧವಾಗಿ ಅವರು ಯಾರು ಯಾರಿಗೆ ಉಪಕಾರವನ್ನು ಮಾಡಿದರೋ, ಅವರು ಅವರಿಗೆ ಪ್ರತ್ಯುಪಕಾರವನ್ನು ಮಾಡಿದ್ದು ಕಡಿಮೆ. ಆದರೂ ಅಂಥವರ ಬಗೆಗೂ ಅವರಿಗೆ ಆಕ್ರೋಶವಿಲ್ಲ ಎಂಬುದು ನನ್ನ ಅನುಭವ. ಇತರರ ಅನುಭವ ಇದಕ್ಕೆ ತದ್ವಿರುದ್ಧವಾಗಿರಬಹುದು. ಅದು ಅವರ ಸ್ವಾನುಭವ. ತಪ್ಪು ಎಂದು ಹೇಳಲು ನನಗೇನು ಅಧಿಕಾರ? ಆದರೆ ನನ್ನ ಅನುಭವ ಮಾತ್ರ ಸತ್ಯ.

ನಾನು, ನನ್ನಂಥವರು, ಅವರನ್ನು ಹಾಗೆ ಕಡು ವಿರೋಧಿಸಿದರೂ ನಮ್ಮನ್ನೇಕೆ ಅವರು

ಪ್ರೀತಿಸುತ್ತಿದ್ದರು? ನಿಃಸ್ವಾರ್ಥ ಪ್ರಾಮಾಣಿಕ ಯುವಕರ ಬಗ್ಗೆ ಅವರಿಗೆ ಅಪಾರ ವಾತ್ಸಲ್ಯ. ಆ ಯುವಕರು ಅವರನ್ನು ಎಷ್ಟೇ ಕಟುವಾಗಿ ಟೀಕಿಸಿದರೂ, ದೇಶಕ್ಕೆ ಅವರಿಂದ ಒಳ್ಳೆಯದಾಗುತ್ತದೆ ಎಂಬ ವಿಶ್ವಾಸ ಅವರಲ್ಲಿದೆ. ಆ ವಾತ್ಸಲ್ಯ, ಆ ವಿಶ್ವಾಸವೇ ನಮ್ಮ ದುಡುಕು, ಸಿಡುಕು, ಕಟು ವಾತ್ಸಲ್ಯಗಳನ್ನೆಲ್ಲ ನುಂಗಿಕೊಂಡು ಹೊಟ್ಟೆಯಲ್ಲಿಟ್ಟುಕೊಳ್ಳುವಂತೆ ಮಾಡಿದೆ ಎಂದು ನನಗನಿಸುತ್ತದೆ. ಯುವಕರ ಬಗ್ಗೆ ಇರುವ ಆ ವಿಶ್ವಾಸವೇ ಇಂದಿನ ಯುವಕ ಮುಖ್ಯಮಂತ್ರಿಗಳ ಅಭ್ಯುದಯಕ್ಕೆ ಕಾರಣ.

## ಏಕೀಕರಣದಲ್ಲಿ ಕಡುನಿಷ್ಠೆ

೧೯೪೮-೪೯ರಲ್ಲಿ ಅವರು ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದಾಗ ಆದವಾನಿಗೆ ಏಕೀಕರಣ ಪ್ರಚಾರಾರ್ಥವಾಗಿ ಹೋಗಿದ್ದೆವು. ಅಲ್ಲೊಂದು ಬಹಿರಂಗ ಸಭೆಯಲ್ಲಿ ಆದವಾನಿ ಕರ್ನಾಟಕಕ್ಕೆ ಸೇರಬೇಕೆಂದು ಅವರು ಪ್ರತಿಪಾದಿಸುತ್ತಿದ್ದರು. ಸಭೆಯಲ್ಲಿದ್ದ ಆದವಾನಿ ತಾಲ್ಲೂಕು ಕಾಂಗ್ರೆಸ್ ಸಮಿತಿ ಸದಸ್ಯರೊಬ್ಬರು-(ಹತ್ತಿ ಬೆಳಗಲ್ಲು ಹನುಮಂತರಾಯರು) ನಡುವೆಯೇ ಎದ್ದು ನಿಂತು:

"ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ಎ.ಪಿ.ಸಿ.ಸಿ.ಪ್ರದೇಶಕ್ಕೆ ಬಂದು ಭಾಷಣ ಮಾಡಬಾರದು. ಶಿಸ್ತು ಭಂಗ..." ಇತ್ಯಾದಿಯಾಗಿ ಕಂಡಾಬಟ್ಟೆ ರೇಗಿದರು. ಸಭೆ, ಏಕೀಕರಣ ಸಮ್ಮೇಳನದ ಆಶ್ರಯದಲ್ಲಿ ಸೇರಿತ್ತು. ಸಭಿಕರನೇಕರು ಕನ್ನಡಿಗರು. ಆಕ್ಷೇಪಣೆ ಎತ್ತಿದವರ ಮನೆ ಮಾತು ಕನ್ನಡವು! ನೆರೆದ ಸಭಿಕರಿಗೆ ತಾಳ್ಮೆ ತಪ್ಪಿ, ಆಕ್ಷೇಪಣೆ ಎತ್ತಿದವರ ವಿರುದ್ಧ ಕೂಗಾಡಿದರು. ಆಗ ಶ್ರೀ ನಿಜಲಿಂಗಪ್ಪನವರು ಉದ್ರಿಕ್ತ ಜನರನ್ನು ಉದ್ದೇಶಿಸಿ:

"ದಯವಿಟ್ಟು ಉದ್ವಿಗ್ನರಾಗಬೇಡಿ. ಅವರ ಆಕ್ಷೇಪಣೆಯಲ್ಲೂ ತಾತ್ವಿಕ ಸತ್ಯಾಂಶವಿದೆ. ಅವರು ನನ್ನೊಡನೆ ಮಾತ ನಾಡಿದರೆ, ನಾನು ಇಲ್ಲಿ ಮಾತನಾಡುತ್ತಿರುವುದು. ಶಿಸ್ತಿಗೆ ವಿರುದ್ಧವಲ್ಲ ಎಂಬುದನ್ನು ಅವರಿಗೆ ಮನವರಿಕೆ ಮಾಡುತ್ತೇನೆ" ಎಂದು ಗಟ್ಟಿಯಾಗಿ ಹೇಳಿದರು.

ಅವರ ಈ ಮಾತಿನಿಂದ ಕನ್ನಡಿಗರಿಗೆ ಸಮಾಧಾನ ವಾಗದಿದ್ದರೂ ಆಕ್ಷೇಪಣೆ ಎತ್ತಿದವರಿಗೆ ಮಾತ್ರ ಸಮಾಧಾನ ವಾಯಿತು. ನಮಗೆ ಬೇಕಾದದ್ದೂ ಅದೇ. ಅಂದಿನ ಸಭೆ ಯಶಸ್ವಿಯಾಗಿ ಮುಕ್ತಾಯವಾಯಿತು. ಸಭೆ ಮುಗಿದ ಮೇಲೆ ಆ ಆಕ್ಷೇಪಣಾಕರರೇ ವೇದಿಕೆಯ ಮೇಲೆ ಬಂದು ಶ್ರೀ ನಿಜಲಿಂಗಪ್ಪನವರ ತಾಳ್ಮೆಗಾಗಿ ಅವರನ್ನು ಅಭಿನಂದಿಸಿದರು.

ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತ ರಚನೆಯ ಬಗ್ಗೆ ಪಟ್ಟಾಗಿ ಹಿಡಿದು, ಯಾವ ರಾಜಿಗೂ ಒಪ್ಪದೆ ಹೋರಾಡಿದವರಲ್ಲಿ ಇದೇ ದೇಶದಲ್ಲಿ ಶ್ರೀ ನಿಜಲಿಂಗಪ್ಪನವರು ಅಗ್ರಗಣ್ಯರು ಎನ್ನಬಹುದು. ಅವರಂತೆಯೇ ಸ್ವಾತಂತ್ರ್ಯ ಪೂರ್ವದಲ್ಲಿ ಭಾಷಾವಾರು ಪ್ರಾಂತ ರಚನೆಗಾಗಿ ಹೋರಾಡಿದವರು ಅನೇಕರು - ಆಂಧ್ರ ಕೇಸರಿ ಶ್ರೀ ಟಿ. ಪ್ರಕಾಶಂ ಸಹಿತ-ರಾಜ್ಯ ಸರ್ಕಾರಗಳಲ್ಲೋ, ಕೇಂದ್ರದಲ್ಲೋ ಮಂತ್ರಿಗಳಾಗಿ ಸೇರಿಕೊಂಡರು. ಕೆಲವರು ರಾಜ್ಯ ಪಾಲರೋ, ರಾಯಭಾರಿಗಳೋ ಆಗಿಹೋದರು. ಆದರೆ ಇವರು ಮಾತ್ರ ಏಕೀಕರಣವಾಗದೆ ಯಾವ ಅಧಿಕಾರವನ್ನೂ ಒಪ್ಪಿಕೊಳ್ಳಲಿಲ್ಲ. ಆಗ:

"ಕೇಂದ್ರದ ಮಂತ್ರಿ ಪದವಿಯೋ, ರಾಜ್ಯಪಾಲ ಪದವಿಯೋ ಸಿಕ್ಕರೆ ಎಸ್ಸೆನ್

ಸುಮ್ಮನಾಗುತ್ತಾರೆ. ಅಧಿಕಾರಕ್ಕಾಗಿ ಈ ಏಕೀಕರಣ ಚಳವಳಿ" ಎಂದು ಬಾಯಿಂದ ಆಡುವುದೂ ಅಲ್ಲದೆ, ಪತ್ರಿಕೆಯಲ್ಲಿ ಬರೆದು ಅವರ ಏಕೀಕರಣದ ನಿಷ್ಠೆಯ ಪ್ರಾಮಾಣಿಕತೆಯನ್ನು ಪ್ರಶ್ನಿಸಿದವರೂ ಉಂಟು.

ಅಂಥ ಮಾತು ಬಹಿರಂಗವಾಗಿ ಕೇಳಿ ಬಂದಾಗ ಒಮ್ಮೆ ನಾನು ದೆಹಲಿಯಲ್ಲಿದ್ದೆ. ಅವರ ಗಮನವನ್ನು ಈ ಟೀಕೆಯ ಕಡೆ ಸೆಳೆದೆ. ಆಗ ಅವರು ನನ್ನನ್ನು ತಮ್ಮ ಬಿಡಾರಕ್ಕೆ ಕರೆದೊಯ್ದು ಶ್ರೀ ನೆಹರೂ ತಮಗೆ ಬರೆದಿದ್ದ ಎರಡು ಕಾಗದ ತೋರಿಸಿದರು. ಒಂದು ಕಾಗದದಲ್ಲಿ ಎಸ್ಸೆನ್ ಅವರನ್ನು ಕೇಂದ್ರ ಮಂತ್ರಿ ಮಂಡಲಕ್ಕೆ ಆಹ್ವಾನಿಸಿದ್ದರು. ಇನ್ನೊಂದರಲ್ಲಿ ಉತ್ತರ ಭಾರತದ ಒಂದು ರಾಜ್ಯಕ್ಕೆ ರಾಜ್ಯ ಪಾಲರಾಗಿ ಹೋಗಲು ಆಹ್ವಾನಿಸಿದ್ದರು. ಅವೆರಡನ್ನೂ ಅವರು ತಿರಸ್ಕರಿಸಿ ಉತ್ತರ ಬರೆದಿದ್ದ ನಕಲುಗಳನ್ನು ತೋರಿಸಿದರು.

"ನನಗೆ ಅಧಿಕಾರವೇ ಗುರಿಯಾಗಿದ್ದರೆ ಅದೇನೂ ದೂರವಿಲ್ಲ. ಆದರೆ ಏಕೀಕರಣ ಆಗುವವರೆಗೆ ಯಾವ ಅಧಿಕಾರವನ್ನೂ ನಾನು ಒಪ್ಪಿಕೊಳ್ಳುವುದಿಲ್ಲ."

"ಮತ್ತೆ ಈ ಜನರ ನಾಲಗೆಗೆ, ಲೇಖನಿಗೆ ಉತ್ತರ ಯಾಕೆ ಕೊಡಬಾರದು? ಈ ಪತ್ರಗಳು ಅವರನ್ನು ಬಾಯಿ ಕಟ್ಟಿಸುತ್ತವೆ" ಎಂದೆ ನಾನು.

"ನಿಜ ಸಂಗತಿ ತಿಳಿಯದ ಜನ ಏನಾದರೂ ಆಡಿಕೊಂಡರೆ ಅದರಿಂದ ನನಗೇನೂ ವ್ಯಸನವಿಲ್ಲ. ಅದನ್ನೆಲ್ಲ ಕೇಳಿ ನನಗೆ ವ್ಯಥೆ, ವ್ಯಸನ ಆಗುವುದಿಲ್ಲ. ತಮಾಷೆ ಎನಿಸುತ್ತದೆ" ಎಂದು ಅವರಿಗೆ ಸಹಜವಾದ ನಗುಮೊಗದಿಂದ ಉತ್ತರ ಕೊಟ್ಟರು.

ಶ್ರೀ ನಿಜಲಿಂಗಪ್ಪನವರ ತತ್ವನಿಷ್ಠೆ ಅಂಥಾದ್ದು. ಒಂದು ತತ್ವವನ್ನು ಅನುಸರಿಸುವುದರಿಂದ ನಷ್ಟವಾಗಲಿ, ನಿಷ್ಠುರ ಬರಲಿ ಅದು ಅವರಿಗೆ ಲೆಕ್ಕವಿಲ್ಲ.

**ಸಾಹಿತ್ಯಪ್ರಿಯ**

೧೯೬೩ರಲ್ಲಿ ಮೊಳಕಾಲ್ಮುರುವಿನಿಂದ ಬೆಂಗಳೂರಿಗೆ ಅವರೊಡನೆ ಬರುತ್ತಿದ್ದೆ. ಅವರು ಕಾರಿನಲ್ಲಿ ಹಾಗೆಯೇ ಕುಳಿತೇ ನಿದ್ದೆ ಮಾಡುತ್ತಿದ್ದರು. ಅವರಿಗೆ ಎಚ್ಚರವಾದಾಗ :

"ಆಗಲೇ ತಳಕು ದಾಟಿ ಬಂದಿದ್ದೇವೆ" ಎಂದರು.

"ಹೌದು" ಎಂದೆ.

ಆಗ ಅವರು ತಳಕಿನ ವೆಂಕಣ್ಣಯ್ಯನವರ ಬಗ್ಗೆ ಸಹಜವಾಗಿಯೇ ಮಾತು ತೆಗೆದರು.

"ಅವರು ಘನ ವಿದ್ವಾಂಸರು. ದೊಡ್ಡ ಮನುಷ್ಯರು. ಅಂಥವರು ಬಹುಜನ ಹಿಂದೆಯೂ ಇರಲಿಲ್ಲ. ಈಗಲಂತೂ ಅತಿ ವಿರಳ. ಇಲ್ಲವೇ ಇಲ್ಲ ಎನ್ನಬಹುದು" ಎಂದರು.

"ಅಂಥವರು ಕೂಡ ನಮ್ಮ ಜನರ ಮನಸ್ಸಿನಿಂದ ಮರೆಯಾಗುತ್ತಿದ್ದಾರೆ. ಅವರ ಹೆಸರು ಕನ್ನಡ ಜನರಿಗೆ ಸದಾ ನೆನಪಿರುವಂತೆ ಏನಾದರೂ ಸ್ಮಾರಕ ಮಾಡಬೇಕು" ಎಂದು. ನಾನು. ತಳಕಿನಲ್ಲಿರುವ ಅವರ ಮನೆಯ ಹಾಳು ಜಾಗದಲ್ಲಿ ಒಂದು ಸಾರ್ವಜನಿಕ ವಾಚನಾಲಯವನ್ನಾದರು ಕಟ್ಟಿಸಬಹುದೆಂದು ನಾನು ಸೂಚಿಸಿದೆ.

"ನಿಜ. ಏನಾದರೂ ಮಾಡಬೇಕು. ಅವರನ್ನು ಮರೆತರೆ ಕನ್ನಡ ಜನರಿಗೆ ದೊಡ್ಡ ನಷ್ಟ" ಎಂದರವರು.

ಶ್ರೀ ವೆಂಕಣ್ಣಯ್ಯನವರ ಹುಟ್ಟಿದೂರು ಎಂಬುದರಿಂದ ಆ ಹಳ್ಳಿಯ ಬಗ್ಗೆ ಅವರಿಗೆ ಅಭಿಮಾನ. ತಳಕು ಗ್ರಾಮ ಮುಂದೆ ಹಾದು ಹೋದಾಗಲೆಲ್ಲ ವೆಂಕಣ್ಣಯ್ಯನವರನ್ನು ಸ್ಮರಿಸದೆ ಮುಂದೆ ಹೋಗುವುದಿಲ್ಲವೆಂದು ಕಾಣುತ್ತದೆ.

ಆಗ ನಮ್ಮ ಮಾತು ಕನ್ನಡ ಸಾಹಿತ್ಯದತ್ತ ಹೊರಳಿತು ಅವರ ರಾಜಕೀಯ ಮುಖವನ್ನೇ ಬಲ್ಲ ನನಗೆ ಅವರ ಕನ್ನಡ ಸಾಹಿತ್ಯವನ್ನು ತಕ್ಕಮಟ್ಟಿಗೆ ತಿಳಿದುಕೊಂಡಿದ್ದಾರೆ. ಎಂಬುದನ್ನು ತಿಳಿದು ಆಶ್ಚರ್ಯವಾಯಿತು. ಪಂಪ, ರನ್ನ, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಸರ್ವಜ್ಞ.... ಮುಂತಾದವರ ಹೆಸರು ಅವರ ಭಾಗಕ್ಕೆ ಬರೀ ಹೆಸರುಗಳಲ್ಲ. ಆಯಾ ಕವಿಗಳ ವಿಶಿಷ್ಟ ಗುರಿ ಏನೆಂಬುದನ್ನು ಅವರು ನಿರ್ದಿಷ್ಟವಾಗಿ ಬಲ್ಲರು. ಅವರ ಕಾವ್ಯಗುಣದ ತಿರುಳನ್ನೂ ತಿಳಿದಿದ್ದಾರೆ. ಆಗಾಗ ಸಂದರ್ಭ ಬಂದಾಗ ಆಯಾ ಕವಿಗಳ ಪ್ರಸಿದ್ಧ ವಾಕ್ಯಗಳನ್ನು ಉದ್ಧರಿಸುತ್ತಾರೆ. ಅವರ ಪೀಳಿಗೆಯವರಿಗೆ ಸಾಹಿತ್ಯಾಭ್ಯಾಸ ಅನಿವಾರ್ಯ ಸಂಸ್ಕಾರವಾಗಿತ್ತು. ಮಹಾರಾಜಾ ಕಾಲೇಜ್, ಸೆಂಟ್ರಲ್ ಕಾಲೇಜಿನಲ್ಲಿ ಓದಿದ ಎಲ್ಲರಿಗೂ-ಸ್ವಲ್ಪ ಹೆಚ್ಚು ಕಡಿಮೆ ಎಲ್ಲರಿಗೂ-ಈ ಸಾಹಿತ್ಯದ ಸಂಸ್ಕಾರದಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿರಲಿಲ್ಲ ಎಂದು ತೋರುತ್ತದೆ. ಅಂದು ಅವರಿಗಾದ ಆ ಸಂಸ್ಕಾರ ಇಂದಿಗೂ ಅವರನ್ನು ಬಿಟ್ಟಿಲ್ಲ. ಪ್ರಯಾಣ ಹೊರಡುವಾಗ ಒಂದು ಗುಂಪು ಪುಸ್ತಕಗಳನ್ನು ತಪ್ಪದೆ ಜೊತೆಗೆ ಒಯ್ಯುತ್ತಾರೆ ಕಾರಿನಲ್ಲಿ ಆಗಲಿ, ರೈಲಿನಲ್ಲಾಗಲಿ, ವಿಮಾನದಲ್ಲಿ ಆಗ ಓದುವುದು ಅವರ ಸ್ವಭಾವ. ಬಹುಮಟ್ಟಿಗೆ ರಾಜಕೀಯ ಆರ್ಥಿಕ ಗ್ರಂಥಗಳೇ ಹೆಚ್ಚು. ಕೆಲವು ಬಾರಿ ಕಾದಂಬರಿಗಳನ್ನು ಓದುತ್ತಾರೆ. ಕನ್ನಡ ಗ್ರಂಥಗಳನ್ನೂ ಆಗಾಗ ಓದುತ್ತಾರೆ. ಶ್ರೀ ಕುವೆಂಪು ಅವರ ಗ್ರಂಥಗಳನ್ನು ತಕ್ಕಮಟ್ಟಿಗೆ ಅಭ್ಯಾಸ ಮಾಡಿದ್ದಾರೆ. 'ಶ್ರೀರಾಮಾಯಣದರ್ಶನ'ವನ್ನು ಸ್ವಲ್ಪ ಓದಿಕೊಂಡಿದ್ದಾರೆ. ಶ್ರೀ ಕುವೆಂಪು ಅವರ ಬಗ್ಗೆ ಅಪಾರ ಅಭಿಮಾನ. ಅವರ ಮಾತಿಗೆ, ಅಭಿಪ್ರಾಯಕ್ಕೆ ತುಂಬ ಬೆಲೆ ಕೊಡುತ್ತಾರೆ. ೧೯೬೨ರಲ್ಲಿ ಒಮ್ಮೆ ನಾನು ಶಿವಮೊಗ್ಗೆಗೆ ಹೋಗಿದ್ದೆ. ಆಗ ಶ್ರೀ ಕುವೆಂಪು ಕೂಡ ಅಲ್ಲಿದ್ದರು. ನನ್ನೊಡನೆ ಮಾತನಾಡುತ್ತಾ ಶ್ರೀ ಕುವೆಂಪು "ಕರ್ನಾಟಕ ಎಂಬ ಹೆಸರು ಈ ರಾಜ್ಯಕ್ಕೆ ಆಗಬೇಕು. ಈ ರಾಜ್ಯದ ರಾಜ್ಯಪಾಲರು ಸಾಧಾರಣ ಪ್ರಜೆಯೊಬ್ಬರಾಗಬೇಕು. ಎಲ್ಲಿಯವರೆಗೆ ಈ ಅರಸೊತ್ತಿಗೆಯ ಪ್ರಭಾವ ನಮ್ಮ ಜನರ ಮನಸ್ಸಿನಿಂದ ಮರೆಯಲಾಗುವುದಿಲ್ಲವೋ ಅಲ್ಲಿಯವರೆಗೆ ಪ್ರಜಾಪ್ರಭುತ್ವ ಬೇರೂರುವುದಿಲ್ಲ...." ಇತ್ಯಾದಿ ಹೇಳಿದರು.

"ಈ ಮಾತು ನಿಜಲಿಂಗಪ್ಪನವರ ಕಿವಿಯ ಮೇಲೆ ಬಿದ್ದರೆ ಹೆಚ್ಚು ಪ್ರಯೋಜನವಾಗಬಹುದು. ಅವರು ಇಲ್ಲಿಗೆ ಬಂದಿದ್ದಾರೆ. ನಿಮಗೆ ಅನುಕೂಲವಿದ್ದರೆ ಅವರಿಗೆ ತಿಳಿಸಿ ನಿಮ್ಮಿಬ್ಬರ ಭೇಟಿ ಏರ್ಪಡಿಸಬಹುದು" ಎಂದೆ.

"ಹೌದೆ? ಅವರಲ್ಲಿದ್ದರೆ ಅಲ್ಲಿಗೇ ಹೋಗಿ ಹೇಳಿ ಬರುತ್ತೇನೆ, ಕೇಳಿ ನೋಡಿ" ಎಂದರು.

ಅಂದು ಶ್ರೀ ನಿಜಲಿಂಗಪ್ಪನವರನ್ನು ಕಂಡು ಶ್ರೀ ಕುವೆಂಪು ಅವರ ಅಪೇಕ್ಷೆಯನ್ನು ತಿಳಿಸಿದೆ. ಅದಕ್ಕೆ ಅವರು :

"ನಾನೇ ಹೋಗಿ ನೋಡುತ್ತೇನೆ. ಕವಿಗಳಿದ್ದಲ್ಲಿಗೆ ರಾಜಕಾರಣಿ ಹೋಗಬೇಕು" ಎಂದರು. ಆ ತರುವಾಯ ಶಿವಮೊಗ್ಗೆಯಲ್ಲಿ ಆಗ ಡಿ.ಸಿ. ಆಗಿದ್ದ ಶ್ರೀ ನಾಗೇಗೌಡರು ಇಬ್ಬರಿಗೂ ಅನುಕೂಲವಾದ ಸಮಯವನ್ನು ನೋಡಿ ಭೇಟಿ ಏರ್ಪಡಿಸಿದರು. ಎರಡು ಗಂಟೆ ಕಾಲ ಇಬ್ಬರೂ ಮಾತನಾಡಿದರು. ಆ ಭೇಟಿಯ ನಂತರ ನಂದಿಬೆಟ್ಟಕ್ಕೆ ಬಂದು ಶ್ರೀ ನಿಜಲಿಂಗಪ್ಪನವರು ತಾ: ೧೭-೬-೬೨ರಂದು ನನಗೊಂದು ಪತ್ರ ಬರೆದು, "ಡಾ. ಪುಟ್ಟಪ್ಪನವರನ್ನು ನೋಡಿದೆ. ಅನೇಕ ವಿಚಾರಗಳ ಬಗ್ಗೆ ಮಾತನಾಡಿದೆವು. ತಮ್ಮ ಸೂಚನೆಗಳೂ ಇವೆ. ಸಾಧ್ಯವಾದಷ್ಟು ಮಾಡೋಣ" ಎಂದು ತಿಳಿಸಿದರು. ಮುಂದೆ ಮೈಸೂರು ರಾಜ್ಯಪಾಲರನ್ನು ನೇಮಿಸುವ ಕಾಲ ಬಂದಾಗ ಶ್ರೀ ನಿಜಲಿಂಗಪ್ಪನವರು. ಶ್ರೀ ವಿ.ವಿ.ಗಿರಿ ಅವರನ್ನು ಇಲ್ಲಿಗೆ ತಂದರು. ಆಗ ಶ್ರೀ ಕುವೆಂಪು ಒಂದು ಕವಿತೆಯನ್ನು ಬರೆದು ಈ ನೇಮಕವನ್ನು ಸ್ವಾಗತಿಸಿದರು, ಈ ಘಟನಾ ಪರಂಪರೆಯನ್ನು ನೆನೆದರೆ ಕವಿಗಳ ಮಾತಿನಲ್ಲಿ ಇವರಿಗೆ ಎಷ್ಟು ಗೌರವ ಎಂಬುದು ವ್ಯಕ್ತವಾಗುತ್ತದೆ.

ಶ್ರೀ ನಿಜಲಿಂಗಪ್ಪನವರು ಮುಖ್ಯ ಮಂತ್ರಿ ಆಗಿದ್ದಾಗಲೇ ಶ್ರೀ ಕುವೆಂಪು ಅವರಿಗೆ 'ರಾಷ್ಟ್ರಕವಿ' ಪ್ರಶಸ್ತಿಯನ್ನೂ ಮಾಸಿಕ ಗೌರವಧನವನ್ನೂ ಕೊಟ್ಟು ಗೌರವಿಸಿದರು. ಶ್ರೀ ನಿಜಲಿಂಗಪ್ಪನವರು ರಾಜಕಾರಣಿ ಆಗಿ ನಮ್ಮ ಇತಿಹಾಸದಲ್ಲಿ ಯಾವ ಸ್ಥಾನವನ್ನು ಆಕ್ರಮಿಸುವರೆಂಬ ಬಗ್ಗೆ ಭಿನ್ನಾಭಿಪ್ರಾಯ ಇರಬಹುದು. ಆದರೆ ಅವರು ಮಹಾಕವಿಯೊಬ್ಬರನ್ನು ಸನ್ಮಾನಿಸಿದ ಮುಖ್ಯಮಂತ್ರಿ ಎಂದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಸ್ಥಾನವನ್ನು ಪಡೆಯುವುದರಲ್ಲಿ ಬಹುಶಃ ಭಿನ್ನಾಭಿಪ್ರಾಯ ಇರಲಾರದು. ಅದಕ್ಕೆ ಮುಖ್ಯ ಕಾರಣ ಅವರು ಸಹೃದಯರು ಎಂಬುದೇ. ಕವಿಗಳ ಯೋಗ್ಯತೆ ಏನೆಂಬುದನ್ನು ಅವರು ಬಲ್ಲರು. ಆದ್ದರಿಂದಲೇ ಅವರ ಅಧಿಕಾರಾವಧಿಯಲ್ಲಿ ಕವಿ-ಕಾವ್ಯ ಸನ್ಮಾನ ಹೆಚ್ಚಾಗಿ ನಡೆಯಿತು. ಅದೇ ಪರಂಪರೆ ಮುಂದುವರೆದಿದೆ.

## ಅಗಾಧ ಜ್ಞಾಪಕಶಕ್ತಿ

ಶ್ರೀ ನಿಜಲಿಂಗಪ್ಪನವರು ಕರ್ನಾಟಕದ ಒಂದೊಂದು ಗ್ರಾಮವನ್ನೂ ನೋಡಿದ್ದಾರೆ. ಜನರನ್ನು ಮಾತನಾಡಿಸಿದ್ದಾರೆ. ದೇಶದ ವಿವಿಧ ಪ್ರಾಂತದ ಜನರನ್ನು ಬಲ್ಲರು. ಆದರೂ ಆ ಗ್ರಾಮಗಳ, ಆ ಜನರ ಹೆಸರು, ಸಮಸ್ಯೆಗಳನ್ನು ಸ್ಪಷ್ಟವಾಗಿ ನೆನಪಿಟ್ಟುಕೊಂಡಿರುತ್ತಾರೆ. ಆಡಿದ ಮಾತುಗಳು, ಕೂಡಿದ ಸಂದರ್ಭ ಮರೆತು ಹೋದರೂ ಅವರ ಹೆಸರು, ಅವರ ವಿಶಿಷ್ಟ ಸಮಸ್ಯೆಗಳನ್ನು ಮಾತ್ರ ಮರೆಯುವುದಿಲ್ಲ. ಕಂಡೊಡನೆಯೆ:

"ಹೋ! ಹೇಗಿದ್ದೀರಿ, ಪಾಟೀಲರೇ... ಕುಲಕರ್ಣಿ ಅವರೇ.... ದೇಸಾಯಿ ಅವರೇ..... ಗೌಡರೇ.... ಸಿದ್ದಪ್ಪ ನವರೇ....ಭದ್ರಪ್ಪನವರೇ... ರಂಗರಾಯರೇ... ಶೇಷಾಚಾರ್ಯರೇ..." ಇತ್ಯಾದಿ... ಇತ್ಯಾದಿ ಸಾವಿರ ಜನ ಸೇರಿದ ದಸರಾ ದೊಂಬಿ ಯಲ್ಲಾದರೂ ಜನರ ಹೆಸರನ್ನು ಹಿಡಿದು ಕರೆದು ಗುರ್ತಿಸುತ್ತಾರೆ!

ಮತ್ತೆ ಯೋಗಕ್ಷೇಮದ ವಿಚಾರ ಬಂದರೂ ಅಷ್ಟೇ. ಬಂದ ಆ ಮಿತ್ರರ ಬಂಧು-ಬಳಗದವರು ಗೊತ್ತಿದ್ದರೆ ತಪ್ಪದೆ: "ಮನೆಯಕಡೆ ಎಲ್ಲ ಕ್ಷೇಮವೇ?" ಎಂದು ಕೇಳುತ್ತಾರೆ.

ಅವರು ಹೀಗೆ ಬಂದವರ, ಅವರ ಮನೆಯವರ ಯೋಗ ಕ್ಷೇಮ ವಿಚಾರಿಸುವುದು ಕೇವಲ

ಯಾಂತ್ರಿಕವೂ ಅಲ್ಲ; ಸಾಂಪ್ರದಾಯಕವೂ ಅಲ್ಲ. ಬರೀ ಬಾಯಿಮಾತಿನ ಕೃತಕ ಪದ್ಧತಿಯಲ್ಲ-ಎಂಬುದು ನನ್ನ ನಂಬುಗೆ. ಏಕೆಂದರೆ ಅವರ ಧ್ವನಿಯಲ್ಲಿ, ಮುಖದಲ್ಲಿ ಕೃತಕತೆಯ ಸುಳಿವೂ ಕಂಡು ಬರದು. ಮಾತು ಹೇಳದ ಕತೆಯನ್ನು ಮನುಷ್ಯನ ಮುಖ ಹೇಳುತ್ತದೆ.

**ನ್ಯಾಯಾಂಗದಲ್ಲಿ ಅಪಾರ ನಂಬುಗೆ**

ಅವರು ವೃತ್ತಿಯಿಂದ ವಕೀಲರು. ಪ್ರವೃತ್ತಿಯಿಂದ ರಾಜಕಾರಣಿ. ವಕೀಲ ವೃತ್ತಿಯ ಬಗ್ಗೆ ಅವರಿಗೆ ಅಪಾರ ಒಲವು; ಗೌರವ. ಅವರು ವಕಾಲತ್ತು ಮಾಡುತ್ತಿದ್ದ ದಿನಗಳನ್ನು ನೆನೆದು ನಮ್ಮ ಹಳ್ಳಿಯ ಕಡೆ ಜನರು :

"ಅವರು ಸುಳ್ಳು ಕೇಸು ಹಿಡಿಯೋದಿಲ್ಲವಂತೆ" ಎಂದು ಮಾತನಾಡಿಕೊಳ್ಳುತ್ತಿದ್ದರು.

"ಅವರು ಕೋರ್ಟಿನಲ್ಲಿ ಹೇಳುವ ಮಾತಿಗೆ ತುಂಬ ಗೌರವವಂತೆ. ಏಕೆಂದರೆ ದಾಖಲೆಯಲ್ಲಿ, ದಸ್ತಾವೇಜಿನಲ್ಲಿ ಇಲ್ಲದ ಒಂದೂ ಸಂಗತಿಯನ್ನು ಹೇಳುವುದಿಲ್ಲವಂತೆ" ಎಂದು ತಿಳಿದವರೂ ಕೂಡ ಮಾತನಾಡಿಕೊಂಡದ್ದನ್ನು ನಾನು ಕೇಳಿದ್ದೇನೆ. ಆ ಮಾತಿನ ಸತ್ಯತೆಯನ್ನು ಪರೀಕ್ಷಿಸುವ ಅವಕಾಶ ನನಗೆ ಬಂದಿಲ್ಲ. ಆದರೆ ಒಬ್ಬ ಮನುಷ್ಯನ ಬಗ್ಗೆ ಒಂದು ಒಳ್ಳೆಯ ಮಾತು ಬರಬೇಕಾದರೆ ಸತ್ಯಾಂಶ ಇರಬೇಕು. ಕೆಟ್ಟ ಮಾತು ಹುಟ್ಟಲು ಆಧಾರ ಬೇಕಾಗಿಲ್ಲ. ಎಂಬುದನ್ನು ಗಮನಿಸಬೇಕು.

ಆದರೆ ಒಂದು ಮಾತನ್ನು ಮಾತ್ರ ನಿಶ್ಚಿತವಾಗಿ ಹೇಳಬಲ್ಲೆ. ಅವರಿಗೆ ನ್ಯಾಯಾಂಗದಲ್ಲಿ ತುಂಬ ಗೌರವವಿದೆ. ಅವರು ಅಧಿಕಾರದಲ್ಲಿ ಇದ್ದಾಗ ನ್ಯಾಯವಾದಿಗಳ ಸಂಘಗಳು ಅವರನ್ನು ಕರೆದಾಗ, ಪುರುಸೊತ್ತು ಮಾಡಿಕೊಂಡು ಕೆಲವು ಕಾಲವಾದರೂ ಅವರ ಸಂಗದಲ್ಲಿದ್ದು ಬಿಚ್ಚು ಮನಸ್ಸಿನಿಂದ ಮಾತನಾಡುತ್ತಿದ್ದರು. ಅಲ್ಲಿಯೂ ನ್ಯಾಯಾಧೀಶರ ಬಗ್ಗೆ ಅಪಾರ ಗೌರವ.

**ಲಿಂಗ ಕಟ್ಟಿಲ್ಲ-ಧರ್ಮ ಬಿಟ್ಟಿಲ್ಲ**

೧೯೬೨ರಲ್ಲಿ ಚೀನೀ ದಾಳಿ ಹಿಮಾಲಯದ ಗಡಿಯಲ್ಲಿ ನಡೆದಾಗ ರಾಷ್ಟ್ರೀಯ ರಕ್ಷಣಾನಿಧಿಗೆ ಚಿನ್ನವನ್ನು ಜನ ಧಾರಾಳವಾಗಿ ದಾನ ಮಾಡಿದರು. ೧೯೬೩ರಲ್ಲಿ ಒಂದು ಸಭೆಯಲ್ಲಿ ಶ್ರೀ ಶ್ರೀ ಸುತ್ತೂರು ಶ್ರೀಗಳವರು ತಮ್ಮ ಬಂಗಾರದ ಲಿಂಗದ ಕಾಯನ್ನೇ ದಾನ ಮಾಡಿದರು. ಆ ಸಭೆಯಲ್ಲಿ ಶ್ರೀ ನಿಜಲಿಂಗಪ್ಪನವರು ಸ್ವಾಮಿಗಳ ಔದಾರ್ಯವನ್ನು ಕೊಂಡಾಡುತ್ತಾ, ಮಾತಿನ ಭರದಲ್ಲಿ ತಾವು ಲಿಂಗವನ್ನೇ ಕಟ್ಟಿಲ್ಲ ಎಂಬುದಾಗಿ ಹೇಳಿದರು. ಅದು ನಾಡಿನಲ್ಲೆಲ್ಲ ಪ್ರಸಿದ್ಧಿಯಾಯಿತು. ಅದರಿಂದ ಕೆಲವು ವಲಯಗಳಲ್ಲಿ ಗೊಂದಲವೇ ಉಂಟಾಯಿತು.

ಒಬ್ಬೊಬ್ಬರದು ಒಂದೊಂದು ಪ್ರತಿಕ್ರಿಯೆ;

-"ಇವರು ಲಿಂಗ ಕಟ್ಟಿಲ್ಲ ಎಂದು ಹೇಳಿಕೊಂಡು ತಮ್ಮ ಜಾತ್ಯತೀತ ಬುದ್ಧಿಯನ್ನು ಎತ್ತಿ ತೋರಿಸಿ ಕೊಂಡರೋ?"

"ಲಿಂಗ ಕಟ್ಟದಿರುವುದೇ ಪ್ರಗತಿಯ ಲಕ್ಷಣವೋ?"-

-"ಬ್ರಾಹ್ಮಣರು ನಾಮ, ಮುದ್ರೆ, ಜನಿವಾರ ಹಾಕುವುದು ಜಾತೀಯತೆಯ ಲಕ್ಷಣವಲ್ಲ,

ಆದರೆ ಲಿಂಗಾಯಿತ ಭಸ್ಮ ಧಾರಣ ಮಾಡಿಕೊಂಡು, ಶಿವದಾರ ಹಾಕಿದರೆ ಜಾತೀಯತೆಯ ಲಕ್ಷಣವೋ?"

-"ರಾಜ್ಯ ಮುಖ್ಯಮಂತ್ರಿ ಸ್ಥಾನದಲ್ಲಿರುವವರು ಹೀಗೆಲ್ಲ ಬಹಿರಂಗವಾಗಿ ಹೇಳಬಾರದು."

ಇತ್ಯಾದಿ ಇತ್ಯಾದಿ... ಪ್ರತಿಕ್ರಿಯೆ ಉಂಟಾಯಿತು. ಶ್ರೀ ನಿಜಲಿಂಗಪ್ಪನವರು ಹಿಂದೆ ಲಿಂಗ ಕಟ್ಟಿದ್ದಿರಬೇಕು. ಯಾವಾಗಲೋ ಅದನ್ನು ಬಿಟ್ಟಿರಬೇಕು. ಬಹುಶಃ ಸತ್ಯಾಗ್ರಹ ಸಮಯದಲ್ಲಿ ಸಬ್ ಜೈಲು ಮತ್ತು ಸೆಂಟ್ರಲ್ ಜೈಲುಗಳಲ್ಲಿ ಇರಬೇಕಾದ ಸಂದರ್ಭಗಳಲ್ಲಿ ಜೈಲು ನಿಯಮಗಳಿಗೆ ಅನುಗುಣವಾಗಿ ಅದನ್ನು ತೆಗೆದಿರಬಹುದು. ಇಲ್ಲವೇ ಜಾತಿ ಸೂಚಕವಾದ ಯಾವ ಗುರುತನ್ನೂ ಧರಿಸಬಾರದೆಂದು ಉದ್ದೇಶಪಟ್ಟು ತೆಗೆದು ಹಾಕಿದರೋ ತಿಳಿಯದು. ಅಂತೂ ಅವರು ಬಹು ವರ್ಷಗಳಿಂದ ಲಿಂಗ ಧರಿಸಿಲ್ಲ.

ಹಾಗಾದರೆ ಅವರು ನಾಸ್ತಿಕರೋ? ನಿರೀಶ್ವರ ವಾದಿಗಳೋ?

ಅವರ ನಡೆ-ನುಡಿಯಲ್ಲಿ ಅಂಥಾದ್ದೇನೂ ಕಾಣಬರುವುದಿಲ್ಲ. ಅವರೊಡನೆ ನಾನು ಮಾತನಾಡಿದ ಅನೇಕ ಸಂದರ್ಭಗಳಲ್ಲಿ ಅವರು ವಿಚಾರವಾದಿಗಳು ಎಂಬುದು ನನಗೆ ವ್ಯಕ್ತವಾಗಿದೆ. ಎಂ. ಎನ್.ರಾಯ್ ಅವರ ಮಾನವತಾ ವಾದವನ್ನು ಅವರು ಒಪ್ಪುತ್ತಾರೋ ಇಲ್ಲವೋ ಗೊತ್ತಿಲ್ಲ. ಅವರ ಮಾತು ಕೇಳಿದರೆ ಮಾತ್ರ ಶುದ್ಧ ಮಾನವತಾವಾದಿಗಳೆಂದು ಕಂಡಬರುತ್ತದೆ.

ಅವರಿಗೆ ಜನರೇ ದೇವರು. ಜನಸೇವೆಯೇ ದೇವರ ಸೇವೆ. ಈ ಲೋಕವನ್ನು ಬಿಟ್ಟು ಮತ್ತೆಲ್ಲಿಯೋ ಇರುವ ದೇವರ ಬಗ್ಗೆ ಅವರಿಗೆ ನಂಬುಗೆ ಇರುವಂತಿಲ್ಲ. ಈ ಲೋಕ ಸುಖವಾಗಿ ಬದುಕಬೇಕು; ಸರ್ವಜನರೂ ಸುಖವಾಗಿರಬೇಕು. ದುಃಖದಾರಿದ್ರ್ಯ, ವೈರ-ದ್ವೇಷ, ಅಜ್ಞಾನ, ಅನಾರೋಗ್ಯ ಇರದಂಥ ಸುಂದರ ಸುಖಮಯ ಲೋಕಕ್ಕಾಗಿ ಶ್ರಮಿಸುವುದೇ ಮಾನವ ಜನ್ಮದ ಗುರಿ ಎಂದು ಅವರು ನಂಬಿರುವುದಾಗಿ ತೋರುತ್ತಿದೆ. ಬದುಕಿರುವವರೆಗೆ ಕಾಯಕ ಮಾಡಬೇಕು. ದುಡಿಯದೆ ಉಣ್ಣುವ ದೃಢಕಾಯರು ರಾಷ್ಟ್ರಕ್ಕೆ ಹೊರೆ. ಅಂಥವರ ಬಗ್ಗೆ ಸಹಾನುಭೂತಿಯಿಲ್ಲ.

ನೀತಿಯ ಬಗ್ಗೆ ಅವರಿಗೆ ಖಚಿತವಾದ, ಕಟ್ಟು ನಿಟ್ಟಾದ ಭಾವನೆಗಳಿವೆ. ಸಾರ್ವಜನಿಕ ಜೀವನದಲ್ಲಿರುವವರ ವೈಯಕ್ತಿಕ ಬಾಳು ಮಡಿಯಾಗಿರಬೇಕೆಂಬುದು ಅವರ ನಿಶ್ಚಿತ ಅಭಿಪ್ರಾಯ. ಶ್ರೀ ನಿಜಲಿಂಗಪ್ಪನವರ ವೈಯಕ್ತಿಕ ಬಾಳು. ಅವರು ಉಡುವ ಬಿಳಿಯ ಖಾದಿಯಂತೆ ಶುಭ್ರ! ಇಂಥವರು ಲಿಂಗ ಕಟ್ಟಿಲ್ಲದಿದ್ದೂ ಧರ್ಮ ಬಿಟ್ಟವರೆಂದು ಹೇಗೆ ಹೇಳುವುದು?



# ರಾಜನೀತಿಜ್ಞ ಸಿದ್ದವನಹಳ್ಳಿ ಶ್ರೀ ನಿಜಲಿಂಗಪ್ಪ

ಮತ್ತೂರು ಕೃಷ್ಣಮೂರ್ತಿ

"ನಿಜಲಿಂಗಪ್ಪನವರ ಜೀವನವು ಯುವಜನಾಂಗಕ್ಕೆ ಸ್ಫೂರ್ತಿ ನೀಡುತ್ತದೆ. ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನಕ್ಕೆ ಏರಿದ ಇವರು ಗಳಿಸಿರುವ ಸಾಧನೆ, ದುರ್ಗಮವಾದ ಹಾದಿಯಲ್ಲಿ ದಾಟಿ ಬಂದ ನಂತರ ದೊರೆತದ್ದು. ಇವರ ಸಾಧನೆ ಸಿದ್ಧಿ ಕಂಡಿದೆ.." ಎಂದು ಭಾರತದ ಮಾಜಿ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರು, ಇದೇ ತಿಂಗಳು ಪ್ರಕಟವಾದ Rastrabandhu S. Nijalingappa: Man and Statesman ಎಂಬ ಪುಸ್ತಕಕ್ಕೆ ಬರೆದಿರುವ ಮುನ್ನುಡಿಯಲ್ಲಿ ಹೇಳಿದ್ದಾರೆ.

ಡಾ. ರಾಘವೇಂದ್ರರಾವ್ ಅವರು ಇಂಗ್ಲಿಷಿನಲ್ಲಿ ಬರೆದಿರುವ ೪೪೮ ಪುಟಗಳ ಈ ಪುಸ್ತಕವನ್ನು ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನದವರು ಪ್ರಕಟಿಸಿದ್ದಾರೆ.

ನಿಜಲಿಂಗಪ್ಪನವರ ೯೮ ವರ್ಷಗಳ ಸುದೀರ್ಘ ಜೀವನದ ಹತ್ತು ಹಲವು ಮುಖಗಳನ್ನು ಪರಿಚಯ ಮಾಡಿಕೊಟ್ಟಿರುವ ರಾಘವೇಂದ್ರರಾಯರ ಸಾಹಸವು ನಿಜಕ್ಕೂ ಶ್ಲಾಘನೀಯ. ಇಂದಿನ ಯುವ ಜನರು ಹಾಗೂ ಅಧಿಕಾರದಲ್ಲಿ ಇರುವ ರಾಜಕಾರಣಿಗಳು ಈ ಪುಸ್ತಕವನ್ನು ಓದಿದರೆ ತಮ್ಮ ಪಾಲಿನ ಕರ್ತವ್ಯವನ್ನು ನಿಷ್ಠೆಯಿಂದ ಪಾಲಿಸಬೇಕು ಎಂಬ ಅರಿವು ಮೂಡದೆ ಇರದು.

**ವಿಚಾರ - ಆಚಾರ**

ನಿಜಲಿಂಗಪ್ಪನವರು ಗಾಂಧಿವಾದಿಗಳು. ಇವರ ವಿಚಾರ ನೇರ, ಇವರ ಆಚಾರವೂ ಅಷ್ಟೇ ನೇರ. ತತ್ವಗಳು ಇರುವುದು ಅನುಷ್ಠಾನಕ್ಕೆ ಬರಿಯ ಉಪದೇಶ

ಮಾಡುವುದಕ್ಕೆ ಅಲ್ಲ ಎಂಬ ವಿಷಯದಲ್ಲಿ ಇವರಿಗೆ ಅಚಲ ನಂಬಿಕೆ, ದೃಢ ವಿಶ್ವಾಸವಿದೆ. ಇವರ ಪರಿಚಿತಸ್ಥರಿಗೆ, ಇವರೊಂದಿಗೆ ಕೆಲಸ ಮಾಡಿದವರಿಗೆ ಈ ಅಂಶವು ಗೊತ್ತಾಗಿದೆ.

ಪಂಡಿತ್ ಜವಾಹರಲಾಲ್ ನೆಹರೂ ಹಾಗೂ ಇತರ ಕೆಲವು ಪ್ರಮುಖರು ಪ್ರತಿಪಾದಿಸಿದ ಸಮಾಜವಾದ ನೀತಿಯನ್ನು ಸಿದ್ದವನಹಳ್ಳಿ ನಿಜಲಿಂಗಪ್ಪನವರು ಆಚರಣೆ ತಂದುಕೊಂಡಿದ್ದರು. ೧೯೫೮ರಲ್ಲಿ ಇಂಡಿಯನ್ ಆಯಿಲ್ ಕಾರ್ಪೊರೇಷನ್ನಿನ ಅಧ್ಯಕ್ಷರನ್ನಾಗಿ ಇವರನ್ನು ಸರ್ಕಾರವು ನೇಮಿಸಿತು. ತಿಂಗಳಿಗೆ ೧೦ ಸಾವಿರ ರೂ. ವೇತನ ಹಾಗೂ ಇತರೆ ಸೌಲಭ್ಯಗಳನ್ನು ಗೊತ್ತು ಮಾಡಲಾಯಿತು. ಆದರೆ ನಿಜಲಿಂಗಪ್ಪನವರು ಈ ಜವಾಬ್ದಾರಿ ಉದ್ಯೋಗವನ್ನು ಸಂತಸದಿಂದ ಒಪ್ಪಿಕೊಂಡರಾದರೂ, ವೇತನ ಇತರೆ ಸೌಕರ್ಯಗಳು ಬೇಡ, ತಿಂಗಳಿಗೆ ೧ ರೂಪಾಯಿನ ಸಾಂಕೇತಿಕ ಕೊಡುಗೆ ಸಾಕು ಎಂದರು. "ಸಮಾಜವಾದಿ ಸಿದ್ಧಾಂತವನ್ನು ನಮ್ಮ ದೇಶದ ಪರಿಸ್ಥಿತಿಯಲ್ಲಿ ಆಚರಣೆಗೆ ತರಬೇಕು ಎಂದು ನೀತಿಯನ್ನು ರೂಪಿಸಿಕೊಂಡ ಮೇಲೆ, ಇಷ್ಟು ದೊಡ್ಡ ಮೊತ್ತದ ವೇತನವನ್ನು ಪಡೆದು ಕೆಲಸ ಮಾಡಿದರೆ ವಿಚಾರಕ್ಕೂ ಆಚಾರಕ್ಕೂ ನೇರ ವಿರುದ್ಧವಾಗುತ್ತದೆ" ಎಂದು ಪ್ರಧಾನಮಂತ್ರಿ ಜವಾಹರಲಾಲರಿಗೆ ನಿಜಲಿಂಗಪ್ಪನವರು ಹೇಳಿದರು.

ಜನಸೇವೆ ಮಾಡುತ್ತೇವೆ ಎಂದು ಪ್ರತಿಜ್ಞಾ ವಚನ ನೀಡಿ, ಭ್ರಷ್ಟಾಚಾರಗಳಲ್ಲಿ ತೊಡಗಿ, ಸ್ವಾರ್ಥ ಸಾಧನೆಯಲ್ಲೇ ತೊಡಗಿರುವ ಇಂದಿನ ಹಲವು ರಾಜಕಾರಣಿಗಳು, ನಿಜಲಿಂಗಪ್ಪನವರ ಜೀವನವನ್ನು ಓದಿ ಕಲಿತು ಕೊಳ್ಳಬೇಕು ಎಂದು ಹೇಳಿರುವ ವೆಂಕಟರಾಮನ್ ಅವರ ಮಾತು ಸಂದರ್ಭೋಚಿತವಾಗಿದೆ.

## ಉಪಯುಕ್ತ ದಿನಚರಿ

ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ವಿವಾಹ ಜೀವನ, ಉದ್ಯೋಗ ಇವೇ ಮೊದಲಾದವುಗಳ ಬಗೆಗೆ ಹೇಳುವುದು ಬರೆಯುವುದು ಕಷ್ಟವಾಗುವುದಿಲ್ಲ. ವಯಸ್ಸಾದ ನಂತರ ಈ ಬಗೆಗೆ ಬರೆದು ಅದರಲ್ಲಿ ಸಣ್ಣಪುಟ್ಟ ಕೊರತೆ, ಲೋಪದೋಷ ಇದ್ದರೂ ಅಂಥ ಪ್ರಮಾದ ಸಂಭವಿಸುವುದಿಲ್ಲ. ಆದರೆ ರಾಜಕೀಯ ಕ್ಷೇತ್ರದಲ್ಲಿ ರಾಜ್ಯದ ಮುಖ್ಯಮಂತ್ರಿಯಾಗಿ ರಾಷ್ಟ್ರದ ಪ್ರಮುಖ ಪಕ್ಷವೊಂದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದವರು ತಮ್ಮ ಕಾರ್ಯನಿರ್ವಹಣೆ ಯನ್ನು ಅನುದಿನವೂ ಬರೆಯುವ ದಿನಚರಿಯಲ್ಲಿ ಆಗಿಂದಾಗಲೇ ಬರೆಯದೆ ಹೋದರೆ ಅಂಥವರ ಜೀವನಚರಿತ್ರೆಯು ಪ್ರಾಮಾಣಿಕ ವಾಗದೇ ಇರುವ ಸಂಭವ ಇರುತ್ತದೆ. ನಿಜಲಿಂಗಪ್ಪನವರು ತಪ್ಪದೇ ದಿನಚರಿಯನ್ನು ಬರೆದಿಟ್ಟಿರುವುದು ನಿಜಕ್ಕೂ ಗಮನಿಸಬೇಕಾದದ್ದು. ಇತರರಿಗೆ ಇದು ಆದರ್ಶ.

ಬಾಲ್ಯ ವಿದ್ಯಾಭ್ಯಾಸ ಗೃಹಸ್ಥರಾಗಿ ವಕೀಲಿ ವೃತ್ತಿ ನಡೆಸಿದ್ದು. ಮಹಾತ್ಮಾಗಾಂಧೀಜಿಯ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದುದು, ಕರ್ನಾಟಕ ಏಕೀಕರಣಕ್ಕೆ ಹೋರಾಟ ನಡೆಸಿದುದು, ಮುಖ್ಯಮಂತ್ರಿಗಳಾದುದು, ಕಾಂಗ್ರೆಸ್ ಪಕ್ಷವು ಒಡೆದು ಇಬ್ಭಾಗವಾ ದದ್ದು ಮತ್ತು ನಂತರ ಸಂಭವಿಸಿದ ಐತಿಹಾಸಿಕ ಘಟನೆಗಳು ಮಹತ್ವಪೂರ್ಣವಾದವು ಎಂಬದನ್ನು ರಾಘವೇಂದ್ರರಾಯರು ವಿಸ್ತಾರವಾಗಿ ತಿಳಿಸಿ ಉಪಕರಿಸಿದ್ದಾರೆ.

**ಆತ್ಮ ಸಾಕ್ಷಿಗೆ ತಕ್ಕಂತೆ...**

ಆತ್ಮ ಸಾಕ್ಷಿಯ ಪ್ರೇರಣೆಯಂತೆ ನಡೆದುಕೊಳ್ಳಬೇಕು ಎಂಬ ತತ್ವವನ್ನು ಆಚರಿಸಿ ತೋರಿಸಿದವರ ಪೈಕಿ, ಗಾಂಧೀಜಿಯವರ ನಂತರದ ಕೆಲವೇ ಮಂದಿಯಲ್ಲಿ ನಿಜಲಿಂಗಪ್ಪನವರು ಒಬ್ಬರು ಎಂಬುದು ಭಾರತೀಯರೆಲ್ಲ ಹೆಮ್ಮೆ ಪಡುವಂಥದು. ಇಂದಿನ ರಾಜಕೀಯ ಕ್ಷೇತ್ರದಲ್ಲಿ ಭೀಕರವಾಗಿ ನರ್ತಿಸುತ್ತಿರುವ ಭ್ರಷ್ಟಾಚಾರವು ಇಳಿವಯಸ್ಸಿನ ನಿಜಲಿಂಗಪ್ಪನವರ ಮನಸ್ಸನ್ನು ಬಹಳವಾಗಿ ನೋಯಿಸಿದೆ ಎಂಬುದು ಈ ಗ್ರಂಥದಲ್ಲಿ ಯಥಾವತ್ತಾಗಿ ಮೂಡಿಬಂದಿದೆ.

ಗಾಂಧಿವಾದಿಗಳಾಗಿರುವ ನಿಜಲಿಂಗಪ್ಪನವರು ಶ್ರೀಮಂತರು ತಮ್ಮ ಸಿರಿಯನ್ನು ಶ್ರೀಮಂತರಲ್ಲದ ಜನಸಾಮಾನ್ಯರೊಂದಿಗೆ ಪಾಲ್ಗೊಳ್ಳದಿದ್ದರೆ ಇದು ಸಮಾಜದ್ರೋಹವಾಗುತ್ತದೆ. ಇದು, ಈ ಧೋರಣೆಯು ರಕ್ತಕ್ರಾಂತಿಯಲ್ಲಿ ಪರ್ಯವಸಾನ ಗೊಂಡದೆ ಅಚ್ಚರಿಪಡಬೇಕಿಲ್ಲ' ಎಂಬ ಗಾಂಧೀಜಿಯ ಎಚ್ಚರಿಕೆಯನ್ನು ನೂರಕ್ಕೆ ನೂರರಷ್ಟು ನಂಬಿದವರು ನಿಜಲಿಂಗಪ್ಪನವರು.

ಅಹಿಂಸೆ, ಅಧಿಕಾರ ವಿಕೇಂದ್ರೀಕರಣ, ಸಂಪತ್ತಿನ ಸಮಾನ ವಿತರಣೆ ಮೊದಲಾದ ವಿಷಯಗಳಲ್ಲಿ ಗಾಂಧಿ ಮಾರ್ಗದಲ್ಲಿ ಅಚಲ ನಂಬಿಕೆ ಇಟ್ಟು ಕಾರ್ಯರೂಪದಲ್ಲಿ ನಿರ್ವಹಿಸಿದ್ದ ಇವರು, ಭಾರತದ ಗ್ರಾಮ ಜೀವನವನ್ನು ಚೆನ್ನಾಗಿ ಮನಗಂಡಿದ್ದ ಗಾಂಧೀಜಿಯ ನಂತರ ಸರ್ದಾರ ವಲ್ಲಭಬಾಯಿ ಪಟೇಲರು' ಎಂದು ಹೇಳಿದ್ದಾರೆ.

**ಕಾಂಗ್ರೆಸ್ ಇಬ್ಭಾಗ-ಐತಿಹಾಸಿಕ ಘಟನೆ**

೧೯೬೪ರಲ್ಲಿ ಜವಾಹರಲಾಲ್ ನೆಹರೂ ನಂತರ ನಡೆದ ಘಟನೆಗಳು - ಕಾಂಗ್ರೆಸ್ ಪಕ್ಷ ಹಾಗೂ ರಾಜಕೀಯ ಕ್ಷೇತ್ರ - ಎರಡರಲ್ಲಿ ಈ ಶತಮಾನದ ಸ್ವತಂತ್ರ ಭಾರತದ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದದ್ದು ಎಂಬುದು ನಿಜಲಿಂಗಪ್ಪನವರ ಜೀವನ ಚರಿತ್ರೆಯಲ್ಲಿ ವಿವರವಾಗಿ ಮೂಡಿಬಂದಿದೆ. ಇವರೇ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಇಂದಿರಾ ಗಾಂಧಿಯವರ ಪಾತ್ರವು ಕಾಂಗ್ರೆಸ್ ಪಕ್ಷದ ಅವನತಿಗೆ ನಾಂದಿ ಹಾಡಿದಂತಾಯಿತು. ಪ್ರಧಾನಮ ಂತ್ರಿ ಸ್ಥಾನ, ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನ ಈ ಎರಡು ಸ್ಥಾನಗಳ ಬಗೆಗೆ ಪೈಪೋಟಿ ಏರ್ಪಟ್ಟು ಕಾಂಗ್ರೆಸ್ ಪಕ್ಷವು ಗಂಡಾಂತರ ಪರಿಸ್ಥಿತಿಯನ್ನು ಎದುರಿಸಿತು. ಕಾಂಗ್ರೆಸ್ ಸಿಂಡಿಕೇಟ್ ಇಂದಿರಾಗಾಂಧಿಯವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಇಂದಿರಾಗಾಂಧಿಯವರು ನಿಜಲಿಂಗಪ್ಪನವರನ್ನು ಸರಿಯಾಗಿ ಅಳೆಯಲಿಲ್ಲ. ೧೯೭೧ರ ಕಾಂಗ್ರೆಸ್ ಅಧಿವೇಶನ ಅಧ್ಯಕ್ಷರಾಗಿ ನಿಜಲಿಂಗಪ್ಪನವರು ಮಾಡಿದ ಭಾಷಣವು, ೨೦ ವರ್ಷಗಳ ಕಾಂಗ್ರೆಸ್ ಆಡಳಿತವು ದೇಶವನ್ನು ಯಾವ ಸ್ಥಿತಿಗೆ ಒಯ್ಯುತ್ತಿದೆ ಎಂಬುದರ ಮೇಲೆ ಬೆಳಕು ಚೆಲ್ಲಿತು. ಗಾಂಧಿವಾದಕ್ಕೆ ಕಾಂಗ್ರೆಸ್ ಪಕ್ಷವು ತಿಲಾಂಜಲಿ ನೀಡಲು ಆರಂಭಿಸಿರುವುದನ್ನು ಭಾರತೀಯರ ಗಮನಕ್ಕೆ ತರಲು ನಿಜ ಲಿಂಗಪ್ಪನವರು ಹಿಂಜರಿಯಲಿಲ್ಲ.

ಈ ಮಹತ್ವಪೂರ್ಣ ಘಟನೆಯನ್ನು ನಿಜಲಿಂಗಪ್ಪನವರು ತಮ್ಮ ದಿನಚರಿಯಲ್ಲಿ ನಿಷ್ಕೃಷ್ಟವಾಗಿ ಸತ್ಯಾಂಶಗಳಿಗೆ ಕಿಂಚಿತ್ತೂ ಭಂಗ ಬರದಂತೆ ಬರೆದಿಟ್ಟಿದ್ದಾರೆ.

**ಸಂಘ-ಸಂಸ್ಥೆಗಳಿಗೆ ಸೇವೆ**

ರಾಷ್ಟ್ರಮಟ್ಟದ, ರಾಜ್ಯಮಟ್ಟದ ಹಲವು ಖಾಸಗಿ ಸಂಘ-ಸಂಸ್ಥೆಗಳುನಿಜಲಿಂಗಪ್ಪನವರ ಸೇವೆಯನ್ನು ಪಡೆದಿವೆ. ಈ ವಿವರವನ್ನು ಸಾಕಷ್ಟು ತಿಳಿಸಲಾಗಿದೆ, ಅವರ ಈ ಜೀವನ ಚರಿತ್ರೆಯಲ್ಲಿ.

ಒಂದೇ ಮಾತಿನಲ್ಲಿ ಹೇಳುವುದಾದರೆ ಇಂದಿನ ರಾಜಕಾರಣಿಗಳು ಈ ಪುಸ್ತಕವನ್ನು ಓದಿದರೆ ತಮ್ಮ ತಮ್ಮ ಎದೆ ಮೇಲೆ ಕೈ ಇಟ್ಟು ತಾವು ಹೇಗೆ ವರ್ತಿಸುತ್ತಿದ್ದಾರೆ ಎಂದು ಕೇಳಿಕೊಂಡು ಆತ್ಮಪರೀಕ್ಷೆ ನಡೆಸಿಕೊಳ್ಳಬೇಕು ಎನಿಸುತ್ತದೆ.

ಇಂದಿನ ಯುವ ಜನಾಂಗವು ಓದಿದರೆ ತಮ್ಮ ಭವಿಷ್ಯವು ತಮ್ಮ ಕೈಯಲ್ಲಿಯೇ ಇದೆ ಎಂಬುದು ಮನವರಿಕೆಯಾಗಿ ಕಾರ್ಯೋನ್ಮುಖರನ್ನಾಗಿಸುತ್ತದೆ. ಹೊಸ ಶತಮಾನದಲ್ಲಿ ಅಡಿ ಇಡಲು ಸಿದ್ಧತೆ ಮಾಡಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಈ ಪುಸ್ತಕವು ಹೊರಬಂದಿರುವುದು ಸಮಯೋಚಿತವಾಗಿದೆ. 

# ಮಾಯವಾದ ಮುಗುಳ್ನಗೆ

ಕೆ. ಸತ್ಯನಾರಾಯಣ

ಸಿದ್ದವ್ವನಹಳ್ಳಿ ನಿಜಲಿಂಗಪ್ಪ ಅವರನ್ನು ಅವರ ಮುಗುಳ್ನಗೆಯಿಂದ ಪ್ರತ್ಯೇಕಿಸುವುದು ಸಾಧ್ಯವೇ ಇಲ್ಲವೇನೋ ಎನ್ನುವಂತೆಯೇ ಅವರು ಬಾಳಿ ಬದುಕಿದರು.

ಸುಮಾರು ಆರು ದಶಕಗಳ ಕಾಲ ಕರ್ನಾಟಕದ ರಾಜಕೀಯದ ಮೇಲೆ ಪ್ರತ್ಯಕ್ಷವಾಗಿ - ಪರೋಕ್ಷವಾಗಿ ಬೀರಿರುವ ಪ್ರಭಾವ ಚಿರಕಾಲ ಉಳಿಯುವಂತಹದ್ದು. ಅವರ ವ್ಯಕ್ತಿತ್ವವೇ ಅಂತಹದ್ದು.

ಕಳೆದು ಹೋದ ಶತಮಾನದ ಮೊದಲ ವರ್ಷಗಳಲ್ಲಿ (ಡಿಸೆಂಬರ್ ೧೦,೧೯೦೨) ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಹಲವಾಗಿಲು ಗ್ರಾಮದಲ್ಲಿ ಕೇವಲ ಮೂರೂವರೆ ಎಕರೆ ತರಿಭೂಮಿಯ ಮಾಲಿಕನ ಮನೆಯಲ್ಲಿ ಹುಟ್ಟಿದ ನಿಜಲಿಂಗಪ್ಪ, ಕಾಲಚಕ್ರದ ಉರುಳಲ್ಲಿ ಸಿಕ್ಕಿ ದೇಶದ ರಾಜಕೀಯ ವ್ಯವಸ್ಥೆಯಲ್ಲೇ ದೊಡ್ಡ ರೀತಿಯ ಬದಲಾವಣೆಗಳಾದಾಗ, ಅದರ ಕೇಂದ್ರದಲ್ಲಿ ನಿಲ್ಲುವಷ್ಟು ಎತ್ತರಕ್ಕೆ ಬೆಳೆದು ನಿಂತಿದ್ದು ಒಂದು ಮಹಾ ಪ್ರಗಾಥ. ಆ ಕಥೆ ಆಗಸ್ಟ್ ೮,೨೦೦೦ ಕ್ಕೆ ಮುಗಿಯಿತು.

ನಿಜ. ನಿಜಲಿಂಗಪ್ಪ ಯುಗಪುರುಷರೂ ಅಲ್ಲ. ಶತಮಾನದ ವ್ಯಕ್ತಿಯಂತಹ ದಾಖಲೆಯನ್ನು ನಿರ್ಮಿಸಲಿಲ್ಲ. ಆದರೆ ಅವರು ನಡೆದ ದಾರಿ, ಅದನ್ನು ಕ್ರಮಿಸಿದ ರೀತಿ ಅಸಾಮಾನ್ಯವಾದದ್ದು. ಆದ್ದರಿಂದಲೇ ಅವರಿಗೆ ಜನಮನ್ನಣೆ ಸಿಕ್ಕಿದ್ದು.

ಅವರು ಮುಖ್ಯಮಂತ್ರಿಯಾಗಿದ್ದಾಗ ಸೆಂಟ್ರಲ್ ಕಾಲೇಜಿನಲ್ಲಿ ಒಂದು ದೊಡ್ಡ ಸಮಾರಂಭ ನಡೆದಿತ್ತು. ಅದರಲ್ಲಿ ಆಗಿನ ಮಂತ್ರಿಮಂಡಲದ ಅರ್ಧ ಭಾಗ ಪಾಲುಗೊಂಡಿತ್ತು ಎನ್ನಬಹುದು. ಅವರಲ್ಲಿ ಕೆಲವರು ಮೈಸೂರಿನ ಮಹಾರಾಜ

ಕಾಲೇಜಿನ ಹಿರಿಯ ವಿದ್ಯಾರ್ಥಿಗಳಾದರೆ, ಇನ್ನು ಕೆಲವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು

ಹಳೆಯ ಮೈಸೂರು ಸಂಸ್ಥಾನದ ಎರಡು ಅತಿಪ್ರತಿಷ್ಠಿತ ಕಾಲೇಜುಗಳಿವು. ಆ ಕಾಲೇಜುಗಳಿಂದ ಹೊರಟಿದ್ದ ವಿದ್ಯಾರ್ಥಿಗಳದ್ದೇ ಮುಂದೆ ರಾಜ್ಯದ ಕಾರುಬಾರೆಲ್ಲ ಎನ್ನುವ ಸ್ಥಿತಿ.

ಆ ಸಮಾರಂಭದಲ್ಲಿ ನಿಜಲಿಂಗಪ್ಪ ಹೇಳಿದ್ದು: ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳು ಚರಿತ್ರೆಯನ್ನು ಓದುತ್ತಾರೆ. ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು ಚರಿತ್ರೆಯನ್ನು ನಿರ್ಮಿಸುತ್ತಾರೆ.

ನಿಜಲಿಂಗಪ್ಪ ಸೆಂಟ್ರಲ್ ಕಾಲೇಜಿನ ಹಳೆಯ ವಿದ್ಯಾರ್ಥಿಯಾಗಿ ನಿಜಕ್ಕೂ ರಾಜ್ಯದ, ದೇಶದ ಇತಿಹಾಸದ ನಿರ್ಮಾಣದಲ್ಲಿ ಸಕ್ರಿಯವಾಗಿ ಪಾಲುಗೊಂಡರು. ಇತಿಹಾಸವನ್ನು ನಿರ್ಮಿಸಿದರು.

ನಿಜಲಿಂಗಪ್ಪ, ಸಾಯುವ ದಿನಗಳಲ್ಲಿ ಅದೇಕೆ ಚಿತ್ರದುರ್ಗದಲ್ಲೇ ಸಾಯಬೇಕೆಂದು ಹಟ ಹಿಡಿದರೋ ಗೊತ್ತಿಲ್ಲ. ಅವರು ಬದುಕಿದ ರೀತಿಯನ್ನು ನೋಡಿದಾಗ ಅವರು ದೇಶದ ಯಾವ ಭಾಗದಲ್ಲಿ ಸತ್ತಿದ್ದರೂ ಅದೇ ಕರ್ನಾಟಕ-ಚಿತ್ರದುರ್ಗ ಆಗುತ್ತಿತ್ತು. ನಿಜಕ್ಕೂ ಅವರ ಬದುಕಿನ ರೀತಿ ಅಚ್ಚ ಭಾರತೀಯ.

ನಿಜಲಿಂಗಪ್ಪ ಅವರಿಗೆ ರಾಜ್ಯ ಸರ್ಕಾರ ಕರ್ನಾಟಕ ರತ್ನ ಪ್ರಶಸ್ತಿ ನೀಡಿದ ಸಂದರ್ಭದಲ್ಲಿ ಅವರ ಜೀವನದ ಅತಿಮಧುರ ಕ್ಷಣ ಯಾವುದೊಂದು ಕೇಳಿದಾಗ ಪತ್ನಿ ಮುರಿಗೆಮ್ಮ ಅವರ ಕೈ ಹಿಡಿದಿದ್ದು ಎಂದಿದ್ದರು.

ನಿಜಲಿಂಗಪ್ಪ ಅವರ ತಾಯಿ ನೀಲಮ್ಮ ಬಡತನದಲ್ಲಿದ್ದರೂ, ಮಗ ಎಸ್ ಎಸ್ ಎಲ್ ಸಿ ಪಾಸಾಗಿ ಕೆಲಸಕ್ಕೆ ಸೇರುತ್ತೇನೆ. ಎಂದಾಗ ನಾನು ದುಡಿದು ಬದುಕುತ್ತೀನಿ - ನೀನು ಕಾಲೇಜಿಗೆ ಹೋಗು ಎಂದಿದ್ದರಂತೆ. ಆ ಆಶೀರ್ವಾದದ ಬಲವೇ ನಿಜಲಿಂಗಪ್ಪ ಅವರನ್ನು ಪುಣೆಯ ಫರ್ಗುಸನ್ ಕಾಲೇಜಿನಲ್ಲಿ ಕಾನೂನು ಪದವಿ ಪಡೆಯುವಂತೆ ಮಾಡಿದ್ದು.

ದಶಕದ ಅನಂತರ ನಿಜಲಿಂಗಪ್ಪ ಅವರು ಚಿತ್ರದುರ್ಗದಲ್ಲಿ ವಕೀಲಿಯನ್ನು ಬಿಟ್ಟು ಕಾಂಗ್ರೆಸ್ ಸೇರಲು ಮುಂದಾದಾಗ ಅವರ ಪತ್ನಿ ಮುರಿಗೆಮ್ಮ 'ನೀವು ಜೈಲಿಗೆ ಹೋಗಿ. ನಾವು ಹೇಗೋ ಬದುಕುತ್ತೇವೆ' ಎಂದರಂತೆ.

ಆ ಆಸರೆ - ಬೆಂಬಲವೇ ನಿಜಲಿಂಗಪ್ಪ ಅವರನ್ನು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷ ಪೀಠದವರೆಗೂ ಕರೆದುಕೊಂಡು ಹೋಯಿತು. ನಿಜಲಿಂಗಪ್ಪ ಅವರ ಜೀವನ ರೂಪುಗೊಂಡಿದ್ದು ನೀಲಮ್ಮ - ಮುರಿಗೆಮ್ಮ ಅವರಿಂದ. ಅದರಲ್ಲಿ ಅನುಮಾನವೇ ಇಲ್ಲ.

೧೯೨೪ರಲ್ಲಿ ಕರ್ನಾಟಕದ ಬೆಳಗಾವಿಯಲ್ಲಿ ಕಾಂಗ್ರೆಸ್ ಮಹಾಧಿವೇಶನ ನಡೆಯಿತು. ಮಹಾತ್ಮಾಗಾಂಧಿ ಅಧ್ಯಕ್ಷತೆ ವಹಿಸಿದ್ದ ಒಂದೇ ಒಂದು ಕಾಂಗ್ರೆಸ್ ಅಧಿವೇಶನ ಅದು. ಆ ಅಧಿವೇಶನಕ್ಕೆ ನಿಜಲಿಂಗಪ್ಪ ಹೋಗಿದ್ದರು. ಆಗಲೇ ಅವರು ಗಾಂಧೀ ವಾಣಿಯಿಂದ ಪುಲಕಿತವಾಗಿದ್ದು.

೧೯೩೭, ಕಾಂಗ್ರೆಸ್ಸಿನಲ್ಲಿ ಪ್ರಜಾಪಕ್ಷ ವಿಲೀನವಾದಾಗ, ನಿಜಲಿಂಗಪ್ಪ ಆ ವಿಲೀನ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷ, ಅಂದಿನಿಂದ ಅವರ ವಕೀಲಿ ಹೆಚ್ಚು ಕಡಿಮೆ ಬಂದ್. ಪೂರ್ಣ ಕಾಲದ ಸಾರ್ವಜನಿಕ ಸೇವಕರಾದರು.

ನಿಜಲಿಂಗಪ್ಪ ಅವರ ರಾಜಕೀಯ ಜೀವನದಲ್ಲಿ ತುರುವನೂರಿನಲ್ಲಿ ಈಚಲು ಮರವನ್ನು ಕಡಿಯುವ ಆಂದೋಲನದಲ್ಲಿ ಪಾಲುಗೊಂಡಿದ್ದು ಒಂದು ಪ್ರಮುಖ ಹಂತ. ಆ ಆಂದೋಲನವೇ ಅವರನ್ನು ನಿರ್ಣಾಯಕವಾಗಿ ಕಾಂಗ್ರೆಸ್ಸಿನ, ಸ್ವಾತಂತ್ರ್ಯ ಸಮರದ ದವಡೆಗೆ ನೂಕಿದ್ದು. (ದಶಕಗಳ ಅನಂತರ, ಕರ್ನಾಟಕದಲ್ಲಿ ನಿಜಲಿಂಗಪ್ಪ ಮಂತ್ರಿ ಮಂಡಲವೇ ಪಾನ ನಿಷೇಧ ಕಾಯಿದೆಯನ್ನು ರದ್ದುಪಡಿಸಿದಾಗ, ಅಂದಿನ ಸಮಾಜ ಕಲ್ಯಾಣ ಮಂತ್ರಿ ಯಶೋಧರಾ ದಾಸಪ್ಪ, ಅವರ ಸ್ಥಾನಕ್ಕೆ ರಾಜೀನಾಮೆ ನೀಡಿದ ಅನಂತರ ವಿಧಾನ ಸಭೆಯಲ್ಲಿ ಮಾಡಿದ ಭಾಷಣದಲ್ಲಿ ತುರುವನೂರು ಸತ್ಯಾಗ್ರಹದ ಪ್ರಸ್ತಾಪ ಬಂದಾಗ, ನಿಜಲಿಂಗಪ್ಪ ಅವರ ಕಣ್ಣಂಚಿನಲ್ಲಿ ನೀರು ಕಾಣಿಸಿಕೊಂಡಿತ್ತು. ನಿಜ, ರಾಜಕೀಯಕ್ಕೆ ನಿಜಲಿಂಗಪ್ಪ ತೆತ್ತ ಬೆಲೆ ಅದು).

ಕಾಂಗ್ರೆಸ್ಸಿನಲ್ಲಿ ನಿಜಲಿಂಗಪ್ಪ ಅವರ ಕೆಲಸ ಸುಗಮವಾಗಿರಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸನ್ನು ನಡೆಸುವವರಿದ್ದರು. ಆದರೆ ಮದ್ರಾಸ್, ಹೈದರಾಬಾದ್ ಹಾಗೂ ಮುಂಬೈ ಪ್ರಾಂತಗಳಲ್ಲಿ ಆರೇಳು ಸಣ್ಣಪುಟ್ಟ ಸಂಸ್ಥಾನಗಳಲ್ಲಿ, ಹರಿದು ಹಂಚಿ ಹೋಗಿದ್ದ ಪ್ರದೇಶಗಳಲ್ಲಿ ಎಲ್ಲರನ್ನೂ ಒಟ್ಟಿಗೇ ಸೇರಿಸಿಕೊಂಡು, ನಿಭಾಯಿಸಿಕೊಂಡು ಹೋಗುವ ನಾಯಕ ಇರಲಿಲ್ಲ. ಆಗಲೇ ನಿಜಲಿಂಗಪ್ಪ ಆಗಿನ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ ಮಿಂಚಿ ಮೆರೆದಿದ್ದು.

ಆ ಭಾಗದಲ್ಲಿ ನಿಜಲಿಂಗಪ್ಪ ಅವರಿಗೆ ಕಾಂಗ್ರೆಸ್ಸಿನಲ್ಲಿ ವಿರೋಧಿಗಳಿರಲಿಲ್ಲ ಎಂದೇನೂ ಅಲ್ಲ. ವಿಜಾಪುರದ ಚನ್ನಬಸಪ್ಪ ಅಂಬಲಿ ಅವರು, ಬೆಳಗಾವಿಯ ವೆಂಕಾರೆಡ್ಡಿ ಹೂಲಿ ಅವರ ಮೂಲಕ ನಿಜಲಿಂಗಪ್ಪ ಅವರನ್ನು ಒಮ್ಮೆ. ಕೆ. ಪಿ. ಸಿ. ಸಿ. ಅಧ್ಯಕ್ಷ ಚುನಾವಣೆಯಲ್ಲಿ ಸೋಲಿಸಿದ್ದರು.

ದಶಕಗಳ ಅನಂತರ ಕರ್ನಾಟಕದ ಮುಖ್ಯಮಂತ್ರಿ ಸ್ಥಾನದಿಂದ ನಿಜಲಿಂಗಪ್ಪ ಅವರನ್ನು ಪದಚ್ಯುತಿಗೊಳಿಸಿ, ಮುಖ್ಯಮಂತ್ರಿಯಾಗಿ ಆಯ್ಕೆಯಾದ ಬಸಪ್ಪ ದಾನಪ್ಪ ಜತ್ತಿ ಅವರೂ ಚನ್ನಬಸಪ್ಪ ಅಂಬಲಿ ಅವರ ಶಿಷ್ಯರೇ.

ರಾಜಕೀಯದ ಏಳುಬೀಳುಗಳೇನೇ ಇರಲಿ, ಆ ಕಾಲದ ಕರ್ನಾಟಕದ ಎಲ್ಲ ರಾಜಕಾರಣಿಗಳಿಗಿಂತ ತುಂಬಾ ಎತ್ತರಕ್ಕೆ ಬೆಳೆದವರು ನಿಜಲಿಂಗಪ್ಪ.

ಯಾವ ಅಧಿಕಾರವೂ ಇಲ್ಲದೇ, ಸ್ಥಾನಮಾನವೂ ಇಲ್ಲದೇ ಇದ್ದಾಗ ಗಾಂಧಿನಗರದ ಕರ್ನಾಟಕ ಫಿಲಂಸ ಕಾರ್ಯಾಲಯದಲ್ಲಿ ಪತ್ರಿಕಾಗೋಷ್ಠಿ ನಡೆಸಿದಾಗ ಸರಳವಾಗಿ ನಡೆದುಕೊಳ್ಳುತ್ತಿದ್ದಂತೆಯೇ ವಿಧಾನಸೌಧದ ಮೂರನೆಯ ಮಹಡಿಯಲ್ಲಿ, ದೆಹಲಿಯ ಜಂತರ ಮಂತರ್‌ನಲ್ಲಿ ಪತ್ರಿಕಾ ಗೋಷ್ಠಿಯಲ್ಲೂ ನಡೆದುಕೊಳ್ಳುತ್ತಿದ್ದರು.

ಸಂವಿಧಾನ ರಚನಾ ಸಭೆಯ ಸದಸ್ಯರಾಗಿದ್ದ ನಿಜಲಿಂಗಪ್ಪ ಒಂದು ರೀತಿಯಲ್ಲಿ ಸಂವಿಧಾನದ ಶಿಲ್ಪಿಗಳಲ್ಲಿ ಒಬ್ಬರು. ಅವರು ಕೆಲವು ಸಮಿತಿಗಳ ಸದಸ್ಯರಾಗಿ ಆಗ ಮಾಡಿದ ಕೆಲಸ ಅನೇಕರಿಗೆ ಗೊತ್ತಿಲ್ಲ.

ಕರ್ನಾಟಕದ ಏಕೀಕರಣಕ್ಕಾಗಿ ನಿಜಲಿಂಗಪ್ಪ ದೆವ್ವ ಹಿಡಿದಂತೆಯೇ ಓಡಾಡಿದರು. ರಾಜ್ಯದ ಉದ್ದಗಲಕ್ಕೂ ತಿರುಗಾಡಿದರು. ಎಲ್ಲಿಯ ಬಸವಕಲ್ಯಾಣ, ಎಲ್ಲಿಯ ಕೊಳ್ಳೇಗಾಲ. ಎಲ್ಲ ಕಡೆ ಅವರ ತಿರುಗಾಟವಿತ್ತು.

ಕರ್ನಾಟಕದ ಏಕೀಕರಣವಾದಾಗ, ಮುಖ್ಯಮಂತ್ರಿ ಸ್ಥಾನಕ್ಕೆ ನಿಜಲಿಂಗಪ್ಪ ಅವರನ್ನು ಬಿಟ್ಟು ಬೇರೆ ಹೆಸರೇ ಕೇಳಿ ಬರಲಿಲ್ಲ. ಅಂತಹವರನ್ನೂ ಸೋಲಿಸುವುದು ಕೆಲವರಿಗೆ ಸಾಧ್ಯವಾಯಿತು. ಅದು ಪಿತೂರಿಯ ಮಹಿಮೆ.

೧೯೫೭ರ ಚುನಾವಣೆಯಲ್ಲಿ ನಿಜಲಿಂಗಪ್ಪ ಗೆದ್ದಿದ್ದು. ಮೊಳಕಾಲ್ಮುರು ಕ್ಷೇತ್ರದಿಂದ. ಆಗಲೂ ಮುಖ್ಯಮಂತ್ರಿ ಸ್ಥಾನಕ್ಕೆ ಸ್ಪರ್ಧೆ ಇರಲಿಲ್ಲ. ಆದರೆ ೧೯೫೮ರ ಮೇ ೮-೧೦ರ ನಡುವಣ ದಿನಗಳಲ್ಲಿ ಸಾಹುಕಾರ್ ಚೆನ್ನಯ್ಯ, ಚನ್ನಬಸಪ್ಪ ಅಂಬಲಿ, ತಾಳಕೆರೆ ಸುಬ್ರಹ್ಮಣ್ಯ ಅವರೆಲ್ಲ ಸೇರಿ ನಿಜಲಿಂಗಪ್ಪನವರನ್ನು ಇಳಿಸಿ ಜತ್ತಿ ಅವರನ್ನು ಗದ್ದುಗೆಗೆ ಏರಿಸಿದರು.

ಆಗ ನಿಜಲಿಂಗಪ್ಪ ಶಾಸಕರನ್ನು ಒಂದು ಮಾತು ಕೇಳಿದ್ದರೆ ಅವರ ಬೆಂಬಲ ಸಿಗುತ್ತಿತ್ತು. ಆದರೆ ಕೇಳಲಿಲ್ಲ. ಅಧಿಕಾರ ಕಳೆದುಕೊಂಡ ಸಂಜೆಯ ಪತ್ರಿಕಾಗೋಷ್ಠಿಯಲ್ಲೂ ಅವರ ಮುಖದ ಮೇಲಿನ ಮುಗುಳ್ನಗೆ ಮಾಯವಾಗಲಿಲ್ಲ. ಆ ದಿನ ಅವರು ಆಡಿದ ಒಂದು ಮಾತು.

ಹೊಸ ರಾಜಕೀಯದಲ್ಲಿ ನಾನು ಕಣ್ಣು ಬಿಡುವಂತೆ ಆಗಿದೆ. ಆ ವರಸೆ ಅಲ್ಲಿಗೇ ನಿಲ್ಲಲಿಲ್ಲ. ೧೯೬೨ರಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದಲ್ಲಿ ನಿಜಲಿಂಗಪ್ಪ ಅವರನ್ನು ವಿಧಾನಸಭೆ ಚುನಾವಣೆಯಲ್ಲಿ ಸೋಲಿಸಲಾಯಿತು.

ಆಗಲೂ ಅವರ ಮುಖದ ಮೇಲೆ ಮುಗುಳುನಗೆ ಇದ್ದೇ ಇತ್ತು. ಅವರನ್ನು ಸೋಲಿಸಿದ ಜಿ. ಟಿ. ರಂಗಪ್ಪ ಮುಂದೆ ಕಾಂಗ್ರೆಸ್ ಸೇರಿದಾಗಲೂ ಅವರು ಬೇಡ ಅನ್ನಲಿಲ್ಲ.

ಮತ್ತೆ ಮುಖ್ಯಮಂತ್ರಿಯಾದರು. ಎರಡನೇ ಇನ್ನಿಂಗ್ಸ್‌ನಲ್ಲಿ ಮೊದಲಿನಷ್ಟು ಅಮಾಯಕ ರಾಗಿರಲಿಲ್ಲ. ರಾಜಕೀಯದ ಪಟ್ಟುಗಳನ್ನು ಕಲಿತಿದ್ದರು. ೧೯೬೭ರ ಚುನಾವಣೆಯ ಅನಂತರವೂ ಮುಖ್ಯಮಂತ್ರಿಯಾಗಿ ಆಯ್ಕೆಯಾದರೂ ಪರಿಸ್ಥಿತಿಯ ಪಿತೂರಿಗೆ ಸಿಕ್ಕಿಬಿದ್ದು ಕಾಂಗ್ರೆಸ್ ಅಧ್ಯಕ್ಷರೂ ಆದರು. ಫರೀದಾಬಾದ್ ಕಾಂಗ್ರೆಸ್ ಅಧಿವೇಶನದಲ್ಲಿ ನಿಜಲಿಂಗಪ್ಪ ಅಧ್ಯಕ್ಷ ಭಾಷಣ ಮಾಡುವ ಸಮಯದಲ್ಲೇ ಚಪ್ಪರಕ್ಕೆ ಬೆಂಕಿ ಬಿತ್ತು. ಮುಂದೆ ಕಾಂಗ್ರೆಸ್ಸಿನಲ್ಲೂ ಬೆಂಕಿ ಹತ್ತಿಕೊಂಡಿತು.

ನೆಹರೂ ಸತ್ತಾಗ, ನಿಜಲಿಂಗಪ್ಪ ಪ್ರಧಾನಿ ಸ್ಥಾನಕ್ಕೆ ಮೊರಾರ್ಜಿ ದೇಸಾಯಿ ವಿರುದ್ಧ ಲಾಲ್‌ಬಹದ್ದೂರ್ ಶಾಸ್ತ್ರಿ ಅವರನ್ನು ಬೆಂಬಲಿಸಿದ್ದರು. ಆಗ ಅದೇನೂ ದೊಡ್ಡದಲ್ಲ. ಆದರೆ ಶಾಸ್ತ್ರಿ ಸತ್ತಾಗ ಮೊರಾರ್ಜಿ ವಿರುದ್ಧ ಇಂದಿರಾಗಾಂಧಿಯನ್ನು ನಿಜಲಿಂಗಪ್ಪ - ಕಾಮರಾಜ್ ಇಬ್ಬರೂ ಬೆಂಬಲಿಸಿದರು. ಅದೇ ನಿರ್ಣಾಯಕವಾಯಿತು.

ಇಂದಿರಾಗಾಂಧಿಯ ಮಹತ್ತ್ವಾಕಾಂಕ್ಷೆ ಹಾಗೂ ಅವರ ತಂತ್ರಗಾರಿಕೆಯ ಆಳ ನಿಜಲಿಂಗಪ್ಪ ಅವರಂತಹವರಿಗೆ ಅರ್ಥ ವಾಗುವಂತಹದ್ದಲ್ಲ. ೧೯೬೯ರಲ್ಲಿ ಕಾಂಗ್ರೆಸ್ ಹೋಳಾಯಿತು. ರಾಷ್ಟ್ರಪತಿ ಸ್ಥಾನಕ್ಕೆ ಪಕ್ಷ ಆರಿಸಿದ ಅಭ್ಯರ್ಥಿ ನೀಲಂ ಸಂಜೀವರೆಡ್ಡಿ ಅವರನ್ನು (ಅವರ ನಾಮಪತ್ರಕ್ಕೆ ಸಹಿ ಹಾಕಿದ್ದರೂ) ಪ್ರಧಾನಿ ಇಂದಿರಾಗಾಂಧಿ ಸೋಲಿಸಿದ್ದರು (ಗಿರಿಯವರಿಗೆ ಬೆಂಬಲ ನೀಡಿ).

ನಿಜಲಿಂಗಪ್ಪ ಅದನ್ನು ಕೊನೆಯವರೆಗೂ ಮರೆಯಲಿಲ್ಲ.

ಸುಮಾರು ೧೯೮೫ರ ವೇಳೆಗೆ ನಿಜಲಿಂಗಪ್ಪ ರಾಜಕೀಯದಿಂದ ನಿವೃತ್ತರಾದರು. ಆದರೆ ಸಾರ್ವಜನಿಕ ಜೀವನದಿಂದ ನಿವೃತ್ತರಾಗಲಿಲ್ಲ.

ಜನತಾ ಪಕ್ಷದಲ್ಲಿನ ಭ್ರಷ್ಟಾಚಾರ, ಜಾತೀಯತೆ, ಗುಂಪುಗಾರಿಕೆ ಅವರನ್ನು ಧೃತಿಗೆಡಿಸಿತ್ತು. ೧೯೮೮ರಲ್ಲಿ ಬಾಳಸಂಗಾತಿ ಮುರಿಗೆಮ್ಮ ಅಗಲಿದಾಗ ಜರ್ಝರಿತರಾದರು. ಮುಂದೆ ಆತ್ಮೀಯ ಗೆಳೆಯ ಎಂ. ವಿ. ರಾಮರಾಯರು ನಿಧನರಾದಾಗ 'ಇಂದು ಅವನ್ ನಾಳೆ ನಾನ್' ಎಂದಿದ್ದರಂತೆ.

ನಿಜಲಿಂಗಪ್ಪ ಮುಖ್ಯಮಂತ್ರಿಯಾಗಿ ಕಾರ್ಲ್‌ಟನ್ ಭವನ, ಬಾಲಬ್ರೂಯಿಯಲ್ಲಿ ಕೆಲಸ ಮಾಡಿದ್ದಾರೆ. ಕುಮಾರಕೃಪದಲ್ಲಿ ಅತಿಥಿಯಾಗಿ ಉಳಿದುಕೊಂಡು ಕೆಲಸ ಮಾಡಿದ್ದಾರೆ.

ಆದರೆ ಅವರ ಜೀವನದಲ್ಲಿ ಅವರ ಪಾಲಿಗೆ ತುಂಬಾ ಆಕರ್ಷಕವಾದ ಆಸನ, ಚಿತ್ರದುರ್ಗದಲ್ಲಿನ ಅವರ ಮನೆಯ ತೆರೆದ ವೆರಾಂಡದ ಬೆತ್ತದ ಕುರ್ಚಿ.

ಆ ಬೆತ್ತದ ಕುರ್ಚಿ ಈಗ ಖಾಲಿ! 



# ಎಸ್. ನಿಜಲಿಂಗಪ್ಪ ಅವರೊಂದಿಗೆ ಸಂದರ್ಶನ

ಡಿ. ಎಸ್. ನಾಗಭೂಷಣ

**ಡಿ. ಎಸ್. ನಾಗಭೂಷಣ :** ಈ ತಿಂಗಳ ನಮ್ಮ 'ಅನುಭವ ಪ್ರಪಂಚ' ಕಾರ್ಯಕ್ರಮದ ಅತಿಥಿ ರಾಷ್ಟ್ರದ ಅತ್ಯಂತ ಹಿರಿಯ ರಾಜಕೀಯ ಮುತ್ಸದ್ದಿಗಳಲ್ಲೊಬ್ಬ ರಾದಂತಹ ಎಸ್. ನಿಜಲಿಂಗಪ್ಪ ಅವರು. ಎಸ್. ನಿಜಲಿಂಗಪ್ಪ ಅವನರ್ನು ನಮ್ಮ ಕೇಳುಗರಿಗೆ ವಿವರವಾಗಿ ಪರಿಚಯ ಮಾಡಿಕೊಡುವ ಅಗತ್ಯ ಇಲ್ಲ. ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾಗಿ, ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಮುಂದಾಳುಗಳಾಗಿ, ರಾಜ್ಯದ ಮುಖ್ಯಮಂತ್ರಿಯಾಗಿ ಇವರು ಎಲ್ಲರಿಗೂ ಚಿರಪರಿಚಿತರು. ಇದು ಇವರ ಬಹಿರ್ಮುಖ. ಇವರ ಅಂತರ್ಮುಖ ವನ್ನು ಪರಿಚಯ ಮಾಡಿಕೊಳ್ಳುವ ಉದ್ದೇಶ ನಮ್ಮ ಇವತ್ತಿನ ಮಾತುಕತೆಯ ಹಿಂದಿದೆ.

ನಮಸ್ಕಾರ ನಿಜಲಿಂಗಪ್ಪನವರೇ.

**ನಿಜಲಿಂಗಪ್ಪನವರು :** ನಮಸ್ಕಾರ.

**ನಾ :** ತಮಗೆ ೯೭ ವರ್ಷ ಈಗ. ಈ ೯೭ ವರ್ಷದ ಅವಧಿ ತುಂಬಾ ಚಿಕ್ಕದು ಅನ್ನುತ್ತೋ ಅಥವಾ ತುಂಬಾ ಜಾಸ್ತಿಯಾಯ್ತು ಅನ್ನುತ್ತೋ?

**ನಿ :** ಜೀವನಕ್ಕೆ ಅಂತ್ಯ ಇಲ್ಲ. ಆದಿ ಇಲ್ಲ. ಅದು ನಡೀತಲೇ ಇರಬೇಕು. ೯೭ವರ್ಷ ದೊಡ್ಡದು ಅಂತ ನನಗೇನು ಅನ್ನೋದಿಲ್ಲ.

**ನಾ :** ಯಾಕಂದ್ರೆ ಒಂದ್ಮಾತಿದೆ, ವಯಸ್ಸಾಗೋದು ದೇಹಕ್ಕೇ ಹೊರತು ಮನಸ್ಸಿಗಲ್ಲಾಂತ.

**ನಿ :** ೯೭ ವರ್ಷ ಏನೋ ನಡೀತಾ ಇದೆ. ವಯಸ್ಸಾಗ್ತಾ ಇದೆ, ಮಾನವ ಕಲ್ಪನೆಯಿಂದ. ಆದರೆ ನನ್ನ ಮನಸ್ಸೇನೋ ಎಳೇದಾಗೆ ಇದೆ. ಅದಕ್ಕೆ ವಯಸ್ಸೇನಾಗಿಲ್ಲ.

ಇನ್ನೂ ಕಲೀಬೇಕು, ವಿಚಾರ ತಿಳ್ಕೋಬೇಕು, ಏನಾದ್ರು ಯೋಜನೆ ಮಾಡ್ಬೇಕು ಅಂತ ಇದ್ದೀನಿ. ಆ ದೃಷ್ಟಿಯಿಂದ ನಾನು ಚಿಕ್ಕೋನೇ.

ನಾ : ಬಹಳಷ್ಟು ಜನ ತತ್ವಜ್ಞಾನಿಗಳು ಸಂಸಾರ ದುಃಖಮಯ ಅಂತ್ಹೇಳ್ತಾರೆ. ಸಂಸಾರ ಮೂಲಭೂತವಾಗಿ ಕಷ್ಟದಾಯಕವಾದದ್ದು, ದುಃಖದಾಯಕವಾದದ್ದೂಂತ. ನಿಮ್ಮ ಒಟ್ಟು ೯೭ ವರ್ಷಗಳ ಜೀವನದಲ್ಲಿ ನಿಮ್ಗೇನನ್ನುತ್ತೆ.

ನಿ : ಸಂಸಾರ, ಹ್ಯಾಗೆ ಜೀವನ ನಡೆಸಿದ್ರೆ ಹಾಗಿರ್ತದೆ. ನನ್ನ ದೃಷ್ಟಿಯಲ್ಲಿ ಸಂಸಾರ ಸುಖಮಯವೇ. ಕಷ್ಟ ಬರ್ತದೆ. ಆದ್ರೂ ಎಲ್ಲ ಮನುಷ್ಯ ನೋಡೋದ್ರಲ್ಲಿ, ಜೀವನದ ಮೇಲೆ ಅವನ ದೃಷ್ಟಿ ಇರೋದ್ರಲ್ಲಿರ್ತದೆ. ನನಗೆ ಸಂಸಾರ ಬಹಳ ಸುಖಮಯವಾಗಿ ಕಂಡಿದೆ.

ನಾ : ನೀವು ಬಹಳ ಬಡ ಕುಟುಂಬದಲ್ಲಿ ಹುಟ್ಟಿದವರು. ಬಡತನ ನಿಮ್ಮನ್ನ ಕಾಡ್ಲಿಲ್ವಾ ಬಾಲ್ಯದಲ್ಲಿ?

ನಿ : ಬಡತನದಲ್ಲಿ ಹುಟ್ಟಿದೆ, ಬಡತನ ನೋಡಿದ್ದೇನೆ. ಐಶ್ವರ್ಯವನ್ನು ನೋಡಿದ್ದೇನೆ. ನನಗೆ, ಬಡತನ ಇರಬಾರದು, ಇಲ್ದೇ ಇರುವಂತೆ ಮಾಡೋದಕ್ಕೆ ಅವಕಾಶ ಇದೆ ಅನ್ನುತ್ತೆ.

ನಾ : ತಾವು ಬಾಲ್ಯದಲ್ಲಿ ಬಡತನವನ್ನು ಕಂಡ್ರಿ. ನಂತರ ಜೀವನದ ಹಲವು ಉನ್ನತ ಮೆಟ್ಟಿಲುಗಳನ್ನು ಹತ್ತುತ್ತಾ ಹೋದ್ರಿ. ಜೀವನದ ಅನೇಕ ಕಷ್ಟ-ಸುಖಗಳನ್ನು ನೋಡಿದ್ದೀರಿ. ನೀವು ಬಾಲ್ಯದಲ್ಲಿ ಏನಾಗ್ಬೇಕೂಂತ ಬಯಸಿದ್ರಿ?

ನಿ : ನಾನು ವಿದ್ಯಾರ್ಥಿಯಾಗಿದ್ದಾಗ್ಲೇ ಒಂದು ಸ್ಪಷ್ಟವಾದ ಅಭಿಪ್ರಾಯಕ್ಕೆ ಬಂದಿದ್ದೆ. ಲಾಯರ್ ಆಗ್ಬೇಕೂ ಅಂತ. ನನಗೆ ಮ್ಯಾತ್‌ಮ್ಯಾಟಿಕ್ಸ್‌ನಲ್ಲಿ ಸೆಂಟ್‌ಪರ್ಸೆಂಟ್ ಮಾರ್ಕ್ಸ್ ಬರ್ತಿತ್ತು. ಸೈನ್ಸ್‌ನಲ್ಲೂ ಶೇಕಡಾ ತೊಂಭತ್ತೈದರವರೆಗೂ ಮಾರ್ಕ್ಸ್ ಬರ್ತಾ ಇತ್ತು. ನಾನು ಇಂಜಿನಿಯರ್ ಆಗ್ಬೇಕೂಂತ್ಹೇಳಿ ಅನೇಕರು ಅಪೇಕ್ಷೆ ಮಾಡಿದ್ರು. ಚೀಫ್ ಜಸ್ಟೀಸ್ ಮಹದೇವಯ್ಯನವರು ನೀನು ಇಂಜಿನಿಯರ್ ಕಾಲೇಜ್ ಸೇರು ಅಂದ್ರು, ನಾನು ಅವರಿಗ್ಹೇಳ್ದೆ, ನಾನು ಮನಸ್ಮಾಡಿದ್ದೇನೆ, ನಾನು ಲಾಯರ್ ಆಗ್ಬೇಕೂಂತ, ನಾ ಲಾಯರೇ ಆಗ್ತೀನಿ ಅಂತ. ನನ್ನ ಮನಸ್ಸಿನ ಸ್ಥಿತಿ ಹಾಕಿತ್ತು.

ನಾ : ಹಿಂದೆ ಲಾಯರ್‌ಗಳೂ ಅಂತಂದ್ರೆ ಹಣ ಮಾಡೋ ವೃತ್ತಿ, ದೊಡ್ಡ ವೃತ್ತಿ ಅಂತಿತ್ತು. ಆ ದೃಷ್ಟಿಯಿಂದ ಏನಾದ್ರು ಲಾಯರ್ ಆಗ್ಬೇಕೂ ಅಂತ ಆಸೆ ಪಟ್ರಾ ನೀವು?

ನಿ : ಹಣ, ಹಣ ಸಂಪಾದ್ನೆ ಮಾಡಬೇಕು, ಶ್ರೀಮಂತನಾಗ್ಬೇಕೂ ಅನ್ನೋ ದೃಷ್ಟಿ ನನಗೆ ಯಾವಾಗ್ಲೂ ಇಲ್ಲ. ಆಗ್ಲೂ ಇರ್ಲಿಲ್ಲ, ಈಗ್ಲೂ ಇಲ್ಲ.

ನಾ : ಸ್ವಾತಂತ್ರ್ಯ ಹೋರಾಟದ ಕಡೆ ನಿಮ್ಮ ಗಮನ ಹರಿದದ್ದು ಯಾತಕ್ಕೆ ? ಅದರ ಹಿನ್ನೆಲೆ ಏನೂ ಹೇಳ್ತೀರಾ?

ನಿ : ಸ್ವಾತಂತ್ರ್ಯ-ಅದರ ಗಮನ ಹರಿದದ್ದು ಒಂದು ವರ್ಷದ ಮಾತಲ್ಲ. ಹೈಸ್ಕೂಲಿನಲ್ಲಿರುವಾಗ್ಲೇಸೇ ಅನಿಬೆಸೆಂಟ್, ಅದೇ ರೀತಿಯಲ್ಲಿ ತಿಲಕ್ ಮಹಾರಾಜ್ ಅವರ ಜೀವನದ ಧಾಟಿ, ಅವರು ಮಾಡಿದ ಕೆಲಸಗಳು, ನಂತರ ಗಾಂಧಿಯವರು ಬಂದು ತೋರಿಸಿದ ಹೊಸ ದಾರಿ -

ಇವೆಲ್ಲವೂ ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿದ್ದು. ಆದ್ದರಿಂದ ಮೊದಲಿಂದ್ಲೂ ನನಗೆ ಸ್ವಾತಂತ್ರ್ಯದ ವಿಚಾರದಲ್ಲಿ ಆಸೆ ಇತ್ತು.

ನಾ : ನೀವು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಥಮವಾಗಿ ಭಾಗವಹಿಸಿದ್ದು ಯಾವಾಗ? ಯಾವ ಘಟನೆ ಮೂಲಕ?

ನಿ : ಸಕ್ರಮವಾಗಿ ಭಾಗವಹಿಸಿದ್ದು ಲಾಯರ್ ಆದ ಸುಮಾರು ಹತ್ತು ವರ್ಷದ ಮೇಲೆ, ೧೯೩೯ನೇ ಇಸ್ವಿ. ಅಷ್ಟೊತ್ಗಾಗಿ ನಾನು ಕಾಂಗ್ರೆಸ್ಸಿನ, ಮೈಸೂರು ಕಾಂಗ್ರೆಸ್ಸಿನ ಮುಖಂಡನಾಗಿದ್ದೆ, ಸಾಕಷ್ಟು ಪ್ರಚಾರ ಮಾಡಿದ್ದೆ. ಜನಗಳನ್ನು ಕಾಂಗ್ರೆಸ್ಸಿಗೆ ಸೇರ್ಸಿದ್ದೆ. ಚಿತ್ರದುರ್ಗ ಡಿಸ್ಟ್ರಿಕ್ಟ್ ಕಾಂಗ್ರೆಸ್ ಸಾಕಷ್ಟು ಬಲವಾಗಿತ್ತು. ಅಲ್ಲಿ ೧೯೩೯ನೇ ಇಸ್ವಿಯಲ್ಲಿ ನಾವೇ ಪಾಸಿಟೀವ್ ಆಗಿ ಮುಂದಕ್ಹೋಗಿ ಕೆಲ್ಸ ಮಾಡ್ಬೇಕು, ಹಾಗಂತ್ಹೇಳಿ ಒಂದು ತೀರ್ಮಾನ ಚಿತ್ರದುರ್ಗ ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯವರು ಮಾಡಿದ್ರು. ಎಸ್. ವಾಸುದೇವರಾವ್ ಅಂತ್ಹೇಳಿ ಇದ್ರು. ಅವ್ರು ನಮ್ಗೆಲ್ಲಾ ಒಂಥರಾ ಮುಖಂಡ್ರಾಗಿದ್ರು, ನನ್ನ ಸೆಕ್ರೆಟ್ರಿಯಾಗಿದ್ರು. ಅವ್ರು ನಾನು ಎಲ್ಲಾ ಸೇರ್ಕೊಂಡು ನಾವು ಸರ್ಕಾರದ ಕಾನೂನನ್ನು ಮುರಿದು ಹೋಗ್ಬೇಕು, ಸತ್ಯಾಗ್ರಹ ಮಾಡ್ಬೇಕು ಅಂತ ತೀರ್ಮಾನ ಮಾಡಿದ್ವು.

ನಾ : ನೀವು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸೋ ಹೊತ್ತಿಗೆ ನಿಮ್ಗೆ ಮದ್ವೆಯಾಗಿತ್ತಾ?

ನಿ : ಮದ್ವೆಯಾಗಿತ್ತಲ್ಲಾ.

ನಾ : ನೀವು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದ್ರಿಂದ ನಿಮ್ಮ ವೈಯಕ್ತಿಕ ಅಥವಾ ಕೌಟುಂಬಿಕ ಜೀವನಕ್ಕೆ ತೊಂದ್ರೆ ಆಗ್ಲಿಲ್ವಾ?

ನಿ : ಆಗ ಕಷ್ಟ ಆಯ್ತು. ಎಷ್ಟು ಸುಖವಾಗಿದ್ರೋ ನನ್ನ ಸಂಸಾರ ಅಷ್ಟು ಕಷ್ಟಕ್ಕೊಳಗಾಗಬೇಕಾಗಿ ಬಂತು.

ನಾ : ಇದೆಲ್ಲಾದ್ರ ಬಗ್ಗೆ ನಿಮ್ಮ ಪತ್ನಿಯ ಪ್ರತಿಕ್ರಿಯೆ ಏನಿತ್ತು?

ನಿ : ನನ್ನ ಪತ್ನಿ ನನಗೆ ಗುರು ಇದ್ದಂಗೆ. ಒಂದ್ಹೇಳ್ತೀನಿ ಆಕೆ ವಿಚಾರ. ನನ್ನ ಅರೆಸ್ಟ್ ಮಾಡೋದಕ್ಕೆ ಪೋಲೀಸ್ನೋರ್ಗೆ ಧೈರ್ಯ ಬರ್ಲಿಲ್ಲ ಹಗಲೊತ್ತು. ಬೆಳಗ್ಗೆ ಸುಮಾರು ೪-೫ ಗಂಟೆಗೆ ಬಂದು ಬಾಗಿಲ ತಟ್ಟಿದರು. ನನಗೆ ಗೊತ್ತಿತ್ತು. ಅರೆಸ್ಟ್ ಮಾಡ್ತಾರೆ ಅಂತ. ನನ್ನ ಹೆಂಡ್ತೀನ ಕೇಳ್ದೆ, ನೀನು, ನಿನ್ನ ಅತ್ತೆ ನಿನ್ನ ಮಕ್ಳು ಬಹಳ ಸುಖವಾಗಿದ್ದೀರಿ, ಕಷ್ಟ ಇಲ್ಲ. ಆದ್ರೆ ಇವೊತ್ತು ನಾನು ದುಡ್ಡಿಟ್ಟಿಲ್ಲ. ಜೈಲ್ಗೋಗ್ತೀನಿ, ಕಷ್ಟಕ್ಕೊಳ್ಳಗಾಗ್ಬೇಕಾಗ್ಬರ್ತದೆ. ನಿನ್ನ ಅಭಿಪ್ರಾಯ ಏನೂ ಅಂತ ಕೇಳ್ದೆ. ಆ ಮಹತಾಯಿ ಹೇಳಿದ್ಳು, ನೀವು ಗಾಂಧಿ ಪರೀಕ್ಷೆ ಕಟ್ಟಿದ್ದೀರಿ, ಅದ್ರಲ್ಲಿ ಪಾಸಾಗ್ಬೇಕೂಂತ. ಅದಕ್ಕಿಂತ ದೊಡ್ಡ ಆಶೀರ್ವಾದ ಏನ್‌ಬೇಕಾಗಿತ್ತು ನನಗೆ...

ನಾ : ಸ್ವಾತಂತ್ರ್ಯ ಹೋರಾಟದಲ್ಲಿ ನೀವೂ, ಅನೇಕ ಜನ ಭಾಗವಹಿಸಿ ಸ್ವಾತಂತ್ರ್ಯ ತಂದ್ರು. ಇಷ್ಟು ದಿವಸ ಆದ್ಮೇಲೆ ಸುಮಾರು ೫೨-೫೩ ವರ್ಷ ಆಯ್ತು ಸ್ವಾತಂತ್ರ್ಯ ಬಂದು - ನೀವು ಹಿರಿಯ ರಾಜಕಾರಣಿಯಾಗಿ ಅನೇಕ ರಾಜಕೀಯ ಹೋರಾಟದಲ್ಲಿ ಭಾಗವಹಿಸಿದ್ರಿ, ನಂತರ ಆಡಳಿತಗಾರರಾಗಿ - ಈಗ ಸ್ವತಂತ್ರ ಪ್ರಜೆಯಾಗಿ ನಿಂತು ನೋಡ್ದಾಗ ಸ್ವಾತಂತ್ರ್ಯ ಬಂದು ಸಾರ್ಥಕ ಆಯ್ತು ಅಂತ ಅನ್ಸುತ್ತಾ ನಿಮ್ಗೆ?

ನಿ : ನೋಡಿ, ಒಂದ್ರೀತಿಯಲ್ಲಿ ಸ್ವತಂತ್ರರಾದ್ವು. ಬ್ರಿಟೀಷ್ ಸರ್ಕಾರ ಹೋಯ್ತು, ನಮ್ಮ ಸರ್ಕಾರ ನಮಗ್ಬಂತು. ನಾವೇ ನಮ್ಮ ಸರ್ಕಾರ ಮಾಡಿದ್ವಿ. ಆದ್ರೆ ಕಾಂಗ್ರೆಸ್ಸಿನ ಧೋರಣೆ ಏನಿತ್ತು? ಆದರ ತೀರ್ಮಾನಗಳೇನಿದ್ವು? ಏನ್ಮಾಡ್ಬೇಕೂಅಂತ್ಹೇಳಿ ಗಾಂಧಿಯವರ ಆಸೆ ಇತ್ತು? ಕಾಂಗ್ರೆಸ್ಸಿನ ಉದ್ದೇಶ ಏನು ಇತ್ತು, ಅದು ನೆರವೇರ್ಲಿಲ್ಲ. ಅದು ನೆರವೇರ್ಲಿಲ್ಲವಲ್ಲ ಅನ್ನೋ ದುಃಖ ನನಗೆ ಸಾಕಷ್ಟಿದೆ.

ನಾ : ನೀವು ಕರ್ನಾಟಕದ ಏಕೀಕರಣಕ್ಕೋಸ್ಕರ ಹೋರಾಡಿದ್ರಿ, ಅದರ ಮುಂದಾಳತ್ವ ವಹಿಸಿದ್ರಿ. ಕರ್ನಾಟಕ ಏಕೀಕರಣವಾಯ್ತು, ಕನ್ನಡ ನಾಡೆಲ್ಲ ಒಂದಾಯ್ತು. ಅದ್ರೂ ಕರ್ನಾಟಕದ ಕೆಲವು ಭಾಗಗಳು ಬಿಟ್ಹೋಗಿದ್ವು ಕರ್ನಾಟಕವನ್ನ ಅಂತ ಕೂಡ ದುಃಖ ಇದೆ. ಜೊತೆಗೆ ಇಷ್ಟು ವರ್ಷಗಳಾದ ನಂತರ ಮತ್ತೆ ಕರ್ನಾಟಕವನ್ನ ವಿಭಜಿಸುವ ಮಾತುಕೂಡ ಕೇಳಿಬರ್ತಾ ಇದೆ. ಇದರ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

ನಿ : ಇದಕ್ಕೆ ಸಕಾರಣಗಳು ಇಲ್ವೇಇಲ್ಲ. ವಿಭಜನೆ ಆಗ್ಬೇಕೂ ಅನ್ನೋದಕ್ಕೆ ಯಾವ ಸಕಾರಣವೂ ಇಲ್ಲ. ಸ್ವಾರ್ಥ, ಯಾರೋ ಕೆಲವರು ಜನಗೊಳು, ಮುಖಂಡ್ರೂ ತಮಗೆ ಸಾಕಷ್ಟು ಸ್ಥಿತಿ ಸಿಕ್ಕಲಿಲ್ಲಾ, ಸ್ಥಾನ ಸಿಕ್ಕಲಿಲ್ಲಾ ಅನ್ನೋಕಾರಣದಿಂದ ಅಂತ ಕಾಣುತ್ತೆ. ನನ್ನ ದೃಷ್ಟಿಯಲ್ಲಿ ಯಾರನ್ನು ನಿರ್ಲಕ್ಷ್ಯ ಮಾಡಿಲ್ಲ.

ನಾ : ಆದ್ರೆ ಪ್ರಾದೇಶಿಕ ಅಸಮಾನತೆ ತುಂಬಾ ಆಗಿದೆ, ಉತ್ತರ ಕರ್ನಾಟಕದಲ್ಲಿ ಜಾಸ್ತಿ ಅಭಿವೃದ್ಧಿ ಆಗಿಲ್ಲ, ಕೊಡಗಿನಲ್ಲಾಗಿಲ್ಲ ಅನ್ನೋ ಒಂದು ಕೂಗು ಕೇಳಿ ಬರ್ತಾ ಇದೆ.

ನಿ : ಅವರು ಹೇಳೋದಕ್ಕೆ ಕಾರಣವೇ ಇಲ್ಲ. ಏನಾಗ್ಬೇಕಾಗಿತ್ತೂ ಅಂತ ಹೇಳ್ಲಿ.

ನಾ : ಉತ್ತರ ಕರ್ನಾಟಕದಲ್ಲಿ ನೀರಾವರಿ ಸೌಲಭ್ಯಗಳೇ ದೊರಕಿಲ್ಲ, ಕೃಷ್ಣಾ ಯೋಜನೆ ಇನ್ನೂ ಪೂರ್ತಿಗೊಂಡಿಲ್ಲ, ಹತ್ತಾರು ವರ್ಷಗಳಾದ್ರೂ ಕೂಡಾನು.

ನಿ : ನೀರಾವರಿ ದೊರಕಿಲ್ಲ ಅಂತಕ್ಕಂತ ಮಾತು ಶುದ್ಧ ಸುಳ್ಳು. ಅಪ್ಪಟ ಸುಳ್ಳು. ಅವರಿಗೆ ನೀರಾವರಿ ಸಾಕಷ್ಟು ನಾನೇ ಮಾಡ್ಸಿದ್ದೀನಿ. ನೀರಾವರಿ ನಿರ್ಲಕ್ಷ್ಯ ಮಾಡಿದೆ ಅಂತ್ಹೇಳ್ತಕ್ಕಂತ ಮಾತು ಶುದ್ಧ ಸುಳ್ಳು.

ನಾ : ನಿಮ್ಗೆ ತಿಳಿದ್ಹಾಗೆ ಕರ್ನಾಟಕವನ್ನು ಒಗ್ಗೂಡಿಸಿದ ಶಕ್ತಿಗಳಲ್ಲಿ ಕನ್ನಡ ಭಾಷೆ ಕೂಡ ಒಂದು. ನೀವೂ ಕೂಡ ಕನ್ನಡಾಭಿಮಾನಿ. ಆದ್ರೆ ಈ ಹೊತ್ತು ಕನ್ನಡದ ಸ್ಥಿತಿ ಏನಾಗಿದೆ ಅಂತಂದ್ರೆ, ಮನೆಯ ಒಳಗಡೆ ಕೂಡ ಕನ್ನಡ ಉಳಿಯದಂತ ಸ್ಥಿತಿ ಉಂಟಾಗಿದೆ. ಹಠ ಇರೋ ಕೆಲವರನ್ನ ಬಿಟ್ರೆ, ಎಲ್ಲಾ ತಮ್ಮ ಮಕ್ಕಳನ್ನು ಇಂಗ್ಲೀಷ್ ಶಿಕ್ಷಣ ಮಾಧ್ಯಮಕ್ಕೆ ಕಳ್ಸೋದ್ರಲ್ಲಿದ್ದಾರೆ. ಎಲ್ರೂ ತಮ್ಮನ್ನ, ತಮ್ಮ ಮಕ್ಕಳನ್ನ ವಿಶ್ವಪ್ರಜೆಗಳನ್ನಾಗಿ ಮಾಡೋ ಲಹರಿಯಲ್ಲಿದ್ದಾರೆ ಅನ್ಸುತ್ತೆ. ಇದು ಯಾಕಾಯ್ತೀರೀತಿ?

ನಿ : ನಮ್ಮಲ್ಲಿರ್ತಕ್ಕಂತ ಒಂದು ದೊಡ್ಡತಪ್ಪು - ವಿದ್ಯಾಭ್ಯಾಸ ಸರ್ಕಾರಿ ನೌಕರಿಗೋಸ್ಕರ ಅಂತ. ಜ್ಞಾನಾರ್ಜನೆ, ಜೀವನದಲ್ಲಿ ಹ್ಯಾಗ್ ನಡೆಸ್ಬೇಕೂ, ಒಂದು ವೃತ್ತಿ ಮಾಡ್ಬೇಕು ಅನ್ನೋದಿಲ್ಲ. ಸರ್ಕಾರಿ ನೌಕರಿ ಶೇ. ೧.೫ ಅಷ್ಟೇ ಇರೋದು. ಆದ್ರೂನೂ ಅದು ಒಂದು ಬಂದಿದೆ ಅದು - ಅದಕ್ಕೋಸ್ಕರ.

ಇಂಗ್ಲೀಷ್ ಇಲ್ದೇ ಹೋದ್ರೆ ಸರ್ಕಾರಿ ನೌಕರಿ ಸಿಕ್ಕೋದಿಲ್ವಲ್ಲಾ? ಅದಕ್ಕೋಸ್ಕರ ವ್ಯಾಮೋಹ ಜಾಸ್ತಿ ಆಗ್ತಾ ಇದೆ. ಇನ್ನೂ ಜಾಸ್ತಿಯಾಗ್ತಾ ಇದ್ಯೇ ಹೊರತು ಕಮ್ಮಿ ಆಗ್ತಾ ಇಲ್ಲ. ಬಹಳ ತಪ್ಪು ಇದು, ಅನ್ಯಾಯ.

ನಾ : ಇದನ್ನ ಹೇಗೆ ಸರಿಪಡಿಸಬಹುದು?

ನಿ : ಜನಗಳು ವಿಚಾರ ಮಾಡ್ಬೇಕು, ಜನಗಳಲ್ಲಿ ತಿಳುವಳಿಕೆ ತರ್ಬೇಕು. ಈಗೇನೋ ಒಂದ್ಮಾಡೀದಾರಲ್ಲ, ೭ನೇ ತರಗತಿಯವರ್ಗೇನೋ ಕನ್ನಡದಲ್ಲೇ ಆಗ್ಬೇಕೂಂತ್ಹೇಳಿ. ಅದು ಒಳ್ಳೆ ಮೊದಲನೆ ಸ್ಟೆಪ್. ಅದರಂತೆ ಮುಂದೆ ನಡೆಕೊಂಡು ಹೋಗ್ಬೇಕು.

ನಾ : ಅದ್ರೆ ಸರ್ಕಾರದ ಪ್ರಯತ್ನ ಇದು. ಆದ್ರೆ ಇದ್ರ ಬಗ್ಗೆ ವಿರೋಧನೇ ಇದೆ ಬಹಳಷ್ಟು ಜನರಲ್ಲಿ.

ನಿ : ಜನಗಳಲ್ಲಿ ವಿರೋಧವಿದ್ರೆ ಆ ವಿರೋಧಕ್ಕೇನು ಬೆಲೆ ಕೊಡಬೇಕ್ಕಾದ್ದಿಲ್ಲ. ಸರ್ಕಾರ ಮಾಡಿರೋದು ಸರಿ. ಅದನ್ನೇ ಮುಂದುವರಿಸ್ಕೊಂಡು ಹೋಗ್ಬೇಕು.

ನಾ : ಇದು ಒಂದ್ರೀತಿ ಬಿಕ್ಕಟ್ಟಾದ್ರೆ ಸಮಾಜದಲ್ಲಿವತ್ತು ಈ ಬಿಕ್ಕಟ್ಟು ತುಂಬಾ ಜಟಿಲ ಸ್ವರೂಪವನ್ನು ಪಡೀತಾ ಇರೋದು ಇನ್ನೂ ಹಲವಾರು ಕಾರಣಗಳಿಂದಾಗಿ. ಉದಾಹರಣೆಗೆ ಭ್ರಷ್ಟಾಚಾರ, ಜಾತೀಯತೆ, ಇವು ನಮ್ಮ ಸಮಾಜವನ್ನು ಕೊರೆದು ತಿಂತಾ ಇವೆ ಅನ್ತಾರಲ್ಲಾ?

ನಿ : ಹೌದು, ನಿಜ ಕೊಂದು ತಿಂತಾ ಇದೆ, ಅದಕ್ಕೆ ಕಾರಣ ಸರ್ಕಾರಗಳು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು. ಯಾರ್ಯಾರ್ ತಪ್ಮಾಡ್ತಾರೋ ಅವರಿಗೆ ಶಿಕ್ಷೆ ಮಾಡ್ತಾ ಇಲ್ಲ. ವಿಚಾರಣೆಗಳನ್ನೇ ವರ್ಷಗಟ್ಟಳೆ ನಡಿಸ್ತಾರೆ, ಹೀಗಾದ್ರೆ ಹೇಗೆ?

ನಾ : ಅಲ್ಲಾ ಇದಕ್ಕೆಲ್ಲ ಕಾರಣ ಏನು ಅನ್ಸುತ್ತೆ? ನಿಮ್ಮ ಕಾಲದಲ್ಲಿ ಇಷ್ಟೊಂದು ಭ್ರಷ್ಟಾಚಾರ, ಜಾತೀಯತೆ ಇತ್ತಾ?

ನಿ : ಇಷ್ಟೊಂದು ಜಾತೀಯತೆ ಇರ್ಲಿಲ್ಲ. ಕಾರಣ ಏನೂಂದ್ರೆ ಇಲ್ಲಿ ಜಾತೀಯತೆ ಹೊಲಸಿಗೋಸ್ಕರ ಉಪಯೋಗವಾಗ್ತಾ ಇದೆ. ವಾತಾವರಣದಲ್ಲಿ ಹಾಗ್ಬಂದಿದೆ.

ನಾ : ಆದ್ರೆ ಈ ಭ್ರಷ್ಟಾಚಾರ ಮತ್ತು ಜಾತೀಯತೆಗೆ, ಕಾರಣ ಹುಡುಕ್ತಾ ಹೋದ್ರೆ - ಇದ್ದಕ್ಕಿದ್ದಂಗೆ ಆರಂಭವಾದುದ್ದಲ್ಲ. ಬಹಳ ಹಿಂದಿನಿಂದ್ಲೇ ಇದೆ. ನೆಹರೂ ಕಾಲದಲ್ಲೂ ಕೂಡ ಭ್ರಷ್ಟಾಚಾರ ಇತ್ತು. ಅವು ಸಹಿಸ್ತಾ ಇದ್ರು ಅದನ್ನ. ನಿಮ್ಮ ಕಾಲದಲ್ಲೂ ಭ್ರಷ್ಟಾಚಾರ ಇತ್ತು, ನೀವೂ ಕೂಡ ಅದನ್ನ ಸಹಿಸ್ತಾ ಇದ್ರಿ - ಅನ್ನೋ ಒಂದು ಟೀಕೆ ಕೂಡ ಇದೆ.

ನಿ : ಭ್ರಷ್ಟಾಚಾರ ನಾನು ಸಹಿಸ್ಲೂ ಇಲ್ಲ, ಜನ ತಿಳ್ಕೊಂಡಿರೋ ಅಷ್ಟು ಭ್ರಷ್ಟಾಚಾರ ನನ್ನ ಕಾಲ್ದಲ್ಲಿ ಇರ್ಲಿಲ್ಲ. ಶ್ರೀರಾಮನ ಕಾಲದಿಂದಲೂ ಭ್ರಷ್ಟಾಚಾರ ಇತ್ತು. ಇಲ್ಲಾಂತ ಹೇಳೋಕಾಗೋದಿಲ್ಲ. ಅಂದ್ರೆ ಎಷ್ಟೋ - ಬಹಳ ಕಡಿಮೆ ಇತ್ತು.

ನಾ : ಜಾತೀಯತೆ, ಭ್ರಷ್ಟಾಚಾರ ಹಿಂದೆ ಇತ್ತು. ಆದ್ರೆ ಈ ಭ್ರಷ್ಟಾಚಾರ ಜಾತೀಯತೆಯನ್ನ ಗುಟ್ಟಲ್ಲಿ ಮಾಡ್ತಾ ಇದ್ರು. ಈವೊತ್ತು ಬಹಿರಂಗವಾಗಿ ಅದೊಂದು ಸಿದ್ಧಾಂತವೇ ಆಗ್ಹೋಗ್ಬಿಟ್ಟಿದೆ.

ಭ್ರಷ್ಟಾಚಾರಿಗಳು ಯಾರಲ್ಲ ಅಂತ ಕೇಳ್ತಾರೆ, ಜಾತೀಯತೆ ಯಾರು ಮಾಡಲ್ಲ ಅಂತ ಕೇಳ್ತಾರೆ. ಆದ್ರೆ ನಿಮ್ಮ ಕಾಲದಲ್ಲಿ ನೀವು ಜಾತೀಯತೆಯನ್ನು ಪ್ರೋತ್ಸಾಹಿಸಲಿಲ್ವಾ?

ನಿ : ನಾನು ಹೇಳಿದ್ನಲ್ಲಾ, ಜಾತೀಯತೆಗೆ ನಾನು ಯಾವ ಪ್ರೋತ್ಸಾಹವನ್ನೂ ಕೊಡ್ಲಿಲ್ಲ. ಅವರೇನಾದ್ರು ಹೇಳಿದ್ರೆ ತೋರಿಸ್ಕೊಡಲಿ. ಅದು ಮೂರ್ಖತನ, ಸುಳ್ಳು. ನನ್ನ ಕಾಲದಲ್ಲಿ ಅದು ಬೆಳೀಲಿಲ್ಲ. ಅದು ಸರಿ, ಆದ್ರೆ ಈಚೆಗೆ ಬೆಳಿತಾ ಇದೆ.

ನಾ : ಈವೊತ್ತಿನ ರಾಜಕಾರಣಿಗಳಲ್ಲಿ ಎದ್ದು ಕಾಣುವಂತಹ ಕೊರತೆಗಳಾವುವು ನಿಮ್ಮ ಪ್ರಕಾರ ?

ನಿ : ಎದ್ದು ಕಾಣೋ ಕೊರತೆ, ಭ್ರಷ್ಟಾಚಾರ, ಲಂಚಗುಳಿತನ. ಆ ಲಂಚಗುಳಿತನ ಯಾವಾಗ ಮನುಷ್ಯರಲ್ಲಿ ಬಂತೋ ಬಾಕಿ ಭ್ರಷ್ಟತೆಗಳು ಅದ್ರ ಹಿಂದೇ ಬರ್ತದೆ.

ನಾ : ಆದ್ರೆ ಅಂಥ ಜನವನ್ನೇ ಜನ ಆಯ್ಕೆ ಮಾಡ್ತಾರಲ್ಲಾ. ಇದು ಜನತೆಯ ತಪ್ಪಲ್ಲಾ?

ನಿ : ಜಾತಿ ನೋಡಿ ಮಾಡ್ತಾರೆ, ಓಟು ಮಾಡೋದು ಜಾತಿ ಮೇಲೆ, ಆ ಜಾತೀಯತೆ ಬೆಳೆದ್ಹೋಗಿದೆ, ಈ ಜಾತೀಯತೆ ಹೋಗ್ಬೇಕು.

ನಾ : ಈ ಜಾತಿ ಪದ್ಧತಿ ಹೋಗ್ಬೇಕಾದ್ರೆ ಏನ್ ಮಾಡ್ಬೇಕು ಅನ್ಸುತ್ತೆ?

ನಿ : ಇದು ಬಹಳ ದೊಡ್ಡ ಪ್ರಶ್ನೆ. ಇದಕ್ಕೆ ನಾನಾ ಕಾರಣಗಳಿವೆ. ಅದು ಹೋಗ್ಬೇಕಾದ್ರೆ ಮೊಟ್ಟ ಮೊದಲು ಜನಗಳು ವಿದ್ಯಾವಂತರಾಗ್ಬೇಕು.

ನಾ : ಎಂಥಾ ವಿದ್ಯೆ ಬೇಕು? ವಿದ್ಯಾವಂತರಾಗ್ತಾ ಇದ್ದಾರೆ. ಈಗ ಬಹಳಷ್ಟು ಜನ ಎಲ್ಲಾ ಜಾತಿಗಳಲ್ಲೂ M.A., M.Sc., Ph.D. ಗಳು ಇದ್ದಾರೆ.

ನಿ : ಸರ್ಕಾರಿ ಕೆಲಸಕ್ಕೆ ವಿದ್ಯಾವಂತರಲ್ಲ, ವಿದ್ಯಾಭ್ಯಾಸದ ಕ್ರಮವೇ ಬದಲಾವಣೆಯಾಗ್ಬೇಕು. ಮನುಷ್ಯತ್ವ ಬೆಳೀಬೇಕು, ಪ್ರಾಮಾಣಿಕನಾಗಿ ಬಾಳ್ಬೇಕು, ಯೋಗ್ಯ ನಾಗರೀಕನಾಗ್ಬೇಕು ಅನ್ನೋದು ಆ ವಿದ್ಯಾಭ್ಯಾಸದ ಕ್ರಮದಲ್ಲಿರಬೇಕು.

ನಾ : ಎಲ್ಲಾ ಈ ರೀತಿ ಮಾತಾಡ್ತಿದ್ದಾರ್ರೇ ಹೊರತು, ಇಂಥಾ ವಿದ್ಯಾಭ್ಯಾಸದ ಪದ್ಧತಿಯನ್ನ ಜಾರಿಗೆ ತರೋಕಡೆ ಗಮನನೇ ಕೊಡ್ತಾ ಇಲ್ವಲ್ಲ.

ನಿ : ಬಸವಣ್ಣೋರು ಹೇಳಿದ್ದಾರೆ - ಕಾಯಕ, ದಾಸೋಹ. ಕಾಯಕ ಅಂದ್ರೆ ನೀನು ಮತ್ತೊಬ್ಬರ ಮೇಲೆ ಅವಲಂಬಿಸಿ, ದುಡೀದೇನೇ ಜೀವನ ನಡೆಸ್ಬೇಡ. ದುಡಿದು ಜೀವ್ನ ನಡೆಸು. ಕಾಯಕ ಮಾಡು. ನೀನು ದುಡಿದದ್ದರ ಮೇಲೆ ನೀನಿರು, ದುಡಿದಿದ್ದರಲ್ಲಿ ಸ್ವಲ್ಪ ಕೊಡು ದೇಶಕ್ಕೆ, ಸಮಾಜಕ್ಕೆ, ಅದು ದಾಸೋಹ. ಇದು ಬರ್ಬೇಕು. ವಿದ್ಯಾಬ್ಯಾಸದ ಕ್ರಮದಲ್ಲಿ ಬರ್ಬೇಕದು. ನಾನು ಮತ್ತೊಬ್ಬರ ಜೀವನದಲ್ಲಿ ಕೈ ಹಾಕ್ಬಾರ್ದು; ಮೋಸ ಮಾಡ್ಬಾರ್ದು; Explotation, religious exploitation ಹೋಗ್ಬೇಕು.

ನಾ : ಬಸವಣ್ಣನ ಬಗ್ಗೆ ಇದೆಲ್ಲಾ ಹೇಳ್ತೀರಾ ನಿಜ. ನೀವು ಒಂದ್ಕಡೆ ಹೇಳಿದ್ರಿ ಬಹಳ ವರ್ಷಗಳ ಹಿಂದೆ, ನಮ್ಗೆ ಕುದುರೆ ಮೇಲೆ ಕೂತ ಬಸವಣ್ಣ ಬೇಕಾಗಿಲ್ಲಾ ಅಂತ. ಆದ್ರೆ ಬಸವಣ್ಣಾ

ಈ ಹೊತ್ತು ಎಲ್ಲರ ಒಂದು ಆದರ್ಶ ಬದಲಾಗಿ ಯಾವುದೋ ಒಂದು ಜಾತಿ ನಾಯಕನಾಗಿ ಬೆಳಿತಾ ಇದ್ದಾನೆ, ಅನ್ನಿಸೋದಿಲ್ವಾ ನಿಮಗೆ?

ನಿ : ಈ ಮಾತು, ನೀವು ಹೇಳೋ ಮಾತನ್ನು ಅಂಬೇಡ್ಕರ್ ಹೇಳ್ತಾ ಇದ್ರು ನನಗೆ. ಬಸವೇಶ್ವರನಂತಾ social reformer ಹುಟ್ಟಿಲ್ಲ ಅಂತ. ಸೊಸೈಟಿ ಹೆಂಗಿರ್ಬೇಕೂ, ಜನ ಹೆಂಗಿರ್ಬೇಕು, ಸಮಾಜ ಹ್ಯಾಗಿರ್ಬೇಕು ಅನ್ನೋದರ ಸ್ಪಷ್ಟವಾದ ಅಭಿಪ್ರಾಯ ಆತನಿಗಿತ್ತು. ಅದನ್ನ ನೀವು ಜೇಬಲ್ಲಿಟ್ಗಂಡಿದ್ದೀರಿ, ಬಸವ ತತ್ತ್ವಗಳನ್ನ, ನಿಮ್ಮ ಜನ ಅನುಷ್ಠಾನ ಮಾಡ್ತಿಲ್ಲ ಅಂತ. ಆ ಮಾತು - ನಂಬ್ತಿನದನ್ನ. ನಮ್ಮ ವಿದ್ಯಾಭ್ಯಾಸದಲ್ಲಿ ದುಡಿದು ತಿನ್ನತಕ್ಕಂತದ್ದು ಮೊದಲಿಂದಲೂ ಮಕ್ಕಳಲ್ಲಿ ಬರ್ಬೇಕದು, ಅದು ಬರ್‍ತಾ ಇಲ್ಲ. ಬರೀ ಸರ್ಕಾರಿ ಕಾನೂನು ಪಾಸ್ ಮಾಡೋದೆಷ್ಟೋ ಅಷ್ಟೆ. ಅದು ಹೀಗಾಗಿದೆ.

ನಾ : ಈವೊತ್ತು ಒಂದು ಜಾತಿಯ ಮೇಲ್ಮೇಯನ್ನು ಒಂದು ಸೀಮಿತ ಜನವರ್ಗದ ಒಂದು ಗರಿಮೆಯನ್ನ ಎತ್ತಿ ಹಿಡಿಯೋಕೆ ಒಂದು ಸಂಕೇತವಾಗ್ಬಿಟ್ಟಿದ್ದಾನೆ ಬಸವಣ್ಣ ಅನ್ನೋ ಟೀಕೆ ಇದೆಯಲ್ಲಾ?

ನಿ : ಸಾಕಷ್ಟು ಪ್ರಚಾರನೇ ನಡೆದಿಲ್ಲ. ಲಿಂಗಾಯಿತರೇನ್ ತಿಳ್ಕಂಡಿದ್ದಾರೆ ಅವ್ರು ನಮ್ಮವರು ಅಂತರ. ಬಸವಣ್ಣ ಲಿಂಗಾಯಿತರವನಲ್ಲ, ಬಸವಣ್ಣೋರು ಎಲ್ಲಾ ಜಾತಿಗೂ ಸೇರಿದವರೇ. ಅವರಿಗೆ ಜಾತಿ ಇರ್ಲಿಲ್ಲ. ಆದ್ರಿಂದ ತತ್ತ್ವದ ಮೇಲೆ ಸಮಾಜ ಕಟ್ಬೇಕು ಅಂತ ಇದ್ದಿದ್ದು. ಲಿಂಗಾಯಿತರು ನಮ್ಮವರೇ ಅವ್ರು ಅಂತ ಹೆಮ್ಮೆ ಪಟ್ಕೋತಾರೆ. ಅದಕ್ಕೇನು ಕಾರಣ ಇಲ್ಲ, ಬಸವತತ್ತ್ವ ಅಂದರೆ ನೀನು ಈ ದೇಶದ ನಾಗರೀಕನಾಗಿ ದುಡಿದು ತಿನ್ನು, ಕಷ್ಟಪಟ್ಟು ದುಡಿ. ಅದರ ಮುಖಾಂತರ ನೀನಿರಬೇಕೇ ಹೊರತು ಮತ್ತೊಬ್ಬರಿಗೆ ಮೋಸ ಮಾಡಿಯೋ, ಇನ್ನಾವುದರ ಮೂಲಕವೋ ಅಲ್ಲ, ಅನ್ನೋ ತತ್ತ್ವ ಬರ್ಬೇಕು.

ನಾ : ಈ ಎಲ್ಲ ಬಿಕ್ಕಟ್ಟಿಗೆ ನಮ್ಮ ಜೀವನದಲ್ಲಿ ಧರ್ಮದ ಪಾತ್ರ, ಧಾರ್ಮಿಕ ಭಾವನೆ ಕಡಿಮೆ ಆಗ್ತಾ ಇರೋದು ಕಾರಣವಾಗಿರಬಹುದಾ?

ನಿ : ಹೌದೌದು, ಕಡಿಮೆ ಆಗ್ತಾ ಇದೆ. ಅದಕ್ಕೇ ನಾನ್ಹೇಳಿದ್ದು ದುಡಿದು ತಿನ್ನು ಅನ್ನೋದ್ರಲ್ಲಿ ಇವೆಲ್ಲ ಸೇರಿವೆ.

ನಾ : ಈಗ ಧರ್ಮ ಮತ್ತು ಕೋಮುವಾದಕ್ಕಿರೋ ವ್ಯತ್ಯಾಸ ಏನು, ನಿಮ್ಮ ಪ್ರಕಾರ?

ನಿ : ಕೋಮುವಾದ ಹೊಲಸು ಕೆಲಸ, ನನ್ನ ಜಾತಿನೇ ಹೆಚ್ಚು, ನನ್ನ ಜಾತಿಗೆ ನಾನು ಸಹಾಯ ಮಾಡ್ಬೇಕು ಅನ್ನತಕ್ಕಂತಾದ್ದಿದಿಯಲ್ಲಾ ಅದು ಅಧರ್ಮ, ಅದು ಅನ್ಯಾಯ, ಅದು ಆಗ್ಬಾರ್ದು. ಅದು ಧರ್ಮ ಅಲ್ಲ. ಧರ್ಮ ಅಂದ್ರೆ ಮನುಷ್ಯಯೋಗ್ಯ ರೀತಿಯಲ್ಲಿ ಪ್ರಾಮಾಣಿಕನಾಗಿ ದುಡಿದು ತಿನ್ನತಕ್ಕಂತಾದ್ದು. ಆ ಧರ್ಮದ ಕಡೆ ಹೆಚ್ಚು ಗಮನ ಕೊಡ್ಬೇಕು. ಅದು ಧರ್ಮವೇ ಹೊರತು, ಜಾತಿ ಧರ್ಮ ಅಲ್ಲ.

ನಾ : ನಿಮಗೆ ದೇವರಲ್ಲಿ ನಂಬಿಕೆ ಇದ್ಯಾ?

ನಿ : ಹಾಂ! ನಂಬಿಕೆ ಇದೆ.

ನಾ : ನಿಮ್ಮ ಪ್ರಕಾರ ದೇವರು ಅಂದ್ರ?

ನಿ : (ನಕ್ಕು) ದೇವರಲ್ಲಿ ನನಗೆ ಭಕ್ತಿಯೇ ಇಲ್ಲ. ಯಾವ ದೇವರು - ಈಶ್ವರ ಅದೂ ಇದು, ವಿಘ್ನೇಶ್ವರನಂತೆ, ಅದಂತೆ-ಗುಡಿಗಳಲ್ಲಿಟ್ಟಿರ್ತಾರಲ್ಲಾ ಅದ್ರಲ್ಲಿ ಏನೂ ನನಗೆ ನಂಬಿಕೆ ಇಲ್ಲ. ನನ್ನ ದೇವರು Universe. ಕನ್ನಡ ಏನ್ ಹೇಳ್ತೀರಿ ಅದಕ್ಕೆ..

ನಾ : ವಿಶ್ವಶಕ್ತಿ.

ನಿ : ವಿಶ್ವ, ವಿಶ್ವ ಶಕ್ತಿಯಲ್ಲಿ ನನಗೆ ತುಂಬಾ ನಂಬಿಕೆವುಂಟು. ನಾನು ಅದರ ಭಾಗ. ಅದು ನನ್ನ ಭಾಗ. ಅದರಲ್ಲಿ ನಂಬಿಕೆ ಇದೆ ಹೊರತು ಯಾವ ದೇವರಲ್ಲೂ ನನಗೆ ನಂಬಿಕೆ ಇಲ್ಲ. ನಾನ್ಯಾವ ದೇವರನ್ನು ಪೂಜೆ ಮಾಡೋದೂ ಇಲ್ಲ.

ನಾ : ನಿಜಲಿಂಗಪ್ಪಾವ್ರೇ, ಇತ್ತೀಚಿನ ರಾಜಕಾರಣಿಗಳ ಜೀವನ ಶೈಲಿಯನ್ನು ನೋಡ್ದಾಗ ಮತ್ತು ನೀವು ಈಗ ಬಾಳ್ತಿರ‍್ತಕ್ಕಂತ ರೀತಿ, ಸರಳ ರೀತಿಯನ್ನ ನೋಡ್ದಾಗ ಆಶ್ಚರ್ಯ ಆಗ್ತಿದೆ. ನಿಮ್ಮ ರಾಜಕಾರಣ ಜೀವನದಲ್ಲಿ ನೀವೇನ್ ದುಡಿಮೆ ಮಾಡ್ಲಿಲ್ವಾ?

ನಿ : ಜೀವನದಲ್ಲಿ ದುಡಿಮೆ ಮಾಡೋಕೆ ರಾಜಕೀಯಕ್ಕೆ ಹೋಗ್ಲಿಲ್ಲ, ಮುಖ್ಯಮಂತ್ರೀನೂ ಆಗ್ಲಿಲ್ಲ, ಏನೂ ಆಗ್ಲಿಲ್ಲ. ಜನಗಳ ಸೇವೆ ಮಾಡ್ಬೇಕು, ನನ್ ರಾಜ್ಯಕ್ಕೆ ಏನ್ಮಾಡ್ಬೇಕು - ಅದ್ರಲ್ಲೂನೂ ಹಳ್ಳಿ ಜನಗಳಿಗೆ ಏನ್ಮಾಡ್ಬೇಕು ಅನ್ನೋ ಉದ್ದೇಶವಿತ್ತೇ ಹೊರತು, ನನಗೋಸ್ಕರ ನಾನು ಇದ್ದೀನಿ ಅಂತ ಎಂದೂ ತಿಳ್ಕೋಳ್ಳಿಲ್ಲ.

ನಾ : ದುಡ್ಡು ಮಾಡ್ಲಿಲ್ಲ.

ನಿ : (ನಗು) ಮುಖ್ಯ ಮಂತ್ರಿಯಾದಾಗ ೧೦,೦೦೦ ರೂ. ಇತ್ತು ಬ್ಯಾಂಕಿನಲ್ಲಿ. ನಾನು ವಾಪಸ್ ಬಂದಾಗ ೮,೦೦೦ ರೂ. ಇತ್ತು.

ನಾ : ಆದ್ರೆ ಒಂದ್ಕಾಲ್ದಲ್ಲಿ. ನೀವು ಬಹಳ ದುಡ್ಡು ಮಾಡಿದ್ದೀರಾ ಅಂತ ಆಪಾದನೇಗಳನ್ನ ಮಾಡಿದ್ರು ಜನ.

ನಿ : ಈಗ್ಮಾಡ್ತಾ ಇಲ್ಲ ಅಂತ ಕಾಣ್ತದೆ... ಅದೂ ಯಾರೊ... ಒಬ್ಬ ಮನುಷ್ಯ... ಅವನ್ನ ಮಂತ್ರಿಯಾಗಿ ತಗೊಳ್ಳಿಲ್ಲ. ಸುಳ್ಳು ಕಥೆಗಳನ್ನ ಹುಟ್ಟಿಸ್ದ ಅವ್ನು, ಅಷ್ಟೆ. ಒಬ್ಬ ಮನುಷ್ಯ ಇದಕ್ಕೆಲ್ಲ ಕಾರಣ.

ನಾ : ಆಗ ನಿಮಗೆ ತುಂಬಾ ದುಃಖ ಆಗ್ತಿತ್ತಾ?

ನಿ : ದುಃಖ ಏನಾಗ್ಲಿಲ್ಲ, ಬೇಜಾರಾಗ್ತಿತ್ತು ಅಷ್ಟೆ. ಯಾಕಿಂಗ್ಮಾಡ್ತಾರೆ ಜನ ಅಂತ.

ನಾ : ಆದ್ರು ಸ್ವಲ್ಪ ಕಾಲಕ್ಕೆ ನಂಬಿದ್ರು ಕೂಡ ಜನ ಅದನ್ನ.

ನಿ : ಯಾರ್ದಾದ್ರು ಒಬ್ಬ ಮನುಷ್ಯನ ವಿಚಾರವಾಗಿ ವಿರೋಧವಾದ್ದು, ಆಕ್ಷೇಪಣೀಯವಾದ್ದು, ಬಂದಾಗ ಜನ ಅದನ್ನ ನಂಬ್ತಾರೆ. ಒಳ್ಳೆ ವಿಚಾರ ಬಂದಾಗ ಅದನ್ನ ನಂಬಿದರೆ ನಂಬಿದ್ರು, ಬಿಟ್ರೆ ಬಿಟ್ರು. ಅದಕ್ಕಷ್ಟು ಪ್ರಾಮುಖ್ಯತೆ ಕೊಡೋದಿಲ್ಲ. ಏನೋ ಒಂಥರಾ ಸಂತೋಷ, ಮತ್ತೊಬ್ಬರ ವಿಚಾರ ಕೆಟ್ಟದ್ದ ಕೇಳ್ದಾಗ ಒಂಥರಾ ಸಂತೋಷ, ಅಷ್ಟೆ, ಅದನ್ ನಂಬ್ತಾರೆ.

ನಾ : ನೀವು ಅಧಿಕಾರದಲ್ಲಿದ್ದಾಗ, ಮುಖ್ಯಮಂತ್ರಿ ಯಾಗಿದ್ದಾಗಿರಬಹುದು ಅಥವಾ ಬೇರೆ ಅಧಿಕಾರ ಸ್ಥಾನದಲ್ಲಿದ್ದಾಗಿರ ಬಹುದು, ನಿಮಗೆ ಆಮಿಷ ಒಡ್ಡಿದ್ದುಂಟಾ? ಹಣದ ಆಮಿಷ ಅಥವಾ ಬೇರೆ ದೌರ್ಬಲ್ಯಗಳನ್ನ...?

ನಿ : ಎಂದೆಂದೂ ಆ ವಿಚಾರನೇ ನನ್ ತಲೆಗ್ಹೋಗ್ತಿರ್ಲಿಲ್ಲ. ಇನ್ನೂ ಒಂದ್ಹೇಳ್ಬೇಕು, ಯಾರೂ ನನ್ನ ಹತ್ರ ಬಂದು ದುಡ್ಡು ತಗೊಳ್ಳಿ ಅಂತ ಬಂದು - ಅಲ್ಲಿ ಹದಿನೈದು ಲಕ್ಷದ ವಿನಾ - ಎಂದೆಂದೂ ನಾನು ಮುಖ್ಯಮಂತ್ರಿಯಾಗಿದ್ದಾಗ ದುಡ್ಡು ತಗೊಳ್ಳಿ ಅಂತ ಬರ್ಲ್ಲೂ ಇಲ್ಲ. ಬಹುಶಃ ಅವರಿಗೆ ಭಯ ಇತ್ತೂ ಅಂತ ಕಾಣ್ತದೆ, ಯಾರೂ ನನಗೆ ದುಡ್ಡಿನಾಸೆ ತೋರಿಸ್ಲಿಲ್ಲಾ.

ನಾ : ಆ ಹದಿನೈದು ಲಕ್ಷದ ಪ್ರಸಂಗ ಅಂದ್ರಲ್ಲ, ಅದರ ಬಗ್ಗೆ ಹೇಳಿ.

ನಿ : ಅದು ನಾನು ಪಾರ್ಲಿಮೆಂಟ್ ಮೆಂಬರಾಗಿದ್ದೆ. ಸಾಕಷ್ಟು ಇನ್‌ಫ್ಲೂಯೆನ್ಸ್ ಇತ್ತು. ಎಲ್ಲರೂ ಗೊತ್ತಿದ್ರು ಎಲ್ಲಾ ಇತ್ತು. ಆದದ್ರಿಂದ ನಾನ್ಹೇಳಿದ್ರೆ ಕೆಲ್ಸ ಆಗುತ್ತೆ ಅಂತ ತಿಳ್ಕೊಂಡಿದ್ರು. ನನಗೆ ಅತ್ಯಂತ ಬಹಳ ಹತ್ತಿರದ ಸ್ನೇಹಿತ. ಅವ್ನು ಒಬ್ಬ ಕೋಲ್ ಮೈನ್ಸ್ ಕಂಟ್ರಾ ್ಯಕ್ಟ್ರನ್ನು ಕರ್ಕೊಂಡ್ ಬಂದ. ಹದಿನೈದು ಲಕ್ಷ ರೂಪಾಯಿ ಇಟ್ಟ. ಬಂದು ಇಟ್ಟು ಈತನಿಗೆ ಮುಂದಕ್ಕೆ ಕಂಟಿನ್ಯೂ ಆಗ್ಬೇಕು, ಕೋಲ್ ಮೈನ್ಸ್ ಲೈಸೆನ್ಸ್, ಮಾಡಿಸ್ಕೊಡಿ ಅಂತ ಇಟ್ಟ. ಅದನ್ನ ವಾಪಸ್ಕೊಟ್ಟೆ, ಇನ್ಮೇಲ್ ನನ್ನತ್ರ ಬರ್ಬೇಡ ಅಂತ್ಹೇಳಿ, ನನಗೆ ಬಹಳ ಬೇಕಾದ ಸ್ನೇಹಿತ. ಇನ್ಮೇಲೆ ಬರ್ಬೇಡ ಅಂತ ಹೇಳ್ದೆ.

ನಾ : ಆ ಹದಿನೈದು ಲಕ್ಷ ರೂಪಾಯಿಗಳನ್ನ ನಿಮ್ಮ ಮುಂದೆ ಇಟ್ಟಾಗ ನಿಮ್ಮ ಮನಸ್ಸು ಒಂದು ಕ್ಷಣವೂ ಅಲುಗಾಡ್ಲಿಲ್ವಾ?

ನಿ : ಏನೇನೂ ಆಗ್ಲಿಲ್ಲ, ನನಗೆ ನಿಕೃಷ್ಟ ಆಯ್ತು. ಬೇಜಾರ್ ಬಂತು. ಅವನ್ಮೇಲೆ ಸಿಟ್ಟು ಬಂತು, ನನ್ನ ಸ್ನೇಹಿತನ ಮೇಲೆ. ಬಹಳ ನನಗೆ ಬೇಕಾದ ಸ್ನೇಹಿತ. ಆಮೇಲೆ ಅವನ್ನ ಕರ್ದು ಮಾತಾಡ್ಲಿಲ್ಲ. ಯಾಕೆ, ನನ್ನ ಮನಸ್ಸಿಗೆ ಬೇಜಾರಾಯ್ತು ಅಷ್ಟೆ. ಅದನ್ನೋಡಿ.

ನಾ : ತಾವು ತಮ್ಮ ಮಕ್ಕಳನ್ನು ರಾಜಕಾರಣಕ್ಕೆ ತರಲಿಲ್ಲ, ಇತ್ತೀಚಿನ ತಲೆಮಾರುಗಳಲ್ಲಂತೂ ಎಲ್ಲಾ ರಾಜಕಾರಣಿಗಳು ಮಕ್ಕಳನ್ನು ರಾಜಕೀಯಕ್ಕೆ ತರ್‍ತಾ ಇದ್ದಾರೆ. ನೀವ್ಯಾಕೆ ತರ್ಲಿಲ್ಲ?

ನಿ : ನಾನು ತಂದಿಲ್ಲ, ಯಾಕೆಂದ್ರೆ ನನ್ನನ್ನ ಮಕ್ಳೂ ತಪ್ಪು ದಾರಿಯಿಂದ ದುಡಿದು ದೊಡ್ಡೋರಾಗ್ಬೇಕೂ ಅನ್ನೋ ಮಾತಿರ್ಲಿಲ್ಲ. ಅವರಿಗೆ ವಿದ್ಯಾಭ್ಯಾಸ ಮಾಡಿಸ್ದೆ, ಸರ್ಕಾರಿ ನೌಕರಿಗೆ ಇಬ್ಬರು ಸೇರಿದ್ರು, ಒಬ್ಬನು ವ್ಯವಸಾಯ ಮಾಡ್ದ. ಚೆನ್ನಾಗಿ ಕೆಲ್ಸ ಮಾಡ್ತಾ ಇದ್ದಾರೆ. ಅವ್ರು ನಮ್ಮ ಕಷ್ಟ ನೋಡಿ ರಾಜಕಾರಣಕ್ಕೆ ಹೋಗಬಾರ್ದು ಅಂತ್ಹೇಳಿ ತೀರ್ಮಾನ ಮಾಡಿದ್ರು.

ನಾ : ನಿಮ್ಮ ಕಾಲದಲ್ಲಿ ರಾಜಕಾರಣ ಕಷ್ಟವಾಗಿತ್ತಾ?

ನಿ : ಕಷ್ಟವಾಗಿತ್ತು, ಯಾರೂ ಹೋಗ್ತಿರ್ಲಿಲ್ಲ. ನನ್ನ ಮಕ್ಳೂ ಹೋಗ್ಲಿಲ್ಲ. ಅವರೇನೋ ಅವರವ್ರೇ ದುಡ್ಕೋಳೋದಿಕ್ಕೆ ಮಾರ್ಗನಾ ಮಾಡ್ಕೊಂಡ್ಬೋದ್ರು. ಅವರಿಗೆ ರಾಜಕಾರಣಕ್ಕೆ ಬರ್ರಿ ಅಂತ ನಾನೆಂದೂ ಕರೀಲಿಲ್ಲ.

ನಾ : ನಿಮ್ಮ ಮಕ್ಕಳು ಎಂದಾದರೂ ನಿಮ್ಮನ್ನ ದೂರಿದಾರಾ, ನಮ್ಮನ್ನ ರಾಜಕಾರಣಕ್ಕೆ ತರ್ಲಿಲ್ಲಾಂತ.

ನಿ : ಇಲ್ಲ, ದೂರಿಲ್ಲ. ಅಷ್ಟೇ ಅಲ್ಲ, ಸದ್ಯ ನಾನು ಅಡ್ಡಿ ಬರ್ಲಿಲ್ವಲ್ಲಾ ಅಂತ ರಾಜಕಾರಣಕ್ಕೆ ಕರೀಲಿಲ್ವಲ್ಲಾಂತ ಅವರಿಗೆ ಸಂತೋಷ.

ನಾ : ನಿಮ್ಮ ಪತ್ನಿಯವರು ರಾಜಕಾರಣದಲ್ಲೇನಾದ್ರು ಆಸಕ್ತಿ ವಹಿಸ್ತಾ ಇದ್ರಾ?

ನಿ : ಏನೇನೇನೂ ಎಂದೆಂದೆಂದು ಪ್ರವೇಶ ಮಾಡ್ಲಿಲ್ಲ. ಯಾರೂ ಅವ್ರಹತ್ರ ಹೋಗ್ತಾನೂ ಇರ್ಲಿಲ್ಲ.

ನಾ : ನಿಮ್ಮ ರಾಜಕೀಯ ಜೀವನದಲ್ಲಿ ನಿಮ್ಮ ಪತ್ನಿ ಯಾವ ರೀತಿ ಪಾತ್ರ ವಹಿಸ್ತಾ ಇದ್ರು?

ನಿ : ನಾನೇನ್ಮಾಡಿದ್ನೋ ಅದಕ್ಕಡ್ಡಿ ಬರ್ಲಿಲ್ಲ. ನಾನು ಮಾಡ್ತಾ ಇರ್ತಕಂತಾದ್ದು, ಜೈಲಿಗ್ಹೋಗ್ಲಿ, ಏನೇ ಮಾಡ್ಲಿ ಅದು ಸರಿ ಅಂತ ಆಕೆ ತಿಳ್ಕೊಂಡಿದ್ಳು. ಯಾಕೆ ಅಂದ್ರೆ ಗಾಂಧಿಯವರು ಹೇಳಿದ ಮಾತ್ನಲ್ಲಿ ನಡೀತಿದ್ದಾರೆ ಅಂತ. ಅವಾಗ್ಲೆ ಹೇಳಿದ್ನಲ್ಲಾ ಗಾಂಧೀ ಪರೀಕ್ಷೆ ಕಟ್ಟಿದ್ದೀರಿ ಅನ್ನೋ ಮಾತು. ಅದ್ರಿಂದ ಆಕೆಯಿಂದ ನನಗೆ ಪ್ರೋತ್ಸಾಹ ಸಿಕ್ತೇ ಹೊರತು ತಪ್ಪು ದಾರಿಯಿಂದ ದುಡೀರಿ ಅನ್ನೋ ಅಂತ ಮಾತು ಆಕೆಗೆ ಕನಸುಮನಸಲ್ಲೂ ಇರ್ಲಿಲ್ಲ.

ನಾ : ನೀವು ಗಾಂಧೀವಾದಿಗಳು, ಗಾಂಧೀಕಾಲದ ಮೌಲ್ಯಗಳನ್ನ ಪ್ರತಿಪಾದಿಸ್ತಾ ಇದ್ದೀರಾ. ಆದ್ರೆ ಈವೊತ್ತು ರಾಷ್ಟ್ರ ಎಷ್ಟು ಮುಂದಕ್ಹೊಗಿದೆ, ಅಥ್ವಾ ಎಷ್ಟು ದಾರಿಯನ್ನ ಸವೆಸಿದೆ ಬೇರೆ ಮಾರ್ಗದಲ್ಲಿ ಅಂತಂದ್ರೆ, ಮತ್ತೆ ನಾವು ಗಾಂಧೀಯವರ ಮೌಲ್ಯಗಳಿಗೆ ಗಾಂಧೀಯವರ ಜೀವನ ದೃಷ್ಟಿಗೆ ವಾಪಸ್ ಹೋಗೋದಿಕ್ಕೆ ಸಾಧ್ಯ ಅನ್ಸುತ್ತಾ ನಿಮ್ಗೆ?

ನಿ : ಸಾಧ್ಯ ಕೂಡ್ಲೆ ಆಗೋದಿಲ್ಲ, ಎಷ್ಟು ಕೆಟ್ಹೋಗಿದೆ ಅಂದ್ರೆ ಇದು ಹೋಗ್ಬೇಕಾದ್ರೆ ಇನ್ನೂ ಐವತ್ತು ವರ್ಷ ಬೇಕು. ಪ್ರಯತ್ನ ನಡೀತಾ ಇದೆ. ಅದಾದ್ಮೇಲೆ ಬರ್ತದೆ.

ನಾ : ಮತ್ತೆ ಗಾಂಧೀ ಈ ದೇಶಕ್ಕೆ ಅಗತ್ಯ ಬೀಳ್ತದೆ ಅಂತ ಅನ್ಸುತ್ತಾ ನಿಮ್ಗೆ?

ನಿ : ಹೇಳ್ತೀನಿ, ಗಾಂಧೀಜಿ ಬರ್ತಾರೋ ಇಲ್ವೋ, ಪ್ರಾಮಾಣಿಕತೆ ಬರ್ತದೆ ಇಂಡಿಯಾ ದೇಶದಲ್ಲಿ. ಸ್ವಲ್ಪ ಟೈಂ ಆಗ್ತದೆ.

ನಾ : ನಿಮ್ಮ ಜೀವನದ ಅತ್ಯಂತ ಸವಿಯಾದ ಘಟನೆ ಯಾವುದು?

ನಿ : ಸವಿಯಾದ ಘಟನೆ ಅಂತಂದ್ರೆ....

ನಾ : ಅತ್ಯಂತ ಸವಿಯಾದ ಘಟನೆ ಹೇಳಿ.

ನಿ : ಅದೇನೆ ಹೇಳೋದು ಬಹಳ ಕಷ್ಟಪ್ಪ.

ನಾ : ಮದುವೆಯಾದಾಗ?

ನಿ : ಮದುವೆಯಾದಾಗ, ನನಗೂ ಚಿಕ್ಕ ವಯಸ್ಸು, ನನ್ಹೆಂಡ್ತೀಗೂ ಚಿಕ್ಕ ವಯಸ್ಸು...

ನಾ : ಮುಖ್ಯ ಮಂತ್ರಿಯಾದಾಗ?

ನಿ : ಒಂದು ಹೇಳ್ಬೇಕೂಂದ್ರೆ ಶರಾವತಿ ಯೋಜನೆ ಫೌಂಡೇಷನ್ ಹಾಕ್ದಾಗ ಅದನ್ನ ನಾನು ಮರ್ತ್ಯಂಗಿಲ್ಲ. ಎಸ್. ಕೆ. ಪಾಟೀಲ್ ಕರ್ದು ಶರಾವತಿ ಫೌಂಡೇಷನ್ ಹಾಕ್ದೆ. ನನ್ನ ಸಂತೋಷದ ವಿಚಾರಗಳಲ್ಲಿ ಅದೂ ಒಂದು, ಘಟನೆ. ಅದನ್ನ ಹೇಳ್ಬಲ್ಲೆ.

ನಾ : ಮುಖ್ಯಮಂತ್ರಿಯಾದಾಗ ಸಂತೋಷ ಆಗ್ಲಿಲ್ವಾ?

ನಿ : ಅದೇನ್ ಅಂತಾದ್ದೇನ್, ಸ್ವಾಭಾವಿಕವಾಗಿ ಬಂತದು. ಎಲ್ಲರೂ ನನ್ನ ಒಪ್ಪಿದ್ರು, ಆಯ್ತು ಅಷ್ಟೆ. ಅದ್ರಲ್ಲೇನ್ ದೊಡ್ಡ ವಿಚಾರ ಅಂತ - ಅದು ನನ್ಗೇನ್ ಅನ್ನಿಸ್ಲಿಲ್ಲ.

ನಾ : ಸ್ವಾತಂತ್ರ್ಯ ಬಂದಾಗ?

ನಿ : ಅತ್ಯಂತ ಸಂತೋಷ ಆಯ್ತು. ಅದು ಒಂದು ದೊಡ್ಡ ಜ್ಞಾಪಕ. ಅದು ಅತ್ಯಂತ ಸಂತೋಷದ ಕಾಲ.

ನಾ : ಅತ್ಯಂತ ನಿಮಗೆ ದುಃಖವನ್ನುಂಟುಮಾಡಿದ ಘಟನೆ ಯಾವುದು?

ನಿ : ನನ್ನ ಹೆಂಡ್ತಿ ಸತ್ತಾಗ ಅತ್ತೆ ನಾನು. ನಾನು ಎಂದೆಂದೂ ಅತ್ತವನೇ ಅಲ್ಲ. ಕಣ್ಣಲ್ಲಿ ನೀರ್ತಂದಿಲ್ಲ. ಆವತ್ತು ಮಗು ಅತ್ತಂಗತ್ಬಿಟ್ಟೆ.

ನಾ : ತಮಗೀಗ ೯೭ ವರ್ಷ. ಶತಾಯುಷಿ ಆಗ್ಬೇಕೂಂತ ಆಸೆ ಇದ್ಯಾ?

ನಿ : ಇದೆ. ಯಾಕೆಂದ್ರೆ ಈ ಜಗತ್ಕಂಡ್ರೆ ನನಗೆ ಇಷ್ಟ. ಅದನ್ನ ಪ್ರೀತಿಸ್ತೇನೆ.I Love this world. I Love this universe., because I am a part of this universe.

ನಾ : ಇನ್ನೂ ಬದುಕ್‌ಬೇಕು ಅಂತ ಆಸೆ ಹುಟ್ಸೋ ಅಂತ ಆಕರ್ಷಣೆ ಜೀವನದಲ್ಲಿ ಏನಿದೆ ನಿಮ್ಗೆ? ಯಾತಕ್ಕೆ ಬದುಕ್ಬೇಕು?

ನಿ : ಪ್ರಪಂಚ ಅನುಭವಿಸೋದಕ್ಕೆ, ನೋಡಿ ಸಂತೋಷ ಪಡೋದಿಕ್ಕೆ.

ನಾ : ಏನಿದೆ ಪ್ರಪಂಚದಲ್ಲಿ ನಿಮ್ಮ ಪ್ರಕಾರ ಅನುಭವಿಸೋ ಅಂತಾದ್ದು?

ನಿ : ನೋಡೋದಕ್ಕೆ, ನಾನು ರಾತ್ರಿ ಹೊತ್ತು ಮಲಕ್ಕೊಂಡು ನಕ್ಷತ್ರಗಳನ್ನ ನೋಡುವಾಗ, ಸೂರ್ಯ ಹುಟ್ಟೋದು ನೋಡುವಾಗ, ಚಂದ್ರ ಹುಟ್ಟೋದು ನೋಡುವಾಗ, ಜನಗಳ್ನ ನೋಡ್ದಾಗ, ಇವೆಲ್ಲವು ಪ್ರತಿಯೊಂದು ಆಕರ್ಷಣೀಯವಾದ ಸಂಗತಿಗಳೇ ಅಲ್ವೇ? ಒಳ್ಳೆ ಮರ ನೋಡ್ದಾಗ, ಅರಣ್ಯ ನೋಡ್ದಾಗ, ನದೀ ನೋಡ್ದಾಗ, ಸಮುದ್ರ ನೋಡ್ದಾಗ, ಇವೆಲ್ಲವೂ ಆಕರ್ಷಣೆಯ ವಾದ್ದೇ. ಅದನ್ನೋಡಿ ಸಂತೋಷಪಡ್ಬೇಕು ಅಂತ.

ನಾ : ನಿಮಗೆ ತುಂಬ ವಯಸ್ಸಾಗಿದೆ, ನಿಮ್ಮ ಚಲನೆ ಕೂಡ ತುಂಬ ಮಿತಗೊಂಡಿದೆ ಬೇಜಾರಾಗುತ್ತಾ ಇದ್ರ ಬಗ್ಗೆ?

ನಿ : ಇದೆ. ಅದಕ್ಕೇನ್ಮಾಡೋದು? ಈ ವಯಸ್ಸಾದಂಗೆಲ್ಲ ಈ ರೀತಿ ಬಾಧೆಗಳು ಯಾವ್ಯಾವೋ ಸಣ್ಣ ಸಣ್ಣವು - ಅಲ್ಲಿ ಬೇಧಿ ಸರಿಗಾಗ್ಲಿಲ್ಲ, ಇಲ್ಲೇನೋ ನೋಯ್ತದೆ, ಅಲ್ಲೇನೋ ಆಯ್ತು, ಕಿವಿ ಸರಿಯಾಗಿ ಕೇಳ್ಳಿಲ್ಲ, ಕಣ್ಣು ಸರಿಯಾಗಿ ಕಾಣ್ಸೆಲ್ಲ, ಅನ್ನೋದಿದ್ಯಲ್ಲಾ ಅವು I welcome it, I can't just reject it. Because it has to be either enjoyed or suffered. I am enjoying it in a way and suffering it also in a way.

ನಾ : ಸಾವಿನ ಬಗ್ಗೆ ಭಯ ಇಲ್ವಾ?

ನಿ : ಹಾಂ!

ನಾ : ಸಾವಿನ ಬಗ್ಗೆ ಭಯ ಇಲ್ವಾ?

ನಿ : ಇಲ್ಲ ಸಾವಿನ ಬಗ್ಗೆ ಏನೇನೇನೇನೂ ಭಯ ಇಲ್ಲ. ಏನೂ ಭಯ ಇಲ್ಲ. ಓ ಸಂತೋಷ್ದಿಂದ ಹೋಗ್ತೀನಿ. ಯಾಕೆಂದ್ರೆ ಎಲ್ಲೋಗ್ತೀನಿ? ಎಲ್ಲಿಂದ ಬಂದ್ನೋ ಅಲ್ಲೋಗ್ತಿನಿ. ಯಾಕ್ ಭಯ? ಏನು ಭಯ ಇಲ್ಲ...

ನಾ : ಮತ್ತೆ ಹುಟ್ಟೋ ಭಯ ಏನು ಇಲ್ವಾ?

ನಿ : ಅದೂನು ಇಲ್ಲ. ಭಯ ಯಾಕೆ? ಹುಟ್ಟೋದಕ್ಕ ಭಯ ಯಾಕೆ? ಹುಟ್ಟೋದು ಒಂದು ಸಂತೋಷದ ಸಂಗತಿ, ಭಯ ಎಲ್ಲಿಂದ ಬಂತು? ಇದು ಮೂರ್ಖತನ, ಮಾನವ ಜನ್ಮ ದೊಡ್ಡದು, ಅದನು ಹಾಳುಮಾಡಲು ಬೇಡಿರಿ ಹುಚ್ಚಪ್ಪಗಳಿರಾ ಅಂತ್ಹೇಳಿ ದಾಸರು ಹೇಳ್ತಾರೆ. ಅದು ಸರಿ, ಅದ್ರಿಂದ ಹುಟ್ಟೋದಕ್ಕೆ ಭಯ ಯಾಕೆ? ನಾನು ಹುಟ್ತೀನಿ ಅಂತ ಯಾರಿಗ್ಗೊತ್ತು? ನಾನು ಹುಟ್ಟೋದೇ ಇಲ್ಲ. ಯಾಕಂದ್ರೆ ನನಗೆ ಪುನರ್ ಜನ್ಮ ಇಲ್ಲ. ಹೋಗ್ಬಿಡ್ತೀನಿ. ಸತ್ತುಹೋದೆ ಅಂದರೆ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಅದರದು ಅದ್ರಷ್ಟಕ್ಕದೆ ಸೇರ್ಕಂಡ್ಹೋಗ್ತದೆ,

ನಾ : ನಿಜಲಿಂಗಾಪ್ಪಾವ್ರೆ ಈವರ್ಗೆ ನಮ್ಮೊಡನೆ ತುಂಬಾ ಬಿಚ್ಚು ಮನಸ್ಸಿನಿಂದ ಅನೇಕ ವಿಷಯಗಳನ್ನು ನಮ್ಜೊತೆಯಲ್ಲಿ ಈ ಮಾತುಕತೆಯಲ್ಲಿ ನೀವು ತೆರೆದಿಟ್ಟಿದ್ದೀರಾ. ಇದಕ್ಕೋಸ್ಕರ ನಿಮ್ಗೆ ತುಂಬಾ ಧನ್ಯವಾದಗಳು.

ನಿ : ಬಹಳ ಸಂತೋಷ. 

# "ಇಂಥಾ ನಾಯಕರು ಇನ್ನು ಸಿಗಾಕಿಲ್ಲ"

## ಎಂ. ಹನುಮಂತಪ್ಪ ಅವರ ಸಂದರ್ಶನ

ಜಿ. ಎಸ್. ಉಜ್ಜನಪ್ಪ

ಚಿತ್ರದುರ್ಗದ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ, ಖಾದಿ ಸಹಕಾರ ಸಂಘದ ನಿರ್ದೇಶಕರಾಗಿ ತಮ್ಮ ಊರು ತುರುವನೂರು ಪುರಸಭೆಯ ಅಧ್ಯಕ್ಷರಾಗಿ ಸದಸ್ಯರಾಗಿ ಸೇವೆ ಸಲ್ಲಿಸಿದ ಕುನ್ನಿಹನುಮಂತಪ್ಪ ಎಂದೇ ಹೆಸರಾಗಿರುವ ಎಂ. ಹನುಮಂತಪ್ಪನವರು ಸ್ವಾತಂತ್ರ್ಯ ಹೋರಾಟಗಾರರು ಹಾಗೂ ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರ ಅನುಯಾಯಿ. ಈ ೮೨ರ ಇಳಿವಯಸ್ಸಿನಲ್ಲಿ ಬಿದ್ದು ಕಾಲು ನೋಯಿಸಿಕೊಂಡು ಚಿತ್ರದುರ್ಗದ ತಮ್ಮ ಬಂಧುಗಳ ಮನೆಯಲ್ಲಿ ಚಿಕಿತ್ಸೆ ಪಡೆಯುತ್ತಿರುವ ಅವರನ್ನು ಈ ಲೇಖಕ ಭೇಟ್ಟಿಮಾಡಿ ಮಾತಾಡಿಸಿದಾಗ ಪ್ರಸನ್ನರಾಗಿ ತಮ್ಮ 'ಲೀಡರ್ರು' 'ಯಜಮಾನ್ರು' ಎಂದೇ ಅಭಿಮಾನದಿಂದ ಕರೆಯುವ ಎಸ್ಸೆನ್ ಅವರೊಂದಿಗಿನ ಒಡನಾಟ ಅಥವಾ ಸಂಪರ್ಕದ ನೆನಪುಗಳನ್ನು ಅವರು ಬಿಚ್ಚಿಟ್ಟರು. ಆ ವಿವರಗಳನ್ನು ಅವರ ಮಾತಿನ ಧಾಟಿಯಲ್ಲೇ ಇಲ್ಲಿ ಸಂಗ್ರಹಿಸಿದೆ.

೧೯೪೪ರಿಂದ ೧೫ ವರ್ಷಕಾಲ ತುರುವನೂರು ಪುರಸಭೆಯ ಅಧ್ಯಕ್ಷನಾಗಿದ್ದೆ. ಮತ್ತೆ ೧೫ ವರ್ಷ ಅದರ ಸದಸ್ಯನಾಗಿದ್ದೆ. ಈಗಿನ ಕಾಲದಲ್ಲಾಗಿದ್ರೆ ಈ ಜಾತಿ ಆ ಜಾತಿ ಮತ್ತೆ ಮೀಸಲಾತಿ ಅಂತ ನಾನು ಮೆಂಬರ್ರೂ ಆಗ್ತಿರಲಿಲ್ಲ. ಇಡೀ ತುರನೂರಲ್ಲಿ ನಮ್ಮ ನೇಕಾರ ಜಾತಿಯೋರು ಇರೋದು ಕೇವಲ ಮೂರೇ ಮೂರು ಮನೆ. ನಮ್ಮ ಲೀಡರ್ರುಗಳು ಊರಿನ ಲಿಂಗಾಯ್ತರು, ರೆಡ್ಡಿಗಳು ನನ್ನ ಮೇಲೆ ವಿಶ್ವಾಸ ಇಟ್ಟು ನನ್ನ ಗೆಲ್ಲಿಸ್ತಿದ್ರು. ಲೀಡರ್ರೂ ಅಂದರೆ ಯಜಮಾನ್ರು (ನಿಜಲಿಂಗಪ್ಪನವರನ್ನು ಈ ಭಾಗದ ಜನ ಅಭಿಮಾನದಿಂದ ಹೀಗೆ ಸಂಬೋಧಿಸುತ್ತಿದ್ದರು). ಅವರು ನನಗೆ ಚಿಕ್ಕಂದಿನಿಂದ್ಲೂ ಬೇಕಾದೋರು.

೧೯೩೯ರಿಂದ ಅವರ ಜತೆಗಿನ ನನ್ನ ಒಡನಾಟ ಆರಂಭ ೧೮.೯.೧೯೩೯ರಂದು ತುರುವನೂರಿನ ಅರಣ್ಯ ಸತ್ಯಾಗ್ರಹ ಆರಂಭ ಆಯ್ತು. ಮೊದಲ ದಿನ ರಾಜಶೇಖರಯ್ಯ ಹಿರೇಮಠ, ಗೌಡ್ರ ತಿಪ್ಪಣ್ಣ, ಎಂ. ರಾಮರೆಡ್ಡಿ, ನೆಟ್ಟಕಲ್ ಹನುಮಂತಪ್ಪ ಮತ್ತು ಎರವನಾಗಪ್ಪ ಈಚಲ ಮರ ಕಡಿದರು. ಪೋಲೀಸರು ಅವರನ್ನ ಬಂಧಿಸಿದರು. ನಾವೆಲ್ಲ ಹುಡುಗರು ಅವರ ಜತೇಲೇ ಇದ್ವಿ, ನಮ್ಮನ್ನ ಅರೆಸ್ಟ್ ಮಾಡಲಿಲ್ಲ. ನಾಳೇ ಇನ್ನು ಜಾಸ್ತಿ ಮರ ಕಡೀಬೇಕು ಸತ್ಯಾಗ್ರಹ ಜೋರು ಮಾಡಬೇಕು, ಅಂತ ತೀರ್ಮಾನ ಮಾಡಿದ್ವಿ. ನಿಜಲಿಂಗಪ್ಪನೋರು ಬರ್ತೀನಿ ಅಂತ ಹೇಳಿದ್ರು. ಆದ್ರೆ ಅವತ್ ರಾತ್ರೀಲೆ ಪೋಲೀಸ್ನೋರು ಅರೆಸ್ಟ್ ಮಾಡಿ ಬಿಟ್ರು, ಅವರ್ನ. ನಮಿಗೆಲ್ಲ ಬಾಳಸಿಟ್ಟು ಬಂತು. ಎರಡನೇ ದಿನ ಐದು ಜನ ಗಂಡಸರು ಐದು ಜನ ಹೆಂಗಸರು ಸತ್ಯಾಗ್ರಹಿಗಳು ಮುಂದೆ ಮುಂದೆ, ನಾವೆಲ್ಲಾ ಹಿಂದೆ ಹಿಂದೆ, ಜಯಘೋಷ ಕೂಗಿ ಕೊಂಡು ಹೋಗಿ ಈಚಲ ಮರ ಕಡಿದಿವಿ. ಎಲ್ಲಾರ್ನೂ ಅರೆಸ್ಟ್ ಮಾಡಿದರು. ಸಂಜೆ ಕಡೆ ಹೆಣ್ಮಕ್ಕಳ ಬಿಟ್ ಬಿಟ್ರು. ಹಾಗೇ ಒಂದು ವಾರ ಸತ್ಯಾಗ್ರಹ ನಡೀತು. ನನ್ನೂ ಅರೆಸ್ಟ್ ಮಾಡಿ ಬೆಂಗಳೂರು ಜೈಲಿಗೆ ಕರಕಂಡೋದ್ರು. ಅಲ್ಲಿ ನಿಜಲಿಂಗಪ್ನೋರು, ಎಲ್. ಸಿದ್ದಯ್ಯ, ತಾಳಕೆರೆ ಸುಬ್ರಮಣ್ಯ ಇವರೆಲ್ಲ ಇದ್ರು.

ಆವಾಗ ಜೈಲಲ್ಲಿ ಒಬ್ಬೊಬ್ಬರಿಗೆ ೮೫ ತೊಲ ಅನ್ನ ಕೊಡತಿದ್ರು, ಮತ್ತೆ ಕ್ರಿಮಿನಲ್‌ಗಳು ಅಡಿಗೆ ಮಾಡಿ ಊಟ ಹಾಕತಿದ್ರು. ನಿಜಲಿಂಗಪ್ಪಾರು ಇದರ ವಿರುದ್ಧ ಸತ್ಯಾಗ್ರಹ ಮಾಡಾನಾಂದ್ರು, ಮಾಡಿದ್ವಿ. ಅದಕ್ಕೆ ಜೈಲು ಅಧಿಕಾರಿಗಳು ಬಗ್ಗಿದರು. ಸ್ವಾತಂತ್ರ್ಯ ಹೋರಾಟಗಾರರು ಅವರೆ ತಮ್ಮ ಅಡಿಗೆ ಮಾಡಿಕೊಳ್ಳಲು ಅನುಮತಿ ನೀಡಿದರು, ಆ ಮೇಲೆ ಅನ್ನಾನೂ ಜಾಸ್ತಿ ಕೊಡತಿದ್ರು.

ಹಾಗಿರಬೇಕಾದ್ರೆ ನಮ್ಮ ಹೋರಾಟಗಾರರಿಗೆ ಗಡ್ಡ ಬೆಳೆದು ಬಿಟ್ಟು ಮುಖ ಕ್ಷೌರ ಮಾಡಾಕೆ ಯಾರೂ ಇರಲಿಲ್ಲ. ಆವಾಗ ನಾನೇ ಮುಖ ಕ್ಷೌರ ಮಾಡಿಬಿಟ್ಟೆ! ನನಗೆ ಇದು ಹೊಸತು. ಆದರೂ ಹೆಂಗೋ ಮಾಡಿಬಿಟ್ಟೆ.

ಸ್ವಲ್ಪ ದಿನ ಆದ ಮ್ಯಾಲೆ ನಿಜಲಿಂಗಪ್ಪಾರು ಹಾಸನ ಜೈಲಿಗೆ ವರ್ಗಾಯಿಸಿದ್ರು. ನಮ್ಮನ್ನೆಲ್ಲಾ ಬೈರ ಮಂಗಲ ಕ್ಯಾಂಪ್‌ಗೆ ಕರಕಂಡೋಗಿ ಛಾನಲ್ ಅಗಿಯೋ ಕೆಲಸಕ್ಕೆ ನೇಮಿಸಿದರು. ಛಾನಲ್ ಅಗೆದೆವು. ಅನಂತರ ೧೯೪೦ರಲ್ಲಿ ಜಯಚಾಮ ರಾಜ ಒಡೆಯರ್‌ರಿಗೆ ಪಟ್ಟಾಭಿಷೇಕ ಆಯಿತು. ಆವಾಗ ನಮ್ಮನ್ನೆಲ್ಲಾ ಬಿಟ್ ಬಿಟ್ರು.

ಬಿಡುಗಡೆ ಆಗಿ ಊರಿಗೆ ಬಂದ್ವಿ. ಆವಾಗ ನಿಜಲಿಂಗಪ್ಪಾರೂ ನಾವ್ಯಾರೂ ಸುಮ್ಮನಿರ ಕೂಡದು. ಬ್ರಿಟಿಷ್ ಸರ್ಕಾರದ ವಿರುದ್ಧ ಸತ್ಯಾಗ್ರಹ ಚಳುವಳಿ. ಅವರ ಮೇಲೆ ಒತ್ತಡ ತರೋ ಅಂತ ಕೆಲಸ ಮಾಡತಿರಬೇಕು. ಅಂತ ಸೂಚನೆ ಕೊಟ್ರು. ಅದರಂತೆ ಕೊಂಡ್ಲಹಳ್ಳಿ ಅಶ್ವತ್ತಪ್ಪ ನಾನು ಸೇರಿಕೊಂಡು ಹೆಂಡದಂಗಡಿ ಸುಟ್ಟೆ ೬ ತಿಂಗಳು ಜೈಲಾಯಿತು. ಆಮೇಲೆ ಡಿಇಓ ಆಫೀಸ್ ದಾಖಲೆ ಪುಸ್ತಕ ಸುಟ್ಟೆವು.

ನಿಜಲಿಂಗಪ್ಪಾರು ಬೊಂಬಾಯಿಗೆ ೧೯೪೨ರ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮೀಟಿಂಗ್‌ಗೆ ಹೋಗಿದ್ರು. ಅಲ್ಲಿಂದ ಹಿಂತಿರುಗಿ ಬಂದ ಕೂಡಲೆ ಅರೆಸ್ಟ್ ಮಾಡಿದರು, ಸರ್ಕಾರದೋರು. ಅವರು ಜೈಲಿಗೋದ್ರು ಅಂತ ಸುಮ್ಮಿರಲಿಲ್ಲ. ನಾವು ರಸ್ತೆಮಾಚಿಕೆರೆ ಹೆಂಡದಂಗಡಿ ಸುಟ್ಟೆವು. ಹಾಗೇ ಕಣ್ಣು ತಪ್ಪಿಸಿ ಕಣ್ಣು ತಪ್ಪಿಸಿ ಹೆಂಡದಂಗಡಿ ಸುಡೋದು ಇತ್ಯಾದಿ ನಡದೇ ಇತ್ತು.

೧೯೪೭ರಲ್ಲಿ ಸ್ವಾತಂತ್ರ್ಯ ತಗಂಡ್ವಿ, ಬಾಳ ಸಂತೋಷ ಆಯ್ತು. ನಮ್ಮಲ್ಲಿ ವಿದ್ಯಾವಂತ ಆಗಿದ್ದೋರು ಅಧಿಕಾರಪಡೆದರು. ನಮ್ಮಂಥೋರು ಇಲ್ಲೇ ಉಳಕಂಡ್ವಿ. ಸರಕಾರಿ ಅಧಿಕಾರಿಗಳು ನಮ್ಮೋರೇ ಅದರೂ ಬಾಳ ಧಿಮಾಕು ಮಾಡತಿದ್ರು, ಈವಾಗೇನ್ ಕಮ್ಮಿ ಆಗಿಲ್ಲ.

೧೯೫೪ರಲ್ಲಿ ನಮ್ಮೂರಾಗೆ ಮಹಾತ್ಮ ಗಾಂಧಿ ಪ್ರತಿಮೆ ಅನಾವರಣ ಮಾಡಿಸಿದೆವು. ನಿಜಲಿಂಗಪ್ಪೋರು. ಎ.ಜಿ. ರಾಮಚಂದ್ರರಾವು, ಆಗಿನ ವಿದ್ಯಾಮಂತ್ರಿ ಇವರು ಬಂದಿದ್ರು.

ನಿಜಲಿಂಗಪ್ಪ ಅವರು ಮುಖ್ಯಮಂತ್ರಿ ಆಗಿದ್ದಾಗ ವಿಧಾನ ಸೌಧದಾಗೆ ಅವರ್ನ ಅನೇಕ ಸಲ ಹೋಗಿ ನೋಡಿದ್ದೆ. ಬಾಳ ಚೆಂದಾಗಿ ಮಾತಾಡಿಸೋರು. ಚೆನ್ನಯ್ಯ ಒಡೆಯರ್ ಮತ್ತೆ ಟಿ.ಎಂ.ಕೆ. ಪೀರ್ ಸಾಬ್ ಇವರನ್ನ, ಎಂ. ಎಲ್. ಸಿ. ಮಾಡಿದ್ರು. ಆಗ ನನಗೆ ಸ್ವಲ್ಪ ಅಸಮಾಧಾನ ಆಯ್ತು. ಅವರತ್ರ ಹೋಗಿ ಕೇಳಿದೆ. ನನಗೆ ಅರ್ಹತೆ ಇಲ್ವೆ?" ಅಂತ. ಏನೋ ಸಬೂಬು ಹೇಳಿ ಜಾರಿಕೊಂಡರು. ಏನ್ ಮಾಡೋದು? ಆದರೂ ಅವರ ಬಗ್ಗೆ ಇದ್ದ ನನ್ನ ಅಭಿಮಾನ ಕಮ್ಮಿ ಆಗಲಿಲ್ಲ.

ಕಾಂಗ್ರೆಸ್ ಪಕ್ಷ ಇಬ್ಭಾಗ ಆದಾಗ ನಮಿಗೆಲ್ಲಾ ಬಾಳ ಬೇಜಾರಾತು. ಆವಾಗ ನಿಜಲಿಂಗಪ್ಪೋರು ಇನ್ನು ಮೊದಲಿನ ಕಾಂಗ್ರೆಸ್ ಕಥೆ ಮುಗೀತ್ರಪ್ಪಾ" ಅಂತ ಬಾಳ ನೊಂದುಕೊಂಡ್ರು.

ಒಂದಿನ ಎಲ್ಲ ಅಧಿಕಾರ ಕೆಳಕೊಂಡು ದುರ್ಗಕ್ಕೆ ಹಿಂತಿರುಗಿದರು, ಯಜಮಾನ್ರು. ಅವಾಗ ಹೋಗಿ ಕಂಡೆ ಇಂದ್ರಾಗಾಂಧಿ ಬಗ್ಗೆ ಬಾಳ ಅಸಮಾಧಾನ, ಕೋಪ ಇತ್ತು ಅವರಲ್ಲಿ. (ಅದೆಲ್ಲ ಇರಲಿ ಬಿಡಪ್ಪಾ ನಿನ್ನ ಬಗ್ಗೆ ಹೇಳು.) ಮಕ್ಕಳು ಏನ್ ಮಾಡ್ತಾ ಇದ್ದಾರೆ." ಅಂತ ನನ್ನ ವಿಚಾರಿಸ್ತಾ ಇದ್ರು.

ಈ ವರ್ಷವೂ ಕಾಲಕ್ಕೆ ಸರಿಯಾಗಿ ಮಳೆ ಬೀಳಲಿಲ್ಲ ಯಾವ ವರ್ಷ ಸಕಾಲಕ್ಕೆ ಮಳೆ ಬಿದ್ದಿದೆ? ಈ ಪ್ರದೇಶದ ಜನ ಮಳೆ ನಂಬಿ ಹಾಳಾಗ್ತಾ ಇದಾರೆ. ಅಪ್ಪರ್ ಭದ್ರಾ ಯೋಜನೆ ಆಗಲೇಬೇಕು. ಈ ಪ್ರದೇಶದ ಭೂಮಿ, ತುಂಬಾ ಫಲವತ್ತಾದ್ದು. ಸರಿಯಾಗಿ ನೀರು ಕೊಟ್ರೆ ಬೇಕಾದ್ದು ಬೆಳೀ ಬೌದು' ಅನ್ನುತಿದ್ರು.

"ಗುಡಿ ಕೈಗಾರಿಕೆಗಳನ್ನು ನಮ್ಮೋರು ತಾತ್ಸಾರ ಮಾಡಿದರು. ಗ್ರಾಮಾಂತರದಲ್ಲಿ ಸತ್ತ ಪ್ರಾಣಿ ಚರ್ಮ, ಹದ ಮಡೋಕೇಂತ ನೂರಾರು ಮೈಲಿ ಪ್ರಯಾಣ ಮಾಡಿ ನಗರಕ್ಕೆ ಹೋಗುತ್ತೆ. ಅಲ್ಲಿಂದ ಚಪ್ಪಲಿ, ಷೂ ರೂಪದಲ್ಲಿ ಮತ್ತೆ ಇಲ್ಲಿಗೇ ಬರುತ್ತೆ. ಇಲ್ಲೇ ಚರ್ಮ ಕಾರ್ರು ಚರ್ಮ ಹದ ಮಾಡಬೇಕು. ನಮಗೆ ಬೇಕಾದ ಚಪ್ಪಲಿ ಇತ್ಯಾದಿ ನಮ್ಮ ಗ್ರಾಮಾಂತರ ಪ್ರದೇಶದಲ್ಲೇ ತಯಾರಾಗಬೇಕು. ಹಂಗಾದ್ರೆ ಬಾಳ ಸೋವಿ ದರದಾಗೆ ನಮ್ಮ ಜನ ಅವನ್ನ ಪಡೀತಾರೆ." ಅವರು ಹೇಳತಿದ್ರು. ಈವಾಗೀನ ನಾಯಕರು ವೀರೇಂದ್ರ ಪಾಟೀಲರು. ಹೆಗ್ಡೆಯವರು ದ್ಯಾವೇಗೌಡ್ರು, ಪಟೇಲ್ರು, ಎಸ್. ಎಂ. ಕೃಷ್ಣ, ಜಾಫರ್ ಶರೀಫು ಎಲ್ಲಾರೂ ಬಂದಾಗ್ಲೂ ಈ ಭಾಗಕ್ಕೆ ನೀರಾವರಿ ಯೋಜನೆ ಮಾಡ್ರಿ ಅಂತ ಕೇಳತಿದ್ರು. "ಇಂಥಾ ಕಾಳಜಿ ಇರೋ ನಾಯಕರು ಇನ್ನು ಸಿಗಾಕಿಲ್ಲ ಅಂದ್ಕೋತೀನಿ."

ಈ ಮಾತುಗಳನ್ನು ಹೇಳುತ್ತಿದ್ದಾಗ ಹನುಮಂತಪ್ಪನವರ ಕಣ್ಣು ಹನಿದುಂಬಿದವು. ❑

# "ಹೆಂಗೆ ಹೋಗಿದ್ರೋ ಹಂಗೇ ಬಂದ್ರು"

## ಎಂ. ಎಸ್. ಚಂದ್ರಶೇಖರಯ್ಯನವರ ಸಂದರ್ಶನ

ಪಿ. ಯಶೋದಾ

ಶ್ರೀ ಎಸ್. ಎಂ. ಚಂದ್ರಶೇಖರಯ್ಯನವರು ಹರಿಹರ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖರು. ಇವರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವ ಮೊದಲೇ ಎಸ್. ನಿಜಲಿಂಗಪ್ಪನವರು ಇವರ ಮೇಲೆ ಅಪಾರ ಪ್ರಭಾವ ಬೀರಿದ್ದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ದುಮುಕಿದ ನಂತರ ಒಂದೆರಡು ಬಾರಿ ಜೈಲಿನಲ್ಲಿ ಒಟ್ಟಿಗೆ ಇದ್ದವರು. ಆ ಸಂದರ್ಭದಲ್ಲಿ ಹಿರಿಯರಾಗಿದ್ದ ನಿಜಲಿಂಗಪ್ಪನವರ ಜೊತೆ ಆತ್ಮೀಯ ಒಡನಾಟ ಉಂಟಾಯಿತು; ಅವರ ಮಾರ್ಗದರ್ಶನ ದೊರೆಯಿತು. ಅಲ್ಲಿಂದ ಕೊನೆಯವರೆಗೂ ವಿಶ್ವಾಸವಿದ್ದು ಇಬ್ಬರೂ ಆಗಾಗ ಸೇರುತ್ತಿದ್ದರು. ಅಪ್ಪಟ ಗಾಂಧಿ ವಾದಿಯಾಗಿದ್ದ ನಿಜಲಿಂಗಪ್ಪನನವರ ವಿಚಾರಗಳನ್ನು ಶ್ರೀಯುತರು ಮೆಚ್ಚಿ ಕೊಂಡಿದ್ದರಲ್ಲದೆ ಅವರ ಹಾದಿಯಲ್ಲೇ ಸಾಗಿಬಂದಿದ್ದಾರೆ.

ಎಸ್. ಎಂ. ಚಂದ್ರಶೇಖರಯ್ಯನವರು ೧೯೨೪ರಲ್ಲಿ ಹರಿಹರ ತಾಲ್ಲೂಕಿನ ಸಂದಿಗಾವಿ ಗ್ರಾಮದಲ್ಲಿ ಬಸವಯ್ಯ ಮತ್ತು ಚೆನ್ನಬಸಮ್ಮ ದಂಪತಿಗಳಿಗೆ ಮಗನಾಗಿ ಜನಿಸಿದರು. ಪ್ರಾಥಮಿಕ ಮಾಧ್ಯಮಿಕ, ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿ ದಾವಣಗೆರೆಯಲ್ಲಿ ಇಂಟರ್ ಮೀಡಿಯೆಟ್ ಮಾಡಲು ಹೋದಾಗ ಸ್ವಾತಂತ್ರ್ಯ ಸಂಗ್ರಾಮ ಅವರನ್ನು ಸೆಳೆಯಿತು; ಅವರು ತಮ್ಮ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಕೊಟ್ಟರು.

೧೯೪೧ರಲ್ಲಿ ಹರಿಹರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಅವರು ಅಲ್ಲಿ ಸ್ವಯಂಸೇವಕರಾಗಿ ಕೆಲಸ ಮಾಡಿದರು. ಆಗ ಸ್ವಾಗತ ಸಮಿತಿಯ ಕಾರ್ಯದರ್ಶಿಗಳಾಗಿದ್ದ ನಿಜಲಿಂಗಪ್ಪನವರ ವ್ಯಕ್ತಿತ್ವದ ಮೋಡಿಗೊಳಗಾಗಿ, ಮುಂದಿನ ದಿನಗಳಲ್ಲಿ ಅವರ ಪ್ರಭಾವ,

ಪ್ರೇರಣೆಗಳೊಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸ್ವಾತಂತ್ರ್ಯ ಸಿಗುವವರೆಗೆ ಹೋರಾಡಿದರು. 'ಕ್ವಿಟ್ ಇಂಡಿಯಾ', 'ಮೈಸೂರು ಚಲೋ', 'ಕರ್ನಾಟಕ ಏಕೀಕರಣ' ಈ ಚಳುವಳಿ ಸಂದರ್ಭಗಳಲ್ಲೆಲ್ಲ ಭಾಗವಹಿಸಿದ್ದಾರೆ. ಸ್ವಾತಂತ್ರ್ಯ ಬಂದಮೇಲೂ, ನಿಜಲಿಂಗಪ್ಪನವರು ವಿಶಾಲ ಮೈಸೂರಿನ ಮುಖ್ಯಮಂತ್ರಿಯಾದಾಗಲೂ ಯಾವ ಅಧಿಕಾರವನ್ನೂ ಅಪೇಕ್ಷಿಸದೆ ವಂಶಪಾರಂಪರ್ಯವಾಗಿ ಬಂದ ಕೃಷಿಭೂಮಿಯಲ್ಲೇ ವ್ಯವಸಾಯ ಮಾಡುತ್ತ ಜೀವನ ನಡೆಸುತ್ತಿದ್ದಾರೆ. ಅವರಿಗೆ ಇಬ್ಬರು ಹೆಣ್ಣು ಮಕ್ಕಳಿದ್ದು ವಿವಾಹ ಮಾಡಿಕೊಟ್ಟಿದ್ದಾರೆ. ಇತ್ತೀಚೆಗೆ ಪತ್ನಿಯನ್ನು ಕಳೆದುಕೊಂಡು ಏಕಾಂಗಿಯಾಗಿದ್ದಾರೆ. ಈ ವಯಸ್ಸಿನಲ್ಲೂ ತರುಣ ಮನಸ್ಸಿನ ಚಟುವಟಿಕೆಯಿಂದ ಇರುವುದು ಅವರ ಮಾತಿನಲ್ಲಿ ಕಾಣುತ್ತದೆ. ಶ್ರೀ ನಿಜಲಿಂಗಪ್ಪನವರ ಬಗ್ಗೆ ಮಾತನಾಡಲು ದಿ. ೨೬.೧೧.೨೦೦೩ರಂದು ಹರಿಹರಕ್ಕೆ ಅವರಲ್ಲಿಗೆ ಹೋದಾಗ, ಅಲ್ಲಿಯ ಇನ್ನೊಬ್ಬ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಕೊಟ್ರಪ್ಪ ಎಂಬುವರು ನಿಧನರಾಗಿದ್ದು ಅವರಿಗೆ ಅಂತಿಮ ಗೌರವ ಸಲ್ಲಿಸಿ ಬಂದ ಚಂದ್ರಶೇಖರಯ್ಯನವರಲ್ಲಿ ವಿಷಾದ ಕಾಣುತ್ತಿತ್ತು. ಕೊಟ್ರಪ್ಪನವರ ಜೊತೆ ಸ್ವಾತಂತ್ರ್ಯಕ್ಕೆ ಹೋರಾಡಿದ ದಿನಗಳ ನೆನಪಿನ ಗುಂಗಿನಲ್ಲಿ ಅವರಿದ್ದರು. ನಾವು ನಿಜಲಿಂಗಪ್ಪನವರ ಬಗ್ಗೆ ಕೇಳಿದಾಗ ಬಹಳ ಉತ್ಸಾಹದಿಂದಲೇ ಅಂದಿನ ದಿನಗಳ ತಮ್ಮ ಅನುಭವಗಳನ್ನು ಹಂಚಿಕೊಂಡರು. ಆ ಸಂದರ್ಭದಲ್ಲಿ ಲೇಖಕಿ, ಪತ್ರಕರ್ತೆ ಶ್ರೀಮತಿ ಚಂದನಾ ಅವರೂ ನಮ್ಮ ಜೊತೆಯಲ್ಲಿದ್ದು ಸಹಕರಿಸಿದರು.

**ಪ್ರಶ್ನೆ** : ನಿಜಲಿಂಗಪ್ಪನವರನ್ನು ಮೊದಲ ಬಾರಿ ನೋಡಿದ್ದು ಯಾವಾಗ? ಎಲ್ಲಿ?

**ಚಂ. ಶೇ:** ನಾನಿನ್ನೂ ಆವಾಗ ಹೈಸ್ಕೂಲು ಓದುತ್ತಾ ಇದ್ದೆ: ೧೯೪೧ನೇ ಇಸವಿಯ ಆ ದಿನಗಳಲ್ಲಿ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳು ಬಹಳ ಜೋರಾಗಿದ್ದವು. ಆಗ ಹರಿಹರದಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆಯಿತು. ಬಾಬು ರಾಜೇಂದ್ರ ಪ್ರಸಾದರು ಅದರ ಅಧ್ಯಕ್ಷರಾಗಿ ಹಿರಿಯರಾದ ನಿಜಲಿಂಗಪ್ಪನವರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು. ನಾವೆಲ್ಲ ಹೈಸ್ಕೂಲು ಹುಡುಗರು. ಆ ಅಧಿವೇಶನಕ್ಕೆ ನಮ್ಮನ್ನು ಸ್ವಯಂ ಸೇವಕರನ್ನಾಗಿ ತೆಗೆದುಕೊಂಡಿದ್ದರು. ಏನೋ ಒಂದು ರೀತಿಯ ಹುರುಪು, ಏನೋ ದೊಡ್ಡ ಕೆಲಸ ಮಾಡುತ್ತಾ ಇದ್ದೇವೆ ಅನ್ನುವ ಧನ್ಯತಾ ಭಾವನೆ. ಅಧಿವೇಶನದ ಸಿದ್ಧತೆಗಾಗಿ ಎರಡು ದಿನ ಮೊದಲೇ ಬಂದ ಅವರು ಅತ್ಯಂತ ಚಟುವಟಿಕೆಯಿಂದ ಎಲ್ಲವೂ ಅಚ್ಚುಕಟ್ಟಾಗಿ, ಶಿಸ್ತಾಗಿ ನಡೆಯಬೇಕು ಎನ್ನುವ ಕಾಳಜಿಯಿಂದ ಎಲ್ಲದರ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದರು. ಪಾದರಸದಂತೆ ಚುರುಕಾಗಿ ಓಡಾಡುತ್ತಿದ್ದ ಅವರಿಂದ ನಾನು ಬಹಳ ಆಕರ್ಷಿಸಲ್ಪಟ್ಟೆ. ಅವರ ಶುಭ್ರ ಸ್ವಚ್ಛ ವ್ಯಕ್ತಿತ್ವ ನನ್ನ ಮೇಲೆ ಅಪಾರ ಪ್ರಭಾವ ಬೀರಿತು. ನಾನು ಬಹಳ ವಿಧೇಯತೆಯಿಂದ ಅವರ ಹಿಂದೆ ಮುಂದೆ ಓಡಾಡುತ್ತ ಅವರು ಹೇಳಿದ ಎಲ್ಲಾ ಕೆಲಸಗಳನ್ನು ಮಾಡುತ್ತಾ ಇದ್ದೆ. ಬಹುಶಃ ನನ್ನ ಕೆಲಸ ಹಾಗು ವಿಧೇಯತೆ ಅವರಿಗೆ ಇಷ್ಟ ಆಗಿರಬೇಕು. ಸಣ್ಣ ಪುಟ್ಟ ಕೆಲಸಗಳಿಗೆ ನನ್ನನ್ನೇ ಕರೀತಾ ಇದ್ದರು. ಸಮಯ ಸಿಕ್ಕಾಗ ನಮ್ಮಂತಹ ಸಣ್ಣ ಹುಡುಗರಿಗೆ "ಪ್ರಾಮಾಣಿಕ ವಾಗಿರಬೇಕು, ಚೆನ್ನಾಗಿ ಓದಬೇಕು, ಸೋಮಾರಿಗಳಾಗಬಾರದು" ಅಂತ ಹೇಳುತ್ತಿದ್ದರು. ಅದಿನ್ನೂ ನನಗೆ ಚೆನ್ನಾಗಿ ನೆನಪಿದೆ.

**ಪ್ರಶ್ನೆ** : ನೀವೂ ನಿಜಲಿಂಗಪ್ಪನವರೂ ಸ್ವಾತಂತ್ರ್ಯ ಹೋರಾಟದಲ್ಲಿ ಜೊತೆಯಲ್ಲಿದ್ದಿರಾ?

**ಚಂ. ಶೇ** : ಹಾಗೆ ಅವರೂ ನಾನೂ ಜೊತೆಗೆ ಸೇರಿ ಮಾಡಲಿಲ್ಲ. ಆದರೆ ಜೈಲಲ್ಲಿ ಒಟ್ಟಾಗಿ ಇದ್ದೆವು. ೧೯೪೨ರ 'ಕ್ವಿಟ್ ಇಂಡಿಯ' ಚಳುವಳಿ, 'ಮೈಸೂರು ಚಲೋ' ಚಳುವಳಿ ಇವುಗಳಲ್ಲೆಲ್ಲ ಅವರು ಇದ್ದಕಡೆ ಅವರು, ನಾನು ಇದ್ದ ಕಡೆ ನಾನು ಹೋರಾಟ ಮಾಡಿ ಬಂಧಿತರಾದೆವು. ಚಿತ್ರದುರ್ಗ ನಂತರ ಬಳ್ಳಾರಿಯ ಜೈಲಿನಲ್ಲಿ ಒಟ್ಟಿಗೆ ಇದ್ದೆವು.

**ಪ್ರಶ್ನೆ** : ಜೈಲಿನಲ್ಲಿ ಅವರೊಟ್ಟಿಗೆ ಇದ್ದ ನಿಮ್ಮ ಅನುಭವ ಹೇಗಿತ್ತು?

**ಚಂ. ಶೇ** : ಅವರ ಜೊತೆ ಇದ್ದದ್ದೆ ಒಂದು ವಿಶೇಷ ಅನುಭವ. ಅವರು ನನಗಿಂತ ತುಂಬ ಹಿರಿಯರು. ನನ್ನನ್ನು ಕುರಿತು ಅವರಿಗೆ ಏನೋ ಒಂದು ವಿಧವಾದ ಪ್ರೀತಿ. ನನಗೋ ಅವರ ಬಗ್ಗೆ ಭಕ್ತಿ ಗೌರವ. ಅವರ ನಡವಳಿಕೆಯನ್ನು ಗಮನಿಸುತ್ತಿದ್ದೆ. ಅವರದು ಬಹಳ ಶಿಸ್ತುಬದ್ಧ ಜೀವನ. ಬೆಳಗ್ಗೆ ಬೇಗ ಏಳುತ್ತಿದ್ದರು. ಅನೇಕ ಪುಸ್ತಕಗಳನ್ನು ಓದುತ್ತಿದ್ದರು. ಸಾಯಂಕಾಲದ ಹೊತ್ತು ಸ್ವಾತಂತ್ರ್ಯದ ಬಗ್ಗೆ ದೇಶಭಕ್ತಿಯ ಬಗ್ಗೆ ಅನೇಕ ವಿಷಯಗಳನ್ನು ಹೇಳುತ್ತಿದ್ದರು. ಜೈಲಿನಲ್ಲಿ ಏನಾದರೂ ಅನ್ಯಾಯ ನಡೆದರೆ ಪ್ರತಿಭಟಿಸುತ್ತಿದ್ದರು. ಜೈಲಿನಲ್ಲಿ ನಮಗೆ ಕೊಡುವ ಊಟ ಸರಿಇರುತ್ತಿರಲಿಲ್ಲ. ಆಗ ಪ್ರತಿಭಟನೆ ಮಾಡಿ ಸರಿಯಾದ ಊಟ ಸಿಗೋ ಹಾಗೆ ಮಾಡಿದರು.

**ಪ್ರಶ್ನೆ** : ಸ್ವಾತಂತ್ರ್ಯ ಬಂದ ಮೇಲೆ ಅವರ ಪ್ರತಿಕ್ರಿಯೆ ಹೇಗಿತ್ತು? ನಂತರ ನಿಮ್ಮ ಅವರ ಒಡನಾಟ ಹೇಗಿತ್ತು.?

**ಚಂ. ಶೇ** : ಸ್ವಾತಂತ್ರ್ಯ ಬಂದಾಗ ಅವರು ಬಹಳ ಸಂಭ್ರಮ ಪಟ್ಟರು. ಭಾರತ ದೇಶ ಮುಂದುವರಿಯಬೇಕು. ಇತರೆ ದೇಶಗಳ ಜೊತೆ ಹೆಜ್ಜೆ ಹಾಕಬೇಕು, ಬಹಳ ಸುಧಾರಣೆಯಾಗಬೇಕು. ಹಳ್ಳಿಗಳೇ ಹೆಚ್ಚು ಇರುವುದರಿಂದ ಕೃಷಿಅಭಿವೃದ್ಧಿ ಆಗಬೇಕು. ಕೆರೆ ಕುಂಟೆ ನದಿ ನೀರು ಪೂರ್ಣ ಪ್ರಮಾಣದಲ್ಲಿ ಉಪಯೋಗವಾಗಬೇಕು. ಹರಿದು ಹಂಚಿರುವ ಕನ್ನಡ ನಾಡು ಒಂದುಗೂಡಬೇಕು - ಇವೇ ಯೋಚನೆಗಳು ಅವರ ತಲೆಯಲ್ಲಿದ್ದವು.

**ಪ್ರಶ್ನೆ** : ಕನ್ನಡ ಏಕೀಕರಣ ಹೋರಾಟ ಸಮಿತಿ ಒಳಗೆ ನೀವೂ ಇದ್ದು, ಏಕೀಕರಣಕ್ಕೆ ಮನವಿ ಸಲ್ಲಿಸಲಿಕ್ಕೆ ಡೆಲ್ಲಿಗೆ ಹೋಗಿದ್ದಿರಂತೆ ಹೌದೇ?

**ಚಂ. ಶೇ.** - ಹೌದು. ಆಗ ನಿಜಲಿಂಗಪ್ಪನವರು ಎಂ. ಪಿ. ಆಗಿದ್ದರು. ಆ ಸಮಯ ನಮ್ಮ (ಹಳೇ) ಮೈಸೂರಿನಿಂದ ೯ ಜನರ ಒಂದು ನಿಯೋಗ ಹೋಗಿತ್ತು. ಜಿಲ್ಲಾ ಕಾಂಗ್ರೆಸ್ ಪ್ರೆಸಿಡೆಂಟ್ ಆದ ನಾನೂ ಅದರಲ್ಲಿ ಒಬ್ಬನಾಗಿ ಹೋಗಿದ್ದೆ. ಆಗ ನಿಜಲಿಂಗಪ್ಪನವರು ಏಕೀಕರಣದ ಪರ ಇದ್ದು ಭಾಷಾವಾರು ಪ್ರಾಂತಗಳ ರಚನೆ ಆಗಲೇಬೇಕು ಎನ್ನುತ್ತಿದ್ದರು. ನೆಹರೂ ಅವರು 'ಆ ವಿಚಾರ ಕೈಬಿಡಿರಿ' ಅಂತ ಹೇಳಿದರೂ ಅವರು ಬಿಡಲಿಕ್ಕೆ ಸಿದ್ಧರಿರಲಿಲ್ಲ. ನಾವು ಈ ವಿಚಾರವಾಗಿಯೇ ದೆಹಲಿಗೆ ಹೋದಾಗ ನಮಗೆ ವಲ್ಲಭಭಾಯಿ ಪಟೇಲರನ್ನು ಭೇಟಿ ಮಾಡಿಸಿದ್ದು ನಿಜಲಿಂಗಪ್ಪನವರೇ. ಪಟೇಲರನ್ನು ಭೇಟಿಮಾಡೋದು ಆವಾಗ ಅಷ್ಟು ಸುಲಭ ಇರಲಿಲ್ಲ. ಬೆಳಗಿನ ಜಾವ ೪ ಗಂಟೆಗೆ ಕೇವಲ ೨೦ ನಿಮಿಷ ಭೇಟಿ ಮಾಡಿ ಮನವಿಕೊಟ್ಟು ಬಂದೆವು. ಆಗ ನಮ್ಮ ಊಟ ವಸತಿ ಮುಂತಾದ ಎಲ್ಲ ಅನುಕೂಲವನ್ನು ಅವರು ಬಹಳ ಸಂತೋಷದಿಂದ ಮಾಡಿದರು. ನಾವಷ್ಟೇ ಅಲ್ಲ, ಮೈಸೂರಿನಿಂದ ಯಾರೇ ಹೋದರೂ ಅವರಿಗೆ ಎಲ್ಲ ಅನುಕೂಲ ಮಾಡುತ್ತಿದ್ದರು.

**ಪ್ರಶ್ನೆ** : ಅವರು ಮುಖ್ಯ ಮಂತ್ರಿಯಾದ ಮೇಲೆ ನಿಮ್ಮೊಡನೆ ಹೇಗಿದ್ದರು?

**ಚಂ. ಶೇ** : ಯಾವಾಗಲೂ ಅವರು ಒಂದೇ ರೀತಿನೇ ಇದ್ರು. ನಾನು ಜಂಗಮನಾಗಿದ್ದರಿಂದ ಇರಬೇಕು, 'ಗುರುವೇ' ಅಂತ ಮಾತನಾಡಿಸುತ್ತಿದ್ದರು. ಯಾವುದೇ ಸಾರ್ವಜನಿಕ ಕೆಲಸಗಳನ್ನು ತೆಗೆದುಕೊಂಡು ಹೋದರೂ ಅವರು ಮಾಡಿ ಕೊಡುತ್ತಿದ್ದರು. ಹೋದಾಗೆಲ್ಲ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ನಮ್ಮ ಕೆಲವು ಸ್ನೇಹಿತರನ್ನು - "ಆ ಚೆನ್ನಪ್ಪ ಹೆಂಗದಾನೆ? ಕುರುಬರ ಹನುಮಂತಪ್ಪ ಹೆಂಗದಾನೆ? ಶೇಷಪ್ಪ ಗೌಡರ ಮಲ್ಲಪ್ಪ? ಅವನ ಮಕ್ಕಳು ಏನುಮಾಡ್ತಿದ್ದಾರೆ?" ಅಂತ ಬಹಳ ನೆನಪಿನಿಂದ ವಿಚಾರಿಸಿಕೊಳ್ಳುತ್ತಿದ್ದರು. ಅವರ ಮನೆಗೆ ಆಗಾಗ ಹೋಗುತ್ತಿದ್ದೆವು. ಒಂದು ದಿನ ಅವರೂ ಅವರ ಹೆಂಡತಿ ಮುರಿಗೆಮ್ಮನವರೂ ನನ್ನ ಹೆಂಡತಿ ಮಕ್ಕಳನ್ನು ಕರೆಸಿಕೊಂಡು ಅವರಿಗೆ ಉಣಿಸಿ, ತಿನಿಸಿ, ಉಪಚರಿಸಿ, ಪ್ರೀತಿ ತೋರಿ ಕಳುಹಿಸಿದರು. ಅವರಿಗೆ ಅಷ್ಟೊಂದು ವಾತ್ಸಲ್ಯ ಇತ್ತು. ನನ್ನ ಪತ್ನಿಗೆ "ಮಂಗಳಮ್ಮ, ನಿಮ್ಮ ಯಜಮಾನ್ರಿಗೆ ಏನೂ ಅನ್ನಬೇಡವ್ವ. ಅವರು ಪ್ರಾಮಾಣಿಕರು. ಅವರ ದಾರಿಯಲ್ಲಿ ಅವರು ಹೋಗ್ತಾರೆ" ಅಂತ ಹೇಳುವುದನ್ನು ಮರೆಯಲಿಲ್ಲ.

**ಪ್ರಶ್ನೆ** : ಅವರು ಮುಖ್ಯಮಂತ್ರಿ ಆಗಿದ್ದ ಕಾಲದಲ್ಲಿ ನೀವು ಯಾವುದೇ ಸ್ಥಾನ ಮಾನ ಕೇಳಲಿಲ್ಲವೆ? ನಿಮ್ಮನ್ನು ಯಾವುದಾದರೂ ಮಂಡಳಿಗೆ ಚೇರ್‌ಮನ್ ಅಥವಾ ಅಧ್ಯಕ್ಷರನ್ನಾಗಿ ಮಾಡಲಿಲ್ಲವ?

**ಚಂ. ಶೇ** : ಇಲ್ಲ. ಏಕೋ ನಾನೂ ಕೇಳಲಿಲ್ಲ. ಅವರೂ ಮಾಡಲಿಲ್ಲ. ಹಾಗೆ ಅವರು ಸ್ನೇಹಿತರು ಸಂಬಂಧಿಕರು ಅಂತ ವ್ಯಾಮೋಹ ತೋರಿಸುತ್ತಿರಲಿಲ್ಲ. ಬಂದು ಸಾರಿ ತಮ್ಮ ಮಂತ್ರಿ ಸಂಪುಟಕ್ಕೆ ಗಾಂಜಿ ವೀರಪ್ಪ ಅವರನ್ನು ತಗೋಬೇಕು ಅಂತ ದಾವಣಗೆರೆ ಜನ ಒತ್ತಾಯಮಾಡಿದರು. ಆದರೆ ಅವರು ಕೊಂಡಜ್ಜಿ ಬಸಪ್ಪನವರನ್ನು ತಗೊಂಡರು. ಯಾರು ಯಾವುದಕ್ಕೆ ಅರ್ಹರು ಅಂತ ಅನ್ನಿಸುತ್ತಿತ್ತೋ ಅವರನ್ನೇ ತೆಗೆದುಕೊಳ್ಳುತ್ತಿದ್ದರು. ಹೆಗಡೆಯವರು ಮುಖ್ಯ ಮಂತ್ರಿಯಾದಾಗ ಒಂದು ಸಾರಿ ಹೆಗಡೆಯವರಿಗೆ "ಈ ವ್ಯಕ್ತಿ ಬಹಳ ಪ್ರಾಮಾಣಿಕರು, ಸ್ವಾತಂತ್ರ್ಯ ಹೋರಾಟಗಾರರು. ಯಾವುದಾದರೂ ಮಂಡಳಿಯ ಅಧಿಕಾರ ಸ್ಥಾನ ಕೊಡಿ" ಅಂತ ಪತ್ರ ಕೊಟ್ಟಿದ್ದರು. ಆದರೆ ಅದು ಆಗಲಿಲ್ಲ. ಆ ಬಗ್ಗೆ ನಾನೂ ಅವರಲ್ಲಿ ಏನೂ ಹೇಳಲಿಲ್ಲ.

**ಪ್ರಶ್ನೆ** : ಅವರು ರಾಜ್ಯದ ಅಭಿವೃದ್ಧಿಗೆ ಕೈಗೊಂಡ ಸುಧಾರಣೆಗಳ ಬಗ್ಗೆ ನಿಮ್ಮ ಅಭಿಪ್ರಾಯ ಏನು? ನೀವು ಮೆಚ್ಚಿಕೊಂಡ ಕಾರ್ಯಗಳು ಯಾವುವು?

**ಚಂ. ಶೇ** : ಅವರಿಗೆ ಕೃಷಿಅಭಿವೃದ್ಧಿಯ ಬಗ್ಗೆ ಬಹಳ ಒಲವು ಇತ್ತು. ರೈತರು ಎರಡು ಹೊತ್ತು ಹೊಟ್ಟೆ ತುಂಬಾ ಊಟ ಮಾಡಬೇಕು. ವ್ಯವಸಾಯಕ್ಕೆ ಅನುಕೂಲವಾಗುವ ಕೈಗಾರಿಕೆಗಳನ್ನು ಮಾಡಬೇಕು. ನೀರಾವರಿಯ ಮೂಲಕ ಕೃಷಿ ಮಾಡಬೇಕು. ಕೆರೆ, ಕುಂಟೆ, ಹಳ್ಳ ಏನಿದ್ದರೂ ಸರಿಯಾಗಿ ಉಪಯೋಗ ಆಗಬೇಕು. ವ್ಯವಸಾಯದ ಅಭಿವೃದ್ಧಿಗೆ ಸಂಶೋಧನೆಗಳು ಆಗಬೇಕು ಅನ್ನುತ್ತಿದ್ದರು. ಆದ್ದರಿಂದಲೇ ಅವರ ಕಾಲದಲ್ಲಿ ಹೆಚ್ಚು ಜಲಾಶಯಗಳ ನಿರ್ಮಾಣ ಆಯ್ತು. ಕೃಷ್ಣಾ, ತುಂಗಭದ್ರಾ, ಶರಾವತಿ ಮುಂತಾದ ಯೋಜನೆಗಳು ಆಗಿದ್ದು ಆಗಲೇ. ಬೆಂಗಳೂರಲ್ಲಿ ಕೃಷಿ ವಿಶ್ವವಿದ್ಯಾಲಯ ಆಯ್ತು. ಕೃಷಿ ಅಭಿವೃದ್ಧಿಯಿಂದ ಎಲ್ಲಾ ಸಮಸ್ಯೆಗಳ ಪರಿಹಾರ ಮಾಡಬಹುದು ಅಂತ ಆಗಾಗ್ಗೆ ಹೇಳುತ್ತಿದ್ದರು. ಅಪ್ಪರ್ ಭದ್ರಾ ಆಗಬೇಕು ಅಂತ ಹಲವಾರು ಮಂತ್ರಿಗಳಿಗೆ

ನೂರಾರು ಪತ್ರ ಬರೆದರು. ಆದರೆ ಅದು ಇನ್ನೂ ಆಗಿಲ್ಲ. ಅದು ಅವರಿಗೆ ಬಹಳ ಯೋಚನೆ ಆಗಿತ್ತು. ನಾನು ಹೋದಾಗೆಲ್ಲ ಅದನ್ನೇ ಮಾತಾಡುತ್ತಿದ್ದರು.

**ಪ್ರಶ್ನೆ** : ಕಾಂಗ್ರೆಸ್ ಪಾರ್ಟಿ ಒಡೆದಾಗ, ಅವರು ಚುನಾವಣೆಗೆ ನಿಂತು ಸೋತಾಗ ನಿಮ್ಮ ಹತ್ತಿರ ಏನಾದರೂ ಬೇಸರ ತೋಡಿಕೊಂಡಿದ್ದರಾ?

**ಚಂ. ಶೇ.** : ಇಲ್ಲ ಬಿಡ್ರಿ. ಏನೂ ಅಂಥಾ ಬೇಸರ ಇರಲಿಲ್ಲ. 'ಏನು ಮಾಡೋದಪ. ಆಗೋದು ಆತು. ಜನ ಏನು ತೀರ್ಮಾನ ಕೊಡ್ತಾರೋ, ಅದನ್ನು ನಾವು ಒಪ್ಪಬೇಕು' ಅನ್ನುತ್ತಿದ್ದರು. ಅವರಿಗೆ ಅಧಿಕಾರದ ಆಸೆಯಾಗಲಿ ದುಡ್ಡಿನ ಆಸೆಯಾಗಲಿ ಇರಲಿಲ್ಲ. ರಾಷ್ಟ್ರಪತಿ ಆಗುವ ಅವಕಾಶ ಬಂದರೂ ಅದನ್ನು ಅವರೇ ಬಿಟ್ಟರು. 'ಭಾರತರತ್ನ' ಪ್ರಶಸ್ತಿಯನ್ನು ಬೇಡ ಅಂತ ಬಿಟ್ಟರು. ಒಂದು ಬಿಡಿಗಾಸೂ ದುಡ್ಡು ಮಾಡಲಿಲ್ಲ. ಮನಸ್ಸು ಮಾಡಿದ್ದರೆ ಅವರು ಹಣ ಆಸ್ತಿ ಮಾಡಬಹುದಿತ್ತು. ಈಗಿರುವ ಮನೆಯೂ ಅವರು ವಕೀಲರಾಗಿದ್ದಾಗ ಕಟ್ಟಿಸಿದ್ದು. ಈ ಮನೆಯಿಂದ ಅವರು ಹೆಂಗೆ ಹೋಗಿದ್ರೋ ಹಂಗೇ ಬಂದ್ರು.

**ಪ್ರಶ್ನೆ** : ನೀವು ಅವರ ಮನೆಗೆ ಆಗಾಗ ಹೋಗ್ತಾ ಇದ್ದೆ ಅಂದ್ರಲ್ಲ, ನಮ್ಮಪ್ಪ ಹಣ ಮಾಡಲಿಲ್ಲ, ಆಸ್ತಿ ಮಾಡಲಿಲ್ಲ, ನಮ್ಮನ್ನು ರಾಜಕೀಯಕ್ಕೆ ತರಲಿಲ್ಲ ಅಂತ ಅವರ ಮಕ್ಕಳಲ್ಲಿ ಏನಾದರೂ ಅಸಮಾಧಾನ ಕಾಣಿಸ್ತಿತ್ತಾ?

**ಚಂ. ಶೇ.** : ಇಲ್ಲ, ಆ ಥರದ್ದೇನೂ ಇರಲಿಲ್ಲ. ತಾಯಿ ಮುರಿಗೆಮ್ಮನವರೂ ಹಂಗೆ ಇರಲಿಲ್ಲ. ಹೆಣ್ಣು ಮಕ್ಕಳಿಗೆ ಒಳ್ಳೊಳ್ಳೆ ಕಡೆ ಕೊಟ್ಟು ಮದುವೆ ಮಾಡಿದ್ದರು. ಕೆಲವರು, "ನೀವು ಗಂಡು ಮಕ್ಕಳ ಮದುವೆ ಮಾಡಲಿಲ್ಲ" ಅಂದರೆ, "ಅವರು ಒಪ್ಪಿದರೆ ಮಾಡ್ಬಹುದಪ್ಪ. ಅವರೇ ಯಾಕೋ ಒಪ್ತಾ ಇಲ್ಲ" ಅಂತಿದ್ದರು. ಆದರೆ ಅವರು ಮಕ್ಕಳಿಗೂ ಯಾರಿಗೂ ಯಾವ ಒತ್ತಾಯವನ್ನೂ ಮಾಡ್ತಾ ಇರಲಿಲ್ಲ. ಮಕ್ಕಳಿಗೆ ಬೇಕಾದ ಸ್ವಾತಂತ್ರ್ಯ ಇತ್ತು.

**ಪ್ರಶ್ನೆ** : ಇತ್ತೀಚೆಗಿನ ಭಾರತದ ರಾಜಕೀಯ ಸ್ಥಿತಿಗತಿಗಳ ಬಗ್ಗೆ ನಿಮ್ಮ ಹತ್ರ ಏನಾದರೂ ಹೇಳುತ್ತಿದ್ದರೇ?

**ಚಂ.ಶೇ.** : ಹೌದು. ಇತ್ತೀಚಿನ ರಾಜಕಾರಣಿಗಳ ಬಗ್ಗೆ ಅವರಿಗೆ ಬಹಳ ಬೇಸರ ಇತ್ತು. ರಾಜಕಾರಣಿಗಳ ವಿಷಯ ಎತ್ತಿದ ಕೂಡಲೇ "ಹೊಲಸು ರಾಜಕೀಯ" ಬಹುಪಾಲು ಭ್ರಷ್ಟರಾಗಿ ಹೋಗಿದ್ದಾರೆ. ಅವರೆಲ್ಲರಿಗೂ ಅಧಿಕಾರದ ಆಸೆ. ದೇಶಕ್ಕೆ ಒಳ್ಳೇದು ಮಾಡಬೇಕು ಅಂತ ರಾಜಕೀಯಕ್ಕೆ ಬರಲ್ಲ" ಅಂತಿದ್ದರು. ಆ ಬಗ್ಗೆ ಅವರಿಗೆ ತುಂಬಾ ನೋವು ಇತ್ತು. ಅದರ ಜೊತೆಯಲ್ಲೇ, ಈ ಪರಿಸ್ಥಿತಿ ಒಂದಲ್ಲ ಒಂದು ದಿನ ಸರಿಹೋಗಬಹುದು ಅನ್ನೋ ಆಸೇನೂ ಇತ್ತು.

ಎಸ್ಸೆನ್ ಅವರು ಹೇಳುತ್ತಿದ್ದಂತೆ ದೇಶದ ಇಂದಿನ ರಾಜಕೀಯ ಕ್ಷೇತ್ರದಲ್ಲಾಗಿರುವ ನೈತಿಕ ಅಧಃಪತನ, ಮೌಲ್ಯಗಳ ವ್ಯತ್ಯಯ, ಗದ್ದುಗೆಗೇರುವ ಹಲವರ ಪೂರ್ವೋತ್ತರಗಳನ್ನು ಗಮನಿಸಿ, ಮನೆ ಮಠ ತ್ಯಾಗ ಮಾಡಿದ ಹಲವಾರು ಸ್ವಾತಂತ್ರ್ಯ ಹೋರಾಟಗಾರರು ದಿಗ್ಭ್ರಮಿತರಾಗಿದ್ದಾರೆ; ಭ್ರಮನಿರಸನ ಗೊಂಡಿದ್ದಾರೆ. ನಮ್ಮ ಹೋರಾಟದ ಫಲ ಏನಾಗುತ್ತಿದೆಯಲ್ಲ ಎಂದು ವ್ಯಥಿತರಾಗಿದ್ದಾರೆ. ಅದಕ್ಕೆ ಎಸ್. ಎಂ. ಚಂದ್ರಶೇಖರಯ್ಯನವರಂಥವರ ಈ ಮೇಲಿನ ಮಾತುಗಳು ಸಾಕ್ಷಿಯಾಗಿವೆ. ಇದಕ್ಕೆಲ್ಲ ಕಾಲವೇ ಉತ್ತರ ಕೊಡುತ್ತದೆಯೇನೋ. ❑

# ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರು

ಇ. ವಿ. ಬೃಂದಾ*

**ಪೀಠಿಕೆ**

ಸದಾ ಸತ್ಯದ ನೆರಳಿನಲ್ಲೇ ಬದುಕುತ್ತಾ ಹಿರಿಯರಲ್ಲಿ ಭಯಭಕ್ತಿಗಳನ್ನಿಟ್ಟು ಕೊಂಡು, ಸೇವಾ ಮನೋಭಾವನೆ, ದೇಶಾಭಿಮಾನ, ಸಚ್ಚಾರಿತ್ರ್ಯ ಪ್ರಾಮಾಣಿಕತೆಯನ್ನ ಹೊಂದಿದ್ದಂತಹ ವ್ಯಕ್ತಿ ಕರ್ನಾಟಕ ಅಥವಾ ರಾಷ್ಟ್ರಕಂಡ ಅಪ್ಪಟ ಗಾಂಧಿವಾದಿ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು. ಇವರು ತಮ್ಮ ಜೀವಿತಾ ವಧಿಯಲ್ಲಿ ದೇಶದ ಪುನರುಜ್ಜೀವನದ ಬಗ್ಗೆ ಕಳಕಳಿ, ಆಸಕ್ತಿ ಇರಿಸಿಕೊಂಡಿದ್ದರು. ತಮ್ಮ ಚಿಕ್ಕವಯಸ್ಸಿನಲ್ಲೇ ನಿಜಲಿಂಗಪ್ಪನವರು ತಂದೆಯನ್ನು ಕಳೆದುಕೊಂಡರೂ ಸಹ ಹಿರಿಯರ ಆರೈಕೆಯಲ್ಲಿ ಬೆಳೆದು ಅವರ ನಂಬಿಕೆಗೆ ಮೋಸಮಾಡದೇ ಜೀವನದ ಮಜಲುಗಳನ್ನು ತಮ್ಮ ಜ್ಞಾನ, ವೈಚಾರಿಕ ಮನೋಭಾವದಿಂದ ಹಂತ ಹಂತವಾಗಿ ಮೇಲೇರಿ ಮನ್ನಣೆಗಳಿಸಿ ಕೊಂಡ ಏಕೈಕ ಕನ್ನಡ ಸುಪುತ್ರ. ಇವರ ಬಗ್ಗೆ ನಿಜವಾಗಲೂ ಕನ್ನಡದ ಜನತೆ ಹೆಮ್ಮೆ ಪಡಬೇಕು. ಇಂತಹ ಅಪ್ರತಿಮ ಮೇಧಾವಿ ಸತ್ಯಸಂಧ, ಮಹಾನ್ ಚೇತನ, ಉತ್ತಮ ಆಡಳಿತಗಾರನನ್ನು ಪಡೆದಂತಹ ಭಾರತ ಮಾತೆಯೇ ಧನ್ಯಳು.

"ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಎಂಬ ಮಾತು ನಿಜಲಿಂಗಪ್ಪನವರ ವಿಷಯದಲ್ಲಿ ಅಕ್ಷರಶಃ ನಿಜ. ಇವರ ಶಾಂತ ಸ್ವಭಾವ ದೇಶದ ಶ್ರೀ ಸಾಮಾನ್ಯರ ಮೇಲೆ ನಡೆಯುವ ದೌರ್ಜನ್ಯ. ಬಡತನಗಳನ್ನು ಕಂಡಾಗ ರೌದ್ರ ರೂಪವನ್ನು ತಾಳುತ್ತದೆ. ತತ್ವ ಮತ್ತು ಶಿಸ್ತು ಇವು ನಿಜಲಿಂಗಪ್ಪನವರು

---

*ದ್ವಿತೀಯ ಬಿ.ಎಸ್ಸಿ., ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಪ್ಪ

ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುವಂತಹ ಆದರ್ಶಗಳು. ಸಾಂಪ್ರದಾಯಿಕ ಆಚರಣೆಗಳನ್ನು ವಿರೋಧಿಸುವ ಇವರು ದೇಶದಲ್ಲಿ ಕ್ರಾಂತಿ ಬರಬೇಕು, ಆದರೆ ಅದು ಅಹಿಂಸಾತ್ಮಕವಾಗಿ, ಶಾಂತಿಯ ಮಾರ್ಗದಿಂದ, ಒಲುಮೆಯ ಮಾರ್ಗದಂದ, ವಿಶ್ವಾಸದಿಂದ ಬರಬೇಕು ಎಂದು ಪ್ರತಿಪಾದಿಸಿದರು.

ಸ್ವಾತಂತ್ರ್ಯ ಸಂಗ್ರಾಮದ ಧೀರಯೋಧರಾಗಿ, ಪ್ರಾಂತ ಪುನರ್ವಿಂಗಡನೆಯ ಮುಂದಾಳುವಾಗಿ, ಕರ್ನಾಟಕ ಏಕೀಕರಣದ ರೂವಾರಿಯಾಗಿ, ಮುಖ್ಯಮಂತ್ರಿಗಳಾಗಿ ಗಾಂಧೀಜಿಯವರ ತತ್ವ ಆದರ್ಶನಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಅಪರೂಪದ ರಾಜಕಾರಣಿ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರ ಹೆಸರು ಕರ್ನಾಟಕ ಹಾಗೂ ಭಾರತ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ.

ನಿಜಲಿಂಗಪ್ಪನವರು ತಮ್ಮ ಇಡೀ ಜೀವಿತಾವಧಿಯಲ್ಲಿ ರೈತರ ಏಳ್ಗೆಗಾಗಿ ಅದರಲ್ಲೂ ಕಡುಬಡವರ ಅಭ್ಯುದಯಕ್ಕಾಗಿ ಸದಾ ಚಿಂತನೆ ನಡೆಸುತ್ತಿದ್ದರು. ಇವರು ಕರ್ನಾಟಕ ಏಕೀಕರಣದ ನಂತರ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಕಾಲಾವಧಿಯಲ್ಲಿ, ಕರ್ನಾಟಕದಲ್ಲಿ ಮಾಡಿದ ವಿವಿಧ ಯೋಜನೆಗಳು ಅವರು ಸಮಾಜದ ಉದ್ಧಾರದಲ್ಲಿ ಇಟ್ಟಿಸಿದ್ದಂತಹ ಆಸಕ್ತಿಯನ್ನು ಎತ್ತಿ ತೋರಿಸುತ್ತವೆ.

"ತುಂಬಿದ ಕೊಡ ತುಳುಕುವುದಿಲ್ಲ" ಎನ್ನುವ ಗಾದೆಯಂತೆ ಇವರಿಗೆ ಮುಖ್ಯಮಂತ್ರಿ ಪದವಿ ಬಂದರೂ, ದೇಶದ ಉನ್ನತ ಸ್ಥಾನದಲ್ಲಿದ್ದರೂ, ಜನರಿಂದ ಮನ್ನಣೆ ಪಡೆದಿದ್ರೂ ಯಾವತ್ತೂ ಅಹಂಕಾರದಿಂದ ಬೀಗಿದವರಲ್ಲ. ಅಂತಹ ಸರಳತೆ, ಸಜ್ಜನಿಕೆ ಮತ್ತು ಆದರ್ಶಗಳನ್ನು ಮೈಗೂಡಿಸಿಕೊಂಡಂತಹ ಮಹಾನ್ ಮೇಧಾವಿ ನಿಜಲಿಂಗಪ್ಪನವರು.

ನಿಜಲಿಂಗಪ್ಪನವರಂತೆ ಕನ್ನಡ ನಾಡಿನ ಅಂತಃಸತ್ವವನ್ನೂ ನಿಸರ್ಗ ಸಂಪತ್ತನ್ನೂ ಸಂಪೂರ್ಣವಾಗಿ ಮನದಟ್ಟು ಮಾಡಿಕೊಂಡ ವರಾಗಲಿ, ಕನ್ನಡನಾಡಿನ ಭವ್ಯ ಭವಿಷ್ಯತ್ತಿನ ಬಗ್ಗೆ ಯೋಚಿಸಿ, ಅದರ ಸಾಧನೆಗೆ ಸಂಪೂರ್ಣ ಪ್ರಾಮಾಣಿಕತೆಯಿಂದ ದುಡಿದವರಾಗಲಿ ಬಹಳ ವಿರಳ. ನಾಡು ಸಮೃದ್ಧವಾಗಬೇಕು, ರಾಷ್ಟ್ರದ ಕಣ್ಮಣಿಯಾಗಬೇಕು, ನಾಡಿನ ಜನ ಸುಖ ಸಂತೋಷದಿಂದ ಬಾಳಬೇಕು ಎಂದು ಕನಸು ಕಂಡಂತಹ ಧೀಮಂತ ವ್ಯಕ್ತಿ. ಇವರು ಎಂದೂ ಬದುಕನ್ನಾಗಲಿ ಜಗವನ್ನಾಗಲಿ ಹಳಿದವರಲ್ಲ. ಜಗತ್ತು ವಾಸ್ತವ ಸತ್ಯ; ಆದರೆ ಮನುಷ್ಯ ತನ್ನ ಸ್ವಾರ್ಥಕ್ಕೋಸ್ಕರ ಅದನ್ನು ವಿರೂಪಗೊಳಿಸಿದ್ದಾನೆ. ಅದರ ಏರು ಪೇರುಗಳಿಗೆಲ್ಲಾ ಅವನೇ ಹೊಣೆ ಎಂಬುದು ನಿಜಲಿಂಗಪ್ಪನವರ ಬಲವಾದ ನಂಬಿಕೆ. ಇವರು ಎಂತಹ ಕಷ್ಟದ ಪರಿಸ್ಥಿತಿಯಲ್ಲೂ ಸಹ ಹಣವಾಸೆಗೆ ಬಲಿಯಾದವರಲ್ಲ. "ಹಾಸಿಗೆ ಇದ್ದಷ್ಟು ಕಾಲು ಚಾಚು" ಎನ್ನುವ ಸಿದ್ಧಾಂತ ಅವರದು. ಪ್ರಕೃತಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದ ನಿಜಲಿಂಗಪ್ಪನವರು ಅದರಡಿಯಲ್ಲೇ ಭವಿಷ್ಯದ ಹೊಂಗನಸುಗಳನ್ನು ಕಾಣುತ್ತಿದ್ದರು. ಆ ಕನಸುಗಳನ್ನು ನನಸಾಗಿಸುವಲ್ಲಿ ತಮ್ಮ ಜೀವನವನ್ನೇ ಮೀಸಲಿಟ್ಟಂತಹ ಉದಾತ್ತ ವ್ಯಕ್ತಿ.

ನಿಜಲಿಂಗಪ್ಪನವರು ಎಲ್ಲರನ್ನೂ ಧರ್ಮನಿರಪೇಕ್ಷತೆಯಿಂದ ಕಾಣುತ್ತಿದ್ದರು. ಹೆಂಗರುಳಿನ ಇವರು ಸ್ತ್ರೀ ಕುಲದ ಬಗ್ಗೆ ಅಪಾರ ಗೌರವವನ್ನಿರಿಸಿಕೊಂಡಿದ್ದವರು. ಸಹಬಾಳ್ವೆ ಸುಸಂಸ್ಕೃತಿ ಮಾನವನ ಸಹಜವಾದ ಲಕ್ಷಣ. ಅಂತೆಯೇ ನಿಜಲಿಂಗಪ್ಪನವರು ಕುಟುಂಬವಲ್ಲಿ ಮಡದಿ ಮಕ್ಕಳೊಡನೆ,

ಅಣ್ಣ ತಮ್ಮಂದಿರೊಡನೆ, ಸಮಾಜದಲ್ಲಿ ಇತರರೊಡನೆ ಸಮರಸವಾಗಿ ಬೆರೆಯುವ ಮನೋಭಾವನೆ ಉಳ್ಳವರಾಗಿದ್ದರು.

ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ದೇಶಕಂಡ ಅಪ್ರತಿಮ ಆಡಳಿತಗಾರ ನಿಜಲಿಂಗಪ್ಪನವರು. ಇಂತಹ ಧೀಮಂತ ವ್ಯಕ್ತಿಯ ಜೀವನ ಚರಿತ್ರೆ ಇಂದಿನ ಯುವ ಪೀಳಿಗೆಗೆ ಆದರ್ಶಪ್ರಾಯವಾಗಿದೆ. ಇವರ ಜೀವನ ಶ್ರಮವನ್ನು ಆಡಳಿತವನ್ನೂ ದೇಶದ ಪ್ರತಿಯೊಬ್ಬ ಪ್ರಜೆಯೂ ಅನುಸರಿಸಿದರೆ ಖಂಡಿತವಾಗಿ ನಮ್ಮ ದೇಶದ ಜನರ ಜೀವನ ಉನ್ನತ ಸ್ಥಾನಕ್ಕೇರುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ. ಸರಳತೆ ನಿರಾಡಂಬರವೇ ಮೂರ್ತಿವೆತ್ತಂತಿದ್ದ ನಿಜಲಿಂಗಪ್ಪನವರ ಜೀವನ ಸಮಗ್ರರಿಗೂ ಮರುಭೂಮಿಯಲ್ಲಿ ಸಿಕ್ಕ ಓಯಸಿಸ್‌ಗೆ ಸಮಾನ. ಇಂತಹ ಸಜ್ಜನ ವ್ಯಕ್ತಿಯ ಜೀವನ ಚರಿತ್ರೆ, ಸಾಧನೆಗಳನ್ನು ತಿಳಿಯುವುದು ಅವರು ಮಾಡಿದ ಕಾರ್ಯಗಳಿಗೆ ಸಾರ್ಥಕತೆ ತಂದುಕೊಟ್ಟಂತಾಗಿದೆ.

## ಮಹಾನ್ ಚೇತನದ ಜನನ ಹಾಗೂ ವಿದ್ಯಾರ್ಥಿ ಜೀವನ

ಹಲುವಾಗಿಲಿನಲ್ಲಿ ಲಿಂಗವಂತರೂ, ಸದಾಚಾರ ಸಂಪನ್ನರೂ ಆದ ಅಡಿವೆಪ್ಪನವರು ಮತ್ತು ಸಾಧ್ವಿ ಶಿರೋಮಣಿ ಯಾದ ನೀಲಮ್ಮ ದಂಪತಿಗಳು ಜೀವನ ಸಾಗಿಸುತ್ತಿದ್ದರು. ಈ ದಂಪತಿಗಳಿಗೆ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿನ ನಂತರ ೧೦.೧೨.೧೯೦೨ ರಂದು ಗಂಡುಮಗುವಾದಾಗ ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಆದರೆ ಚನ್ನಬಸಪ್ಪನವರಿಗೆ ಜ್ಯೋತಿಷ ದಲ್ಲಿಯೂ ಪ್ರಾವೀಣ್ಯ ಇದ್ದುದರಿಂದ ಮಗು ಮೂಲಾನಕ್ಷತ್ರದಲ್ಲಿ ಜನಿಸಿದ್ದರೂ ಪ್ರವರ್ಧಮಾನಕ್ಕೆ ಬಂದು ಕೀರ್ತಿವಂತನಾಗುತ್ತಾನೆಂದು ಭವಿಷ್ಯ ನುಡಿಯುತ್ತಾರೆ. ಅದೇ ಊರಿನಲ್ಲಿದ್ದಂತಹ ಉಜ್ಜಯಿನಿ ಮಠದ ಸ್ವಾಮಿಗಳು ಮಗುವಿನ ಕಿವಿಯಲ್ಲಿ ಮಂತ್ರವನ್ನು ಪಠಿಸಿ, ವಿಭೂತಿಯನ್ನು ಹಣೆಗೆ ಹಚ್ಚಿ ಲಿಂಗಧಾರಣೆ ಮಾಡುತ್ತಾರೆ. ಅಜ್ಜ ಚನ್ನಬಸಪ್ಪನವರ ಅಪೇಕ್ಷೆಯಂತೆಯೇ 'ನಿಜಲಿಂಗಪ್ಪ'ನೆಂದು ನಾಮಕರಣ ಮಾಡುತ್ತಾರೆ. ಅಕ್ಕ ಪುಟ್ಟಕ್ಕ ಮತ್ತು ಬಸಪ್ಪನವರಿಗಂತೂ ತಮ್ಮನ ನಗೆ, ನಿಜಲಿಂಗಪ್ಪನ ಆಟ ಪಾಠಗಳನ್ನು ನೋಡುತ್ತಾ ಸಮಯ ಕಳೆದುದೇ ತಿಳಿಯುತ್ತಿರಲಿಲ್ಲ.

ತಂದೆ, ತಾಯಿ, ಅಜ್ಜಿ ಮತ್ತು ಊರಿನವರ ಮುದ್ದಿನ ಕಣ್ಮಣಿಯಾಗಿ ಬೆಳೆದ ಬಾಲಕ ನಿಜಲಿಂಗಪ್ಪನವರು ಆರುವರ್ಷದ ವರಿದ್ದಾಗಲೇ ತನ್ನ ತಂದೆಯನ್ನು ಕಳೆದುಕೊಳ್ಳುತ್ತಾರೆ. ಸಾವಿನ ಸ್ಪಷ್ಟ ಕಲ್ಪನೆ ಇಲ್ಲದ ನಿಜಲಿಂಗಪ್ಪನವರಲ್ಲಿ ಅಡಿವೆಪ್ಪನವರ ವದನದ ಸ್ಥೂಲ ಚಿತ್ರ ಮಾತ್ರ ನೆನಪಿನಲ್ಲುಳಿಯುತ್ತದೆ. ಇತ್ತ ನೀಲಮ್ಮನವರ ಸ್ಥಿತಿಯಂತೂ ಹೇಳಲಸಾಧ್ಯ. ಗಂಡ ಮಾಡಿಟ್ಟು ಹೋಗಿದ್ದ ಋಣ ಭಾರ ಮಾತ್ರವಲ್ಲದೇ ಮೂರು ಮಕ್ಕಳನ್ನು ಸಾಕುವ ಹೊಣೆ ಬೇರೆ. ಗಂಡನ ಸಮಾಧಿಯ ಮೇಲಿನ ಹುಲ್ಲು ಚಿಗುರುವ ಮುನ್ನವೇ ಸಾಲಗಾರರು ಮನೆಯ ಮುಂದೆ ಸಾಲುಗಟ್ಟಿ ನಿಲ್ಲುತ್ತಿದ್ದರು. ಇದಕ್ಕೋಸ್ಕರ ನೀಲಮ್ಮನವರು ಕೂಲಿ ನಾಲಿ ಮಾಡಿ, ಹೊಟ್ಟೆ ಬಟ್ಟೆ ಕಟ್ಟಿ, ಕಾಸಿಗೆ ಕಾಸು ಸೇರಿಸಿ, ಹತ್ತು ವರ್ಷಗಳಲ್ಲಿ ಸಾಲ ತೀರಿಸಿದ ಮಹಾನ್ ಸಾಧ್ವೀಮಣಿ.

ತಂದೆ ಬದುಕಿದ್ದಾಗಲೇ ಬಾಲಕ ನಿಜಲಿಂಗಪ್ಪನವರ ಶ್ರೀ ಓನಾಮ ಕೂಲಿ ಮಠದಲ್ಲಿ ಪ್ರಾರಂಭವಾಗುತ್ತದೆ. ಬಹಳ ಚುರುಕು ಮತಿಯಾದ ನಿಜಲಿಂಗಪ್ಪನವರು ಎಂದೂ ತಪ್ಪನ್ನು ಮಾಡಿದವರಲ್ಲ. ಹೆಸರಿಗೆ ಅನ್ವರ್ಥವಾಗುವಂತೆ ಎಂದೂ ಸುಳ್ಳು ಹೇಳಿದವರಲ್ಲ. ಬಾಲಕನಾಗಿರು

ವಾಗಲೇ ಸತ್ಯದ ಹಾದಿಯಲ್ಲಿ ನಡೆದವರು. ಅಂದಿನ ಅವರ ಬಾಲ್ಯದ ಅಭ್ಯಾಸಗಳು ಇಂದಿನ ಕಾಲೇಜು ವಿದ್ಯಾರ್ಥಿಗಳು ಅನುಸರಿಸುವಂತಿದೆ. ನಿಜಲಿಂಗಪ್ಪನವರು ಬರೀ ಬುದ್ಧಿವಂತರು ಮಾತ್ರವಲ್ಲ. ಆಟಪಾಠಗಳಲ್ಲಿಯೂ ಚುರುಕು, ಶುಚಿತ್ವ ಚಿಕ್ಕಂದಿನಿಂದಲೇ ಚಳುವಳಿಯಾಗಿ ಬಂದದ್ದು. ಅವರ ಸಾಮರ್ಥ್ಯಕ್ಕೆ ಗುರು ಹಿರಿಯರೂ ಸಹ ಬೆರಗಾಗುತ್ತಿದ್ದರು. ಭಕ್ತಿ ಕೋಶಗಳನ್ನೂ ಅಮರಕೋಶವನ್ನೂ ಪುಸ್ತಕದ ನೆರವಿಲ್ಲದೇ ಲೀಲಾಜಾಲವಾಗಿ ಪಠಿಸುವ ಸಾಮರ್ಥ್ಯ ಬಾಲಕ ನಿಜಲಿಂಗಪ್ಪನವರಿಗಿತ್ತು.

ದಿನದಿನವೂ ಹೊಸದನ್ನು ನೋಡಬೇಕು, ಹೊಸದನ್ನು ಕಲಿಯಬೇಕು, ಹೊಸ ಸಾಹಸದಲ್ಲಿ ತೊಡಗಬೇಕು ಎನ್ನುವುದು ಇವರ ಮಹತ್ವಾಕಾಂಕ್ಷೆ. ಶ್ರಮಜೀವನ, ಪುಸ್ತಕಪ್ರೇಮ ಹಾಗೂ ಗಿಡ, ಮರ, ಹೂ ಬಳ್ಳಿಗಳ ವ್ಯಾಮೋಹ ಬಾಲಕ ನಿಜಲಿಂಗಪ್ಪ ನವರಲ್ಲಿ ಚಿಗುರಿದ್ದು ಅಜ್ಜ ಚನ್ನಬಸಪ್ಪನವರ ಸಂಪರ್ಕ, ಆಚರಣೆ ಮತ್ತು ಬುದ್ಧಿವಾದಗಳ ಫಲವಾಗಿ. ಆದರೆ ತಂದೆ ತೀರಿಕೊಂಡ ಮೂರು ವರ್ಷಗಳಲ್ಲಿಯೇ ಅಜ್ಜನೂ ಕೈಲಾಸವಾಸಿಯಾದದ್ದು ಬಾಲಕ ನಿಜಲಿಂಗಪ್ಪನವರಿಗೆ ಕಾಡಿನಲ್ಲಿ ಕಣ್ಣಿಗೆ ಬಟ್ಟೆ ಕಟ್ಟಿ ಬಿಟ್ಟಂತಾಯಿತು. ಮೃತ್ಯುವಿನ ಕರಾಳ ಛಾಯೆಯ ಭೀಕರತೆಯ ನೆರಳು ಅವರ ಮನಸ್ಸನ್ನು ಜರ್ಝರಿತಗೊಳಿಸುತ್ತದೆ. ತನ್ನ ತಂದೆ, ಗುರು, ದೇವರು ಎಲ್ಲವೂ ಆಗಿದ್ದ ಅಜ್ಜನ ಅನುಪಸ್ಥಿತಿ ನಿಜಲಿಂಗಪ್ಪನವರ ಮನಃಸ್ಥಿತಿಯನ್ನೇ ಅಲುಗಾಡಿಸುತ್ತದೆ.

ಚನ್ನಮಲ್ಲಪ್ಪನವರ ಸಾವಿನ ನಂತರ ಆಗಾಗ್ಗೆ ಬಂದು ನೀಲಮ್ಮನವರು ಕುಟುಂಬದವರ ಆಗುಹೋಗುಗಳನ್ನು ವಿಚಾರಿಸಿಕೊಂಡು, ಕೈಲಾದಷ್ಟು ಸಹಾಯ ಮಾಡುತ್ತಿದ್ದರು, ನೀಲಮ್ಮನವರ ತಂಗಿ ಸಾವಕ್ಕನವರ ಗಂಡ ದಾವಣಗೆರೆ ರುದ್ರಪ್ಪನವರು. ಹಲುವಾಗಿಲಿನಲ್ಲಿ ಮಾಧ್ಯಮಿಕ ಶಾಲೆ ಇರಲಿಲ್ಲವಾದ್ದರಿಂದ, ಜೊತೆಗೆ ಸಾವಕ್ಕ ರುದ್ರಪ್ಪನವರಿಗೆ ಸಂತಾನವಿಲ್ಲದ್ದರಿಂದ ಚೂಟಿಯಾದ ನಿಜಲಿಂಗಪ್ಪನವರನ್ನೂ, ಅವರ ಅಣ್ಣ ಬಸಪ್ಪನವರನ್ನೂ ಮುಂದಿನ ವಿದ್ಯಾಭ್ಯಾಸಕ್ಕಾಗಿ ದಾವಣಗೆರೆಗೆ ಕಳುಹಿಸಿಕೊಡಲಾಯಿತು.

ಬಾಲ್ಯದಿಂದಲೇ ಶಿಸ್ತು, ಸಂಯಮಗಳನ್ನು ರೂಢಿಸಿ ಕೊಂಡಿದ್ದ ನಿಜಲಿಂಗಪ್ಪನವರು ಗೆಳೆಯರಿಗೆ ಆದರ್ಶರಾದ್ದನ್ನು, ಗುರುಗಳಿಗೆ ಪ್ರಿಯರಾದದ್ದು ಆಶ್ಚರ್ಯವೇನಲ್ಲ. ಸದಾ ಶೀಲವಂತಿಕೆ ಯಿಂದ ಎಲ್ಲರ ಪ್ರೀತಿಗೆ ಪಾತ್ರರಾಗಿದ್ದ ನಿಜಲಿಂಗಪ್ಪನವರು ಚಿಕ್ಕ ವೀರಪ್ಪನವರಲ್ಲಿ ಆಶ್ರಯ ಪಡೆದಿದ್ದರೂ ಸಹ, ಅವರ ಮರಣಾನಂತರ ವೀರಭದ್ರಪ್ಪನವರು ಇವರ ಹೊಣೆಯನ್ನು ಹೊರುತ್ತಾರೆ. ೧೯೧೮ನೇ ಇಸವಿಯಲ್ಲಿ ಅನಾರೋಗ್ಯದಿಂದ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಬರೆಯಲಾಗದಿದ್ದರೂ ಅದರ ಮುಂದಿನ ವರ್ಷವೇ ಉತ್ತಮ ಅಂಕಗಳನ್ನು ಪಡೆದು ತೇರ್ಗಡೆ ಹೊಂದುತ್ತಾರೆ.

ಬಾಲಗಂಗಾಧರ್ ತಿಲಕ್ ಮತ್ತು ಗಾಂಧೀಜಿಯವರಿಂದ ಪ್ರೇರಿತರಾದ ನಿಜಲಿಂಗಪ್ಪನವರು ವಿಜ್ಞಾನದಲ್ಲಿ ಒಲವಿದ್ದರೂ ದೇಶಸೇವೆ ಮಾಡುವುದಕ್ಕೋಸ್ಕರ ವಕೀಲರಾಗುವ ಮನಸ್ಸು ಮಾಡುತ್ತಾರೆ. ಕರ್ನಾಟಕದಲ್ಲಿ ಕಾನೂನು ಕಾಲೇಜಿರಲಿಲ್ಲವಾದ್ದರಿಂದ ನಿಜಲಿಂಗಪ್ಪನವರು ಪುಣೆಗೆ ತಮ್ಮ ವ್ಯಾಸಂಗಕ್ಕೋಸ್ಕರ ತೆರಳಿದರು. ಚಿಕ್ಕಪ್ಪ ರುದ್ರಪ್ಪನವರು ದಾನಿಗಳಿಂದ ಹಣ ಸಂಗ್ರಹಿಸಿ ಶುಭ ಹಾರೈಸಿ, ಕಳುಹಿಸಿ ಕೊಡುತ್ತಾರೆ. ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರ ಸ್ವಂತ ಊರಲ್ಲದಿದ್ದರೂ

ರುದ್ರಪ್ಪನವರಿಗೆ ಸಲ್ಲುವ ಗೌರವವಾಗಿ ಕೃತಜ್ಞತೆಯ ಸಂಕೇತವಾಗಿ ಶಾಶ್ವತವಾಗಿ ಅವರ ಹೆಸರಿನ ಹಿಂದೆಯೇ ಉಳಿಯಿತು.

ನಿಜಲಿಂಗಪ್ಪನವರು ಕ್ರೀಡಾಶೀಲ ವ್ಯಕ್ತಿ ಮಾತ್ರವಲ್ಲ, ಬದುಕಿನುದ್ದಕ್ಕೂ ಕ್ರೀಡಾಪಟುಗಳ ಸಲಕ್ಷಣಗಳನ್ನು ಮೆರೆದ ಪ್ರಾಮಾಣಿಕ ವ್ಯಕ್ತಿ. ಪುಣೆಯಲ್ಲಿದ್ದಾಗ ಗಾಂಧಿ ಸಾಹಿತ್ಯದ ಅಧ್ಯಯನ ಅವರ ನಿತ್ಯದ ಪರಿಪಾಠವಾಗಿತ್ತು. ಅಲ್ಲಿ ಮೈಸೂರು ಕಡೆಯ ವಿದ್ಯಾರ್ಥಿಗಳಿಗೆಲ್ಲ ಯೋಗಾಶ್ರಮವೆಂಬ ವಿದ್ಯಾರ್ಥಿ ನಿಲಯವೇ ಆಧಾರ. ಅಲ್ಲಿನ ಆಂತರಿಕ ವೈಷಮ್ಯಗಳಿಂದಾಗಿ ವಿದ್ಯಾರ್ಥಿಜೀವನ ಹಾಳಾಗಬಾರದೆಂಬ ಉದ್ದೇಶದಿಂದ ನಿಜಲಿಂಗಪ್ಪನವರು "ಮೈಸೂರು ವಿದ್ಯಾರ್ಥಿನಿಲಯ"ವನ್ನು ಪ್ರಾರಂಭಿಸಿದರು. ಹಲುವಾಗಿಲಿನಲ್ಲಿಯೇ ಕಲಿತ ಈಜು ಅವರ ವಿರಾಮಕಾಲದ ಹವ್ಯಾಸವಾಗಿತ್ತು.

೧೯೨೪ರ ಡಿಸೆಂಬರ್ ತಿಂಗಳಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಉಪಸ್ಥಿತರಿದ್ದ ಗಾಂಧೀಜಿ ಮತ್ತು ಅವರ ಆದರ್ಶಗಳಿಂದ ನಿಜಲಿಂಗಪ್ಪನವರು ಪ್ರೇರೇಪಿತರಾದರು. ಗಾಂಧಿ ರಾಜಕೀಯ ಕಾಂಗ್ರೆಸ್ಸಿನ ರಾಜಕೀಯವಾಯಿತು. ೧೯೨೬ರಲ್ಲಿ ಅವರು ಎರಡನೆಯ ವರ್ಷದ ಕಾನೂನು ಪರೀಕ್ಷೆಯಲ್ಲಿ ಕುಳಿತುಕೊಂಡು ತೇರ್ಗಡೆಯೂ ಆಗುತ್ತಾರೆ. ನಿಜಲಿಂಗಪ್ಪನವರು ವಕೀಲಿವೃತ್ತಿಯ ಮೂಲಕ ಸಮಾಜಾಭ್ಯುದಯವನ್ನೂ ಶ್ರೇಯಸ್ಸು ಯಶಸ್ಸುಗಳನ್ನು ಕಾಣುವ ಕನಸು ಹೊತ್ತಿದ್ದರು. ಇವರು ಅಂತಿಮ ವರ್ಷದ ಕಾನೂನು ಪರೀಕ್ಷೆ ಮುಗಿಸಿ, ಚಿತ್ರದುರ್ಗಕ್ಕೆ ಮರಳಿ, ಒಂದೆರಡು ದಿನ ವೀರಭದ್ರಪ್ಪನವರ ಕುಟುಂಬದವರೊಡನೆ ಕಾಲ ಕಳೆದು, ದಾವಣಗೆರೆಯಲ್ಲಿ ಚಿಕ್ಕಪ್ಪ, ಚಿಕ್ಕಮ್ಮರನ್ನು ನೋಡಿಕೊಂಡು ಹಲುವಾಗಿಲಿಗೆ ಹಿಂತಿರುಗಿದರು.

ತಂದೆ ಮತ್ತು ಅಜ್ಜನ ಆಸೆಯನ್ನು ಈಡೇರಿಸಿ ಮನೆಗೆ ಬಂದ ಮಗನನ್ನು ನೋಡಿ ತಾಯಿ ನೀಲಮ್ಮ ಆನಂದ ಪರವಶರಾಗುತ್ತಾರೆ. ಹಿರಿಯರ ಹರಕೆ ಮತ್ತು ತನ್ನ ಕಾಯಕ ಯೋಗ ಫಲಿಸಿತೆಂದು ಕಲ್ಲೇಶ್ವರನ ಕೃಪೆಯಿಂದ ಮಗನ ಭವಿಷ್ಯ ಉಜ್ವಲವಾಯಿತೆಂದು ಎಲ್ಲಾ ದೇವತೆಗಳಿಗೂ ಕೈ ಮುಗಿಯುತ್ತಾರೆ.

ನಿಜಲಿಂಗಪ್ಪನವರು ವಕೀಲಿ ವೃತ್ತಿಯ ತರಬೇತಿಗೋಸ್ಕರ ಎಲ್ಲಾ ಹಿರಿಯ ವಕೀಲರನ್ನು ಕಂಡು, ಅವರಿಗೆ ಸಹಾಯಕರಾಗಿ ಕೆಲಸಮಾಡಲು ಅವಕಾಶ ನೀಡುವಂತೆ ಹೇಳಿಕೊಂಡರೂ ಯಾರೂ ಅವರನ್ನು ಸೇರಿಸಿಕೊಳ್ಳುವುದಿಲ್ಲ. ಆದರೆ ಹಟ ಬಿಡದ ನಿಜಲಿಂಗಪ್ಪನವರು ೧೯೨೬ರಲ್ಲಿ ಕರಿಕೋಟು ಧರಿಸಿ ವಕೀಲಿ ವೃತ್ತಿ ಪ್ರಾರಂಭಿಸಿಯೇ ಬಿಡುತ್ತಾರೆ. ಇವರದು ಕಾಯಕಕ್ಕೆ ತಮ್ಮನ್ನು ತಾವು ಸಮರ್ಪಿಸಿಕೊಳ್ಳುವ ಪ್ರವೃತ್ತಿ. ಆತ್ಮವಿಶ್ವಾಸದ ಅಭಾವವೇ ಮಾನವನ ಎಲ್ಲ ಸೋಲುಗಳಿಗೆ ಮೂಲ ಎಂಬುದನ್ನು ಬಲ್ಲರು. ವಕೀಲನಿಗಿರಬೇಕಾದಂತಹ ಲಕ್ಷಣಗಳಾದ ಕಾನೂನು ಪಾಂಡಿತ್ಯ, ಗ್ರಹಣ ಸಾಮರ್ಥ್ಯ, ವಿಶ್ಲೇಷಣ ಶಕ್ತಿ, ವಾದ ಕೌಶಲ, ಭಾಷಾ ಪ್ರೌಢಿಮೆ, ಉದ್ವೇಗರಹಿತವಾದ ಮನೋಭಾವ ಇವೆಲ್ಲವೂ ನಿಜಲಿಂಗಪ್ಪನವರಿಗಿದ್ದವು.

ಸಂಪೂರ್ಣ ಯೌವ್ವನಾವಸ್ಥೆ ತಲುಪಿರುವ ಮಗನ ಮದುವೆಯನ್ನು ಮಾಡಲು ತಾಯಿ ನೀಲಮ್ಮ ಇಚ್ಛಿಸುತ್ತಾರೆ. ಏಕೆಂದರೆ ಅವರಿಗೆ ಆದಷ್ಟು ಬೇಗ ಸೊಸೆಯನ್ನು ನೋಡುವ, ಮೊಮ್ಮಕ್ಕಳನ್ನು ಮುದ್ದಾಡುವ ಕಾತರ. ಅಂತೆಯೇ ನಿಜಲಿಂಗಪ್ಪ ನವರು ದಿ. ೩೦.೯.೧೯೧೦ರಲ್ಲಿ ಬೆಳ್ಳುಳ್ಳಿ

ಮನೆತನದ ಮುರಿಗಮ್ಮನವರನ್ನು ತಮ್ಮ ಧರ್ಮಪತ್ನಿಯಾಗಿ ಸ್ವೀಕರಿಸುತ್ತಾರೆ. ಇವರು ತಮ್ಮ ಪತ್ನಿಗೆ ಮಾಂಗಲ್ಯ ಹೊರತಾಗಿ ಬೇರೇನೂ ಒಡವೆ ಮಾಡಿಸುವುದಿಲ್ಲ. ಮುರಿಗಮ್ಮನವರೂ ಅಷ್ಟೆ. ಪತಿಗೆ ತಕ್ಕ ಸತಿ. ಅವರಿಗೆ ಪ್ರಿಯವಾದದ್ದನ್ನೊದಗಿಸುತ್ತ, ಅವರ ಮುನ್ನಡೆಗೆ ಅಡ್ಡಿಯಾಗದೆ, ಅವರ ಸುಖದಲ್ಲಿಯೇ ತನ್ನ ಸುಖವನ್ನು ಕಾಣುವ ಪತಿಪರಾಯಣೆ. ೧೯೨೭ರ ಸಂವತ್ಸರದ ಅಂತ್ಯದಲ್ಲಿ ನಿಜಲಿಂಗಪ್ಪನವರು ತಾಯಿ, ಮಡದಿಯನ್ನು ಕರೆತಂದು ಚಿತ್ರದುರ್ಗದಲ್ಲಿ ವಾಸ್ತವ್ಯ ಹೂಡುತ್ತಾರೆ. ಇವರ ವಕೀಲಿ ವೃತ್ತಿಯಿಂದ ಬರುತ್ತಿದ್ದಂತಹ ಹಣ ಅವರ ಜೀವನ ನಿರ್ವಹಣೆಗೆ ಸಾಕಾಗುತ್ತಿತ್ತು. ಮೂರು ಗಂಡು, ಆರು ಹೆಣ್ಣು ಮಕ್ಕಳು ಹಾಲಿನಂತಹ ಸಂಸಾರ ಸ್ವರ್ಗಕ್ಕೇ ಕಿಚ್ಚು ಹಚ್ಚುವಂತಿತ್ತು.

## ರಾಜಕೀಯ ಪ್ರವೇಶ ಮತ್ತು ಸಾಧನೆಗಳು

ವಕೀಲೀ ವೃತ್ತಿಯಲ್ಲಿದ್ದರೂ ಸಹ ನಿಜಲಿಂಗಪ್ಪನವರು ರಾಜಕೀಯದ ಬಗ್ಗೆ ಗಮನ ಹರಿಸುತ್ತಿದ್ದರು. ಗಾಂಧೀಜಿಯವರ ಸೆಳೆತ ಅಷ್ಟರ ಮಟ್ಟಿಗೆ ಇವರ ಮೇಲೆ ಪರಿಣಾಮ ಬೀರಿತ್ತು. ೧೯೩೩ರಲ್ಲಿ ಪ್ರಾರಂಭವಾದ ಹರಿಜನ ಪತ್ರಿಕೆ ಇವರ ಪಾಲಿಗೆ ಭಗವದ್ಗೀತೆಯಾಗಿತ್ತು. ೧೯೩೭ರ ವೇಳೆಗೆ ನಿಜಲಿಂಗಪ್ಪನವರು ಮೈಸೂರು ರಾಜ್ಯದ ರಾಜಕೀಯ ಪಕ್ಷದಳ ವಿಲೀನೀಕರಣ ಸಮಾರಂಭದ ಸ್ವಾಗತ ಸಮಿತಿಯ ಅಧ್ಯಕ್ಷರಾದದ್ದು ಅವರ ರಾಜಕೀಯ ಪ್ರವೇಶವೆಂದೇ ಹೇಳಬಹುದು. ಇವರ ರಾಜಕೀಯ ಜೀವನದಲ್ಲಿ ನಿರ್ಣಾಯಕವಾದ ತಿರುವು ನೀಡಿದ, ಅವರ ಸಂಕಲ್ಪಕ್ಕೆ ಮೂರ್ತತ್ವವನ್ನು ಕಲ್ಪಿಸಿ ಅವರ ಶ್ರದ್ಧಾ ನಿಷ್ಠೆ, ಮನಃಸ್ಥೈರ್ಯಗಳಿಗೆ ಒರೆಗಲ್ಲಾದ, ಅವರನ್ನು ನಾಯಕತ್ವಕ್ಕೇರಿಸಿ ದೇಶಾದ್ಯಂತ ಅವರ ಕೀರ್ತಿಯನ್ನು ಬಿತ್ತರಿಸಿದ ಘಟನೆ ನಡೆದದ್ದು ಚಿತ್ರದುರ್ಗದ ತುರುವನೂರಿನಲ್ಲಿ. ಏಕೆಂದರೆ ಅಲ್ಲಿ ಅವರು ತಮ್ಮ ಸಂಗಡಿಗರೊಡಗೂಡಿ ಈಚಲು ಮರಗಳನ್ನು ಕೊಯ್ಯುವ ಮೂಲಕ ಸತ್ಯಾಗ್ರಹ ನಡೆಸಿದರು. ಅದಕ್ಕಾಗಿ ಜೈಲುವಾಸವನ್ನೂ ಸಹ ಅನುಭವಿಸಿದರು. ಹೀಗೆ ಸಕ್ರಿಯವಾಗಿ ಕಾಂಗ್ರೆಸ್ಸಿನ ಕಾರ್ಯ ಚಟುವಟಿಕೆಗಳಲ್ಲಿ ನಿಜಲಿಂಗಪ್ಪನವರು ತಮ್ಮನ್ನು ತಾವು ತೊಡಗಿಸಿಕೊಂಡರು.

೧೯೪೩ರ ಆಗಸ್ಟ್ ತಿಂಗಳಲ್ಲಿ 'ಭಾರತ ಬಿಟ್ಟು ತೊಲಗಿ' ಚಳುವಳಿಯನ್ನು ಆರಂಭಿಸಿದಾಗ ನಿಜಲಿಂಗಪ್ಪನವರೂ ಮೈಸೂರು ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ಮುಂಬಯಿಗೆ ಹೋಗಿದ್ದರು. ಅವರು ಊರಿಗೆ ಹಿಂದಿರುಗುವಾಗ ರಾಜ್ಯದ ಗಡಿಯಲ್ಲಿಯೇ ದಸ್ತಗಿರಿ ಮಾಡಿ ಬಂಧನದಲ್ಲಿಡಲ್ಪಟ್ಟರು. ನಿಜಲಿಂಗಪ್ಪನವರು ರಾಜಕೀಯ ವಿಚಾರಗಳನ್ನು ಕುರಿತು ಮನೆಯವರೊಡನೆ ಹೆಚ್ಚಾಗಿ ಚರ್ಚಿಸುತ್ತಿರಲಿಲ್ಲ. ಆದರೆ ಅವರ ಮಕ್ಕಳಿಗೆ ತಮ್ಮ ತಂದೆ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದುದು ಹಾಗೂ ಜೈಲಿಗೆ ಹೋಗುತ್ತಿದ್ದುದು ಹೆಮ್ಮೆಯ ವಿಷಯವಾಗಿತ್ತು.

ನಿಜಲಿಂಗಪ್ಪನವರು ಜೈಲಿನಿಂದ ಹೊರಬರುತ್ತಿದ್ದಂತೆಯೇ ಅವರಿಗೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷ ಪದವಿ ಕಾದಿರುತ್ತದೆ. ಅವರು ಅಧ್ಯಕ್ಷರಾದ ನಂತರ ಮನೆ ಸೇರುವುದೇ ವಿರಳವಾಯಿತು. ೧೯೪೬ರಲ್ಲಿ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷತೆಯಿಂದ ನಿವೃತ್ತಿ ಹೊಂದುತ್ತಿದ್ದಂತೆಯೇ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಯ್ಕೆಯಾದರು. ಆ ಸಂದರ್ಭದಲ್ಲಿ ಬಹುರಾಜ್ಯಗಳಲ್ಲಿ

ಹಂಚಿಹೋಗಿದ್ದ ಕನ್ನಡಿಗರಲ್ಲಿ ಭಾವೈಕ್ಯ ಸಾಧಿಸುವಲ್ಲಿ ಅವರು ಸಮರ್ಥರಾದರು. ಘಟನಾ ಸಮಿತಿಗೆ ಆಯ್ಕೆಗೊಂಡಿದ್ದ ಪ್ರಯುಕ್ತ ಕರ್ನಾಟಕ ಏಕೀಕರಣದ ಆಂದೋಲನದ ಮುನ್ನಡೆ ಸಾಧ್ಯವಾಯಿತು. ಏಕೀಕರಣಕ್ಕಾಗಿ ತಮ್ಮ ಸರ್ವಶಕ್ತಿಯನ್ನು ವಿನಿಯೋಗಿಸಿದರು. ಅದೇ ಅವರ ಬದುಕಾಯಿತು. ರಾಜಕೀಯ ವೃತ್ತಿರಂಗದಲ್ಲಿ ಅವರು "ಏಕೀಕರಣದ ನಿಜಲಿಂಗಪ್ಪ"ನವರೆಂದೇ ಪ್ರಸಿದ್ಧರಾದರು. ಇದಕ್ಕಾಗಿಯೇ ಅವರು ಹಲವು ಬಾರಿ ನಿರಾಶೆ, ಸಂಕಟ, ತಿರಸ್ಕಾರಗಳಿಗೆ ಗುರಿಯಾದರು.

ಫಜಲ್ ಆಲಿ ಸಮಿತಿಯ ವರದಿ ಅಂಗೀಕೃತವಾದ ನಂತರ ೧.೧೧.೧೯೫೬ ರಂದು ಕರ್ನಾಟಕ ಏಕೀಕರಣ ಘಟಿಸಿತು. ನಿಜಲಿಂಗಪ್ಪನವರು ಏಕೀಕೃತ ಕರ್ನಾಟಕದ ಪ್ರಥಮ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು. ಆದರೆ ಕೆಲವೇ ದಿನಗಳಲ್ಲಿಯೇ ಕೆಲವು ರಾಜಕೀಯ ಧುರೀಣರ ಪಿತೂರಿಯಿಂದ ನಿಜಲಿಂಗಪ್ಪನವರು ಮಂತ್ರಿಮಂಡಲದ ರಾಜೀನಾಮೆ ಕೊಡುವ ಪ್ರಸಂಗ ಬಂದಿತು. ರಾಜೀನಾಮೆ ಕೊಟ್ಟ ದಿವಸ ಅವರ ವರ್ತನೆಯಲ್ಲಾಗಲೀ ಮುಖಭಾವದಲ್ಲಿಯೇ ಆಗಲಿ ಯಾವುದೇ ಬದಲಾವಣೆ ಇರಲಿಲ್ಲ.

**ಸಾಧನೆಗಳು**

ನಿಜಲಿಂಗಪ್ಪನವರು ದೇಶಕ್ಕೋಸ್ಕರ. ರಾಜ್ಯದ ಹಿತಕ್ಕೋಸ್ಕರ ತನ್ನ ಜೀವನವನ್ನೇ ಮುಡುಪಾಗಿಟ್ಟರು. ತಮ್ಮ ಎಲ್ಲಾ ಆಸೆ ಆಕಾಂಕ್ಷೆಗಳನ್ನು ಮರೆತು ಕರ್ನಾಟಕ ಏಕೀಕರಣದ ಹಾದಿಯಲ್ಲಿ, ಅದನ್ನು ಫಲಪ್ರದಗೊಳಿಸುವುದಕ್ಕೋಸ್ಕರ ಶ್ರಮಿಸಿದ್ದರು. ಇವರು ಹಳ್ಳಿಗಾಡಿನ ಜನರ ಬಗ್ಗೆ ತೋರಿಸುತ್ತಿದ್ದ ಕಳಕಳಿ ಮೆಚ್ಚುವಂತಹ ದ್ದಾಗಿತ್ತು. ತನ್ನ ಮಡದಿ ಮಕ್ಕಳನ್ನೂ ಲೆಕ್ಕಿಸದೆ ದೇಶದ ಉತ್ತಮ ಭವಿಷ್ಯಕ್ಕಾಗಿ ಹೋರಾಡಿದರು. ಇವರಿಗೆ ಮೂರು ಹೊತ್ತು ಬಡಜನರದ್ದೇ ಚಿಂತೆ. ನಗರಗಳ ಮಕ್ಕಳಂತೆಯೇ ಹಳ್ಳಿಗಳ ಮಕ್ಕಳೂ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಮುಂದುವರಿಯಬೇಕು. ದೇಶದ ಆಡಳಿತ ಕ್ಷೇತ್ರದಲ್ಲಿ ಅವರಿಗೂ ಸಮಾನ ಅವಕಾಶ ಕಲ್ಪಿಸಬೇಕು. ವಿಶೇಷ ರಿಯಾಯಿತಿ ಮೀಸಲಾತಿಗಳ ಮೂಲಕ ಅವರ ಶ್ರೇಯೋಭಿವೃದ್ಧಿ ಯನ್ನು ಸಾಧಿಸಬೇಕು ಎನ್ನುವುದು ಇವರ ಹಂಬಲ ಅದಕ್ಕೋಸ್ಕರ ತುಂಬ ಪರಿಶ್ರಮವನ್ನೂ ಪಟ್ಟರು.

ದೇಶದಲ್ಲಿ ಪ್ರಧಾನಿ ಪಟ್ಟಕ್ಕೋಸ್ಕರ ಹಲವು ಕಾಂಗ್ರೆಸ್ ನಾಯಕರುಗಳ ನಡುವೆ ಪೈಪೋಟಿ ನಡೆಯುತ್ತಿದ್ದರೂ ಸಹ ನಿಜಲಿಂಗಪ್ಪನವರು ತಟಸ್ಥರಾಗಿದ್ದರು. ಏಕೆಂದರೆ ಅವರು ಸತ್ಯದ ತಳಹದಿಯ ಮೇಲೆ ಮುಂದೆ ಬಂದವರು. ಕಾಂಗ್ರೆಸ್ಸಿನವರಲ್ಲೇ ಒಡಕು ಬಂದಾಗ ಪತ್ರಗಳ ಮುಖೇನ ಅವರುಗಳಲ್ಲಿ ಸಾಮರಸ್ಯ ತರುವ ಪ್ರಯತ್ನ ಮಾಡಿದರು. ನಿಜಲಿಂಗಪ್ಪನವರನ್ನೂ ಮತ್ತು ಇತರ ಹನ್ನೊಂದು ಜನರನ್ನು ಕಾಂಗ್ರೆಸ್ ಕಾರ್ಯ ಸಮಿತಿಯಿಂದ ನವ ಕಾಂಗ್ರೆಸ್ ಸಮಿತಿಯವರು ಉಚ್ಚಾಟಿಸಿದಾಗ ತಮ್ಮ ಸಂಸ್ಥೆಯೇ ಮೂಲ ಕಾಂಗ್ರೆಸ್ ಎಂದೂ, ತಮ್ಮನ್ನು ಉಚ್ಚಾಟಿಸುವ ಹಕ್ಕು ಸದ್ಯೋಜಾತ ಸಂಸ್ಥೆಗಿಲ್ಲವೆಂದೂ ನಿಜಲಿಂಗಪ್ಪನವರು ಹೇಳಿಕೆ ನೀಡಿದರು. ಇವರು ಪ್ರಾಮಾಣಿಕತೆಯಲ್ಲಿ ವ್ಯವಹಾರಶುದ್ಧಿಯಲ್ಲಿ ವಚನಪಾಲನೆಯಲ್ಲಿ ಬಹಳ ಉತ್ತಮರಾಗಿದ್ದರು. ಅವರೆಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. ಆಸೆ ಇದ್ದಿದ್ದರೆ. ನೆಹರೂ ಕುಟುಂಬವನ್ನು ಮಲಗಿಸಿ. ಕೇಂದ್ರ ಸಚಿವಮಂಡಲಿಯಲ್ಲಿ ಎಂದೋ ಸ್ಥಾನ ಗಿಟ್ಟಿಸಿಕೊಳ್ಳಬಹುದಿತ್ತು ಅಥವಾ ರಾಷ್ಟ್ರಪತಿಯಾಗಬಹುದಿತ್ತು. ಸ್ವಾಭಿಮಾನ

ಸಂಕೋಚಗಳನ್ನು ತೊರೆದಾದರೂ ತಮ್ಮನ್ನು ನಂಬಿದವರಿಗೆ ಸಹಾಯ ಮಾಡುತ್ತಿದ್ದರು. ಮಿತ್ರದ್ರೋಹ ಅವರ ಜಾಯಮಾನಕ್ಕೆ ಬಂದದ್ದಲ್ಲ. ಮಿತ್ರರಿಗಾಗಿ ಸರ್ವತ್ಯಾಗಕ್ಕೂ ಅವರು ಸಿದ್ಧರಿದ್ದರು.

ನಿಜಲಿಂಗಪ್ಪನವರು ಹೋರಾಟ ಪ್ರಾರಂಭವಾದ ದಿನಗಳಲ್ಲಿ ಅಧ್ಯಕ್ಷ ಪದವಿಗೆ ರಾಜಿನಾಮೆ ಸಲ್ಲಿಸಿ, ರಾಜಕೀಯದಿಂದ ನಿವೃತ್ತರಾಗಲು ಬಯಸಿದರು. ತಮ್ಮೆದುರಿಗೆ ಬೃಹದಾಕಾರವಾಗಿ ನಿಂತ ಸವಾಲುಗಳಿಗೆ ಹಿಂಜರಿಯುವುದು ಹೇಡಿತನವೆಂದು ತಿಳಿದು, ಅಶಿಸ್ತು, ಅನ್ಯಾಯ, ಭ್ರಷ್ಟಾಚಾರಗಳಿಂದ ಕಾಂಗ್ರೆಸ್ಸನ್ನು ಮುಕ್ತಿಗೊಳಿಸಬೇಕೆಂದು ಪಣ ತೊಡುತ್ತಾರೆ. ಅವರು ಪಕ್ಷದಲ್ಲಿ ಮುಂದುವರಿದದ್ದು ಸ್ವಾರ್ಥ ಸಾಧನೆಯಿಂದಲ್ಲ, ಪಕ್ಷದ ಹಿತ ಸಾಧನೆಯ ದೃಷ್ಟಿಯಿಂದ ತತ್ತ್ವ ನೀತಿ ಆದರ್ಶಗಳನ್ನು ಬಿಟ್ಟು ಕೊಡದೆ, ದಿಟ್ಟತನದಿಂದ ಕೆಚ್ಚಿನಿಂದ ಧರ್ಮಯುದ್ಧ ನಡೆಸಿದ ಶ್ರೇಯಸ್ಸು, ಮಾತ್ರ ಸಂಸ್ಥೆಯನ್ನು ಬಲವಾಗಿ ಅಪ್ಪಿಕೊಂಡ ಕೀರ್ತಿ ನಿಜಲಿಂಗಪ್ಪನವರದು. ಅವರು ಸೋತು ಗೆದ್ದವರೆಂಬುವುದು ನಿಜ.

## ಕರ್ನಾಟಕದ ರೂವಾರಿ

ಹೀಗೆ ತಮ್ಮ ಜೀವನ ಪರ್ಯಂತ ದೇಶಸೇವೆಗಾಗಿ ತಮ್ಮ ಸುಖಸಂತೋಷಗಳನ್ನು ತೊರೆದ ಮಹಾತ್ಯಾಗಿ ನಿಜಲಿಂಗಪ್ಪನವರು. ಇವರಂತೆ ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಸುತ್ತಾಡಿದವರಾಗಲೀ, ಕರ್ನಾಟಕದ ಅಭ್ಯುದಯಕ್ಕಾಗಿ ಕಂಕಣ ತೊಟ್ಟವರಾಗಲೀ ಸಿಗುವುದು ಬಹಳ ವಿರಳ. ಇವರು ಮನಸ್ಸು ಮಾಡಿದ್ದರೆ ಖಂಡಿತಾ ಪ್ರಧಾನ ಮಂತ್ರಿ ಪದವಿಯೂ ಸಿಗುತ್ತಿತ್ತು. ಅವರು ಎಂದಿಗೂ ಸತ್ಯ ಮತ್ತು ಶಾಂತಿ ಮಾರ್ಗಬಿಟ್ಟು ನಡೆದವರಲ್ಲ. ಅಧಿಕಾರ ಲಾಲಸೆಯಿಂದ ಯಾವುದೇ ಕಾರ್ಯ ಮಾಡುತ್ತಿರಲಿಲ್ಲ. ಮುಖ್ಯಮಂತ್ರಿಯಾದ ಕೂಡಲೇ ಶರಾವತಿ ವಿದ್ಯುತ್ ಯಾಜನೆಯನ್ನು ಕಾರ್ಯಗತಗೊಳಿಸಿದರು. ಎಲ್ಲಿ ಯಾದರೂ ಹಣ ಒದಗಿಸಬಹುದು ಎಂಬ ಕೆಚ್ಚಿನಿಂದ ಆರು ಯೋಜನೆಗಳನ್ನು ಕೃಷ್ಣಾ , ಮಲಪ್ರಭಾ, ಹೇಮಾವತಿ, ಘಟಪ್ರಭಾ, ಹಾರಂಗಿ, ಕಬಿನಿ ಜಲಾಶಯಗಳಿಗೆ ಶಿಲಾನ್ಯಾಸ ಕಾರ್ಯ ಮುಗಿಸಿ ಅವುಗಳ ನಿರ್ಮಾಣಕ್ಕೆ ತೊಡಗಿದ್ದರು. ಬೆಂಗಳೂರು ಜನರ ನೀರಿನ ಸಮಸ್ಯೆ ಪರಿಹರಿಸುವುದಕ್ಕೋಸ್ಕರ ಕಾವೇರಿ ಯೋಜನೆ ಪ್ರಾರಂಭಿಸಿದರು. ಮೈಸೂರು, ಹುಬ್ಬಳ್ಳಿ ಮೊದಲಾದ ಕಡೆಗಳಲ್ಲಿ ಕೈಗಾರಿಕಾ ಕೇಂದ್ರಗಳ ಸ್ಥಾಪನೆಗೆ ಅವಕಾಶ ಮಾಡಿ ಕೊಟ್ಟರು. ಭೂ ಹೀನರಿಗೆ ಭೂಮಿಯೊದಗಿಸುವುದಕ್ಕಾಗಿ ಭೂ ಸುಧಾರಣಾ ಸಮಿತಿ ರಚಿಸಿದರು. ರಾಜಕೀಯ ಸಂತ್ರಸ್ತರಿಗೆ ಪಿಂಚಣಿ ಮಂಜೂರು ಮಾಡಿದ್ದಲ್ಲದೇ ಗ್ರಾಮನಗರಗಳಲ್ಲಿ ನಿವೇಶನಗಳನ್ನು ಹಂಚಿಕೊಡುವ ಕಾರ್ಯ ಮಾಡಿದರು. ಎಸ್. ಎಸ್. ಎಲ್. ಸಿ. ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ಸೌಲಭ್ಯವನ್ನು ಒದಗಿಸಿಕೊಟ್ಟಿರುವ ಹೆಗ್ಗಳಿಕೆ ನಿಜಲಿಂಗಪ್ಪನವರದು.

## ಉಪಸಂಹಾರ

ಇಂತಹ ಧೀಮಂತ ವ್ಯಕ್ತಿಯನ್ನು ಕನ್ನಡ ಜನತೆ ಪಡೆದದ್ದು ಅವರ ಅದೃಷ್ಟವೆಂದೇ ಹೇಳಬೇಕು. ದೇಹಕ್ಕೆ ಮುಪ್ಪಾದರೂ ಅವರ ಚಿಂತನೆ ಸಾಮರ್ಥ್ಯಕ್ಕೆ ಮಾತ್ರ ಎಂದೂ ಮುಪ್ಪು ಬರಲಿಲ್ಲ. ತಮ್ಮ ಸೋಲು ಗೆಲುವುಗಳ ಬಗ್ಗೆ ಕೊರಗು ನಲಿವುಗಳನ್ನಾಗಲೀ ತಮ್ಮ ಸಾಧನೆಗಳ ಬಗ್ಗೆ ಗರ್ವವನ್ನಾಗಲೀ ಎಂದೂ ತೋರಿದವರಲ್ಲ. ನಿಜಲಿಂಗಪ್ಪನವರು ಅಧಿಕಾರದಿಂದ ನಿವೃತ್ತರಾದರೂ ಸಹ ತಮ್ಮ

ಸೇವಾ ಮನೋಭಾವನೆಯನ್ನು ಬಿಟ್ಟವರಲ್ಲ. ತಮ್ಮ ಜೀವಿತದ ಕೊನೆಯ ಕ್ಷಣದವರೆಗೂ ರಾಷ್ಟ್ರ ಹಿತದ ಬಗ್ಗೆಯೇ ಚಿಂತನೆ ನಡೆಸುತ್ತಿದ್ದಂತಹ ಸರಳ ವ್ಯಕ್ತಿ. ಇವರು ಅಜಾತ ಶತ್ರುಗಳು. ಅವರಿಗೆ ವೈರಭಾವದ ಪರಿಚಯವೇ ಇರಲಿಲ್ಲ.

ಇಂತಹ ದಿವ್ಯಚೇತನವನ್ನು ನಾವು ಕಳೆದುಕೊಂಡಿದ್ದೇವೆ. ಇದು ಕನ್ನಡಕ್ಕೆ ತುಂಬಲಾರದ ನಷ್ಟ 'ರಾಷ್ಟ್ರಕವಿ' ಕುವೆಂಪುರವರು ಹೇಳಿರುವಂತೆ "ನಾವು ಸಿದ್ಧವ್ವನ ಹಳ್ಳಿ ನಿಜಲಿಂಗಪ್ಪನವರನ್ನೂ ನೆನೆದಾಗ ಏಕೀಕೃತ ಕರ್ನಾಟಕವೂ, ಕರ್ನಾಟಕವನ್ನು ನೆನೆದಾಗ ನಿಜಲಿಂಗಪ್ಪನವರು ನೆನಪಿಗೆ ಬಂದರೆ ಆಶ್ಚರ್ಯವಿಲ್ಲ". 

# ರಾಷ್ಟ್ರನಾಯಕ
# ಶ್ರೀ ಎಸ್. ನಿಜಲಿಂಗಪ್ಪನವರು

ಜಿ. ಆರ್. ಶಶಿರೇಖಾ*

ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖರಲ್ಲೊಬ್ಬರಾದ ಎಸ್. ನಿಜಲಿಂಗಪ್ಪನವರು ನಿಷ್ಣಾತ ಆಡಳಿತಜ್ಞರಾಗಿದ್ದರು. ನೀತಿ-ನಿಯತ್ತುಗಳಿಗೆ ಮತ್ತು ಪ್ರಾಮಾಣಿಕತೆಗೆ ಹೆಸರಾದ, ಶುದ್ಧ ನೈತಿಕ ಜೀವನ ನಡೆಸಿದ ವ್ಯಕ್ತಿ, ಅವರು. ಆಧುನಿಕ ಕರ್ನಾಟಕದ ರೂವಾರಿಗಳಲ್ಲಿ ಎದ್ದುಕಾಣುವಂತಹವರು, ರಾಜಕೀಯ ರಂಗದಲ್ಲಿ ಪರಿಶುದ್ಧ ಎನಿಸಿಕೊಳ್ಳುವುದು ತುಂಬಾ ಕಠಿಣ. ಅಂತಹುದರಲ್ಲಿ ಅವರು ಪರಿಶುದ್ಧತೆಯನ್ನು ಸಾಧಿಸಿ ತಮ್ಮ ವಿರೋಧಿಗಳೂ ಕೂಡಾ ತಮ್ಮ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸುವಂತೆ ಮಾಡಿದ ಧೀಮಂತ ವ್ಯಕ್ತಿಯಾಗಿದ್ದರು. ಸಂಕ್ಷಿಪ್ತವಾಗಿ ಎಸ್ಸೆನ್ ಎಂದೇ ಚಿರಪರಿಚಿತರಾದ ಇವರು ಕರ್ನಾಟಕದ ಏಕೀಕರಣಕ್ಕಾಗಿ, ಅನಂತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗಾಗಿ ನಿಸ್ವಾರ್ಥಿಯಾಗಿ ದುಡಿದ ಅಪರೂಪದ ಧುರೀಣರಲ್ಲಿ ಒಬ್ಬರಾದ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು ಸುಮಾರು ಮೂರು ದಶಕಗಳಿಗೂ ಹೆಚ್ಚು ಕಾಲ ರಾಜ್ಯ ಹಾಗೂ ರಾಷ್ಟ್ರ ರಾಜಕಾರಣದಲ್ಲಿ ಸಕ್ರಿಯವಾಗಿ ದುಡಿದು ಕರ್ನಾಟಕದ ಮುಖ್ಯಮಂತ್ರಿ ಹಾಗೂ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಪದವಿಯೂ ಸೇರಿದಂತೆ ವಿವಿಧ ರೀತಿಯ ಹುದ್ದೆಗಳಲ್ಲಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಹೆಸರುಗಳಿಸಿದ್ದರು.

ಬಾಲ್ಯ ಜೀವನ : ಹೋರಾಟ ಮತ್ತು ಸಾಧನೆಗಳ ಚೈತನ್ಯಶಾಲಿ ವ್ಯಕ್ತಿತ್ವದ ನಿಜಲಿಂಗಪ್ಪನವರು ೧೯೦೨ ಡಿಸೆಂಬರ್ ೧೦ ರಂದು (ಆಗಿನ ಬಳ್ಳಾರಿ ಜಿಲ್ಲೆಯ) ಈಗಿನ ದಾವಣಗೆರೆ ಜಿಲ್ಲೆಯ ಹಲವಾಗಿಲು ಗ್ರಾಮದ ಬಡಕುಟುಂಬವೊಂದರಲ್ಲಿ

---

*ಪ್ರಥಮ ಬಿ.ಎ., ಶ್ರೀ ಶಿವಲಿಂಗೇಶ್ವರಸ್ವಾಮಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚನ್ನಗಿರಿ

ಜನಿಸಿದರು. ತಂದೆ ಅಬ್ಬಲೂರು ಅಡಿವೆಪ್ಪ ವೃತ್ತಿಯಲ್ಲಿ ವರ್ತಕರಾಗಿದ್ದರು. ತಾಯಿ ನೀಲಮ್ಮ ಸಾಧ್ವಿ ಶಿರೋಮಣಿ ಮತ್ತು ಶಿವಭಕ್ತೆ. ನಿಜಲಿಂಗಪ್ಪನವರು ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡರು. ನಂತರ ತಾಯಿ ನೀಲಮ್ಮ ಕೂಲಿ ಕೆಲಸ ಮಾಡಿ ಇವರನ್ನು ಪ್ರೀತಿಯಿಂದ, ಅಕ್ಕರೆಯಿಂದ ಸಾಕಿದರು. ಎಸ್ಸೆನ್ ಅವರ ಅಜ್ಜ ಚನ್ನಮಲ್ಲಪ್ಪನವರು ಹೇಳುತ್ತಿದ್ದ ಗೋವಿನ ಕಥೆ. ಸೋಮೇಶ್ವರ ಶತಕ, ಶಿವಶರಣರ ವಚನಗಳು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪರಿಣಾಮ ಬೀರಿದವು. ಮುಂದೆ ನೀಲಮ್ಮನವರ ಸಹೋದರಿ ಯಾದ ಸಾವಕ್ಕ ಮತ್ತು ಅವರ ಪತಿ ರುದ್ರಪ್ಪನವರ ಆಶ್ರಯ ಇವರಿಗೆ ದೊರೆಯಿತು. ವೃತ್ತಿಯಲ್ಲಿ ವ್ಯಾಪಾರಿಗಳಾಗಿದ್ದ ರುದ್ರಪ್ಪನವರು ದಾವಣಗೆರೆಯಲ್ಲಿ ನೆಲೆಸಿದ್ದರೂ ಅವರ ಸ್ವಂತ ಊರು ಚಿತ್ರದುರ್ಗದ ಸಿದ್ದವ್ವನಹಳ್ಳಿಯಾಗಿತ್ತು. ಅಲ್ಲಿಂದ ಮುಂದೆ ನಿಜಲಿಂಗಪ್ಪನವರ ಹೆಸರಿನೊಂದಿಗೆ ಸಿದ್ದವ್ವನಹಳ್ಳಿಯದು ಅವಿನಾಭಾವ ಸಂಬಂಧ.

ಎಸ್ಸೆನ್ ಅವರು ದಾವಣಗೆರೆಯ ಆಂಗ್ಲೋವರ್ನಾಕ್ಯುಲರ್ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದು ನಂತರ ಚಿತ್ರದುರ್ಗದಲ್ಲಿ ಪ್ರೌಢ ಶಿಕ್ಷಣವನ್ನು ಪಡೆದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಸ್ನಾತಕ ಪದವಿಗಳಿಸಿ ನಂತರ ಪೂನಾದಲ್ಲಿ ಕಾನೂನು ಪದವಿಗಳಿಸಿದರು. ಆ ದಿನಗಳಲ್ಲಿ ಅವರು ಸಾಹಿತ್ಯ ಮತ್ತು ಕ್ರೀಡೆಯಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದರು. ಉತ್ತಮ ಕ್ರೀಡಾಪಟುವೂ ಆಗಿದ್ದರು. ಅನಂತರ ಚಿತ್ರದುರ್ಗದಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ತರುವಾಯ ದಾವಣಗೆರೆಯ ಮುರಿಗೆಮ್ಮ ಅವರೊಂದಿಗೆ ವಿವಾಹವಾದರು.

ನಿಜಲಿಂಗಪ್ಪನವರು ತಮ್ಮ ವಕೀಲಿ ವೃತ್ತಿಯನ್ನು ಹೆಚ್ಚು ದಕ್ಷತೆಯಿಂದ ನಿರ್ವಹಿಸಿದರು. ಚಿತ್ರದುರ್ಗದ ಜನತೆಯಿಂದ ವಕೀಲರೆಂದರೆ ನಿಜಲಿಂಗಪ್ಪನವರು ಎಂದು ಮೆಚ್ಚುಗೆ ಪಡೆದು ಇತರ ಜಿಲ್ಲೆಗಳಲ್ಲು ಪ್ರಸಿದ್ಧಿ ಪಡೆದರು. ಅವರಿಗೆ ತಮ್ಮ ಕಾಯಕದಲ್ಲಿ ತುಂಬಾ ಶ್ರದ್ಧೆಯಿತ್ತು. ಬಸವಣ್ಣನವರ ಕಾಯಕವೇ ಕೈಲಾಸ ಎಂಬ ತತ್ವದಲ್ಲಿ ತುಂಬಾ ನಂಬಿಕೆ ಇಟ್ಟು ಅದರಂತೆ ನಡೆದುಕೊಂಡವರು.

## ರಾಷ್ಟ್ರೀಯ ಆಂದೋಲನದಲ್ಲಿ ಪ್ರವೇಶ

ಶಾಲಾ ಕಾಲೇಜು ದಿನಗಳಿಂದಲೇ ಶಿವಶರಣರ ವಚನಗಳು, ಶಂಕರಾಚಾರ್ಯರ ದರ್ಶನ, ಮಾಳವೀಯರ ಭಾಷಣ, ಗಾಂಧೀಜಿಯ ವಿಚಾರಧಾರೆಗಳು ಅವರ ವ್ಯಕ್ತಿತ್ವದ ಮೇಲೆ ಅಪಾರ ಪ್ರಭಾವ ಬೀರಿದ್ದವು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡು ಅಲ್ಲಿ ಮೊದಲ ಬಾರಿಗೆ ಗಾಂಧೀಜಿಯವರ ದರ್ಶನ ಪಡೆದರು. ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಳ್ಳಲು ಪ್ರೇರಣೆಯನ್ನು ಪಡೆದರು; ಅಸಹಕಾರ ಚಳುವಳಿಯಲ್ಲಿ ಭಾಗಿಯಾದರು. ಟಿ. ಸಿದ್ಧಲಿಂಗಯ್ಯ, ಎಚ್. ಸಿ. ದಾಸಪ್ಪ ಮುಂತಾದ ಹಿರಿಯರೊಂದಿಗೆ ಒಡಗೂಡಿ ಮೈಸೂರು ಕಾಂಗ್ರೆಸ್ ಸ್ಥಾಪನೆ ಮಾಡಿದರು. ಮೈಸೂರು ಕಾಂಗ್ರೆಸ್‌ನ ಅಧ್ಯಕ್ಷರಾಗಿ ಕನ್ನಡ ನಾಡಿನ ತುಂಬಾ ಸಂಚಾರ ಮಾಡಿ ಹೋರಾಟಗಳಿಗೆ ಜನತೆಯನ್ನು ಹುರಿದುಂಬಿಸುತ್ತಿದ್ದರು. ಅಂಕೋಲಾ ಮತ್ತು ಸಿದ್ಧಾಪುರಗಳಲ್ಲಿ ನಡೆದ ಚಳುವಳಿಯಲ್ಲಿ ಭಾಗಿಯಾಗಲು ಸಾಧ್ಯವಾಗದಿದ್ದರೂ ಚಳುವಳಿಗೆ ನೆರವಾಗಲೆಂದು ತಮ್ಮ ಕೈಲಾದಷ್ಟು ಹಣ ಸಂಗ್ರಹಿಸಿ ಕಳಿಸಿದ್ದರು. ಗಾಂಧೀಜಿಯ ಸಂದೇಶ, ರಾಜಕೀಯ ವಿಮೋಚನೆ, ಸಮಾಜದ ಸುಧಾರಣೆ, ಸ್ತ್ರೀ ಪುರುಷರ

ಸಮಾನತೆ, ವಿಧವಾ ವಿವಾಹ, ಗ್ರಾಮೀಣ ಅರ್ಥವ್ಯವಸ್ಥೆಯ ಪುನರುದ್ಧಾರ ಹೀಗೆ ಅವರ ವಿಚಾರ ಧಾರೆ ಹತ್ತು ಹಲವಾರು ರೀತಿಯಲ್ಲಿತ್ತು. 'ಅರಣ್ಯ ಸತ್ಯಾಗ್ರಹ' ಮಾಡಿ ಕಾರಾಗೃಹ ವಾಸವನ್ನು ಅನುಭವಿಸಿದರು. ೧೯೪೨ರಲ್ಲಿ 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ಭಾಗಿಯಾಗಿ ಮತ್ತೆ ಸೆರೆಮನೆ ವಾಸವನ್ನು ಅನುಭವಿಸಿದರು. ಅವರು ಸೆರೆಮನೆಗೆ ಹೋಗುತ್ತಿದ್ದಾಗ ಅವರ ಮಡದಿ ಮತ್ತು ತಾಯಿ ಸ್ವಲ್ಪವೂ ವಿಚಲಿತರಾಗದೆ ಅವರನ್ನು ಬೀಳ್ಕೊಡುತ್ತಿದ್ದರು. ಸತ್ಯಾಗ್ರಹ ಮಾಡಿ ದಂಡ ಕೂಡಾ ಕಟ್ಟಿದ್ದರು.

## ಕರ್ನಾಟಕ ಏಕೀಕರಣದ ಹೋರಾಟದಲ್ಲಿ ಅವರ ಪಾತ್ರ

೧೯೪೬ರಲ್ಲಿ ಎಸ್ಸೆನ್ ಕರ್ನಾಟಕದ ಪ್ರಾಂತೀಯ ಕಾಂಗ್ರೆಸ್‌ನ ಅಧ್ಯಕ್ಷರಾದ ಮೇಲೆ ಏಕೀಕರಣಕ್ಕಾಗಿ ತುಂಬಾ ಹೋರಾಟ ನಡೆಸಿದರು. ಮತ್ತು ಇಲ್ಲಿನ ಜವಾಬ್ದಾರಿ ಸರ್ಕಾರ ರಚನೆಯ ಸಾಧನೆಯಲ್ಲಿ ಅವರ ಪಾತ್ರ ತುಂಬಾ ಮಹತ್ವವಾದದ್ದು. ಎಸ್ಸೆನ್ ಅವರ ಏಕೀಕರಣವಾದ ಕಂಡು ಸರ್ದಾರ್ ವಲ್ಲಭಬಾಯಿ ಪಟೇಲರು ಆಶ್ಚರ್ಯ ವ್ಯಕ್ತ ಪಡಿಸಿದ್ದರು. ನೆಹರೂರವರು ಒಮ್ಮೆ ಎಸ್ಸೆನ್ ಕುರಿತು "ಈ ಏಕೀಕರಣದ ವ್ಯವಹಾರವನ್ನು ಕೈ ಬಿಡಬಾರದೇಕೆ?" ಎಂದು ಕೇಳಿದಾಗ "ಪಂಡಿತ್ ಜಿ ಜನರಿಗೆ ಬೇಕಾದುದನ್ನು ನಾನು ಬಿಟ್ಟುಕೊಡಲಾರೆ" ಎಂದು ನಿಷ್ಠುರವಾಗಿ ಹೇಳಿದ್ದ ತತ್ವನಿಷ್ಠ ವ್ಯಕ್ತಿ. ೧೯೪೭ ರಲ್ಲಿ "ಮೈಸೂರು ಚಲೋ" ಚಳುವಳಿಯಲ್ಲಿ ಭಾಗಿಯಾಗಲು ದೆಹಲಿಯಿಂದ ಕೊಡಗಿನ ಮಾರ್ಗವಾಗಿ ಧಾವಿಸುತ್ತಿದ್ದಾಗ ಅವರನ್ನು ಬಂಧಿಸಿ ೨೦ ದಿನಕಾಲ ಸೆರೆಮನೆಯಲ್ಲಿಟ್ಟರು. ಸೆರೆಮನೆಗೆ ಹೋಗಿ ಬಂದಷ್ಟು ಎಸ್ಸೆನ್ ಅಪ್ಪಟ ದೇಶಾಭಿಮಾನಿಯಾಗತೊಡಗಿದ್ದರು. ಇವರ ಪರಿಶ್ರಮದ ಫಲವೇ ಇಂದಿನ ಕರ್ನಾಟಕ. ಆ ಹಿನ್ನೆಲೆಯಲ್ಲಿ ಇವರನ್ನು 'ಕರ್ನಾಟಕದ ರೂವಾರಿ' ಎಂದು ದೇ.ಜ.ಗೌ. ಕರೆದಿರುವುದು ಹೆಚ್ಚು ಸೂಕ್ತವಾಗಿದೆ. ಏಕೀಕರಣ ಚಳುವಳಿಯಲ್ಲಿ ದಿಟ್ಟ ಹೆಜ್ಜೆ ಯಿಟ್ಟು, ಯಾರ ವಿರೋಧವನ್ನೂ ಲೆಕ್ಕಿಸದೆ ಹೋರಾಟ ನಡೆಸಿದ ನಿಷ್ಠಾವಂತರು ಎಂದು ಅನಂತರದಲ್ಲಿ ಮಾಜಿ ಉಪರಾಷ್ಟ್ರ ಪತಿಯಾಗಿದ್ದ ಬಿ.ಡಿ. ಜತ್ತಿಯವರು ಅವರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದು ಸಮಂಜಸವಾಗಿದೆ.

## ಮುಖ್ಯಮಂತ್ರಿಯಾಗಿ ಎಸ್ಸೆನ್ ಅವರ ಸಾಧನೆ

ಕರ್ನಾಟಕ ಏಕೀಕರಣದ ಪ್ರಥಮ ಮುಖ್ಯಮಂತ್ರಿ ಎಂಬ ಹಿರಿಮೆಗೆ ಪಾತ್ರರಾಗಿದ್ದ ಎಸ್ಸೆನ್ ೧೯೫೬-೫೮, ೧೯೬೨-೬೮ ರ ವರೆಗೆ ಎರಡು ಬಾರಿ ಕರ್ನಾಟಕದ ಮುಖ್ಯ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು. ಅವರ ಕಾಲದಲ್ಲಿ ಕೃಷಿ, ನೀರಾವರಿ, ವಿದ್ಯುತ್, ಅರಣ್ಯಾಭಿವೃದ್ಧಿ ಹಾಗೂ ಇತರೆ ಕ್ಷೇತ್ರಗಳಲ್ಲಿ ರಾಜ್ಯವು ಹೆಚ್ಚಿನ ಪ್ರಗತಿ ಸಾಧಿಸಿತು. ಶರಾವತಿ ಜಲವಿದ್ಯುತ್ ಯೋಜನೆಯನ್ನು ಕಾರ್ಯಗತಗೊಳಿಸಿದರು. ಸಾಕ್ಷರತಾ ಆಂದೋಲನಕ್ಕೆ ಒತ್ತು ಕೊಟ್ಟರು. ಬೆಂಗಳೂರು ನಗರದ ನೀರಿನ ಸಮಸ್ಯೆಯನ್ನು ಬಗೆಹರಿಸಲು ಕಾವೇರಿ ಯೋಜನೆಯನ್ನು ಜಾರಿಗೆ ತಂದರು. ಬೆಂಗಳೂರಿನ ಜನತೆಗೆ ನೀರಿನ ಬವಣೆಯಿಂದ ಮುಕ್ತಿ ದೊರಕಿಸಿ ಕೊಟ್ಟು ಮಾರಕ ರೋಗದಿಂದ ಪಾರಾಗಲು ಒಳಚರಂಡಿ ವ್ಯವಸ್ಥೆ ಮಾಡಿದರು.

ಕೃಷಿ ಕ್ಷೇತ್ರಕ್ಕಲ್ಲದೇ ಕೈಗಾರಿಕೆಗೂ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಮೈಸೂರು, ಹುಬ್ಬಳ್ಳಿ ಮೊದಲಾದ ನಗರಗಳಲ್ಲಿ ಕೈಗಾರಿಕಾ ಕೇಂದ್ರಗಳ ಸ್ಥಾಪನೆಗೆ ಸೌಲಭ್ಯಗಳನ್ನು ಕಲ್ಪಿಸಿದರು. ಅವರ ಅಧಿಕಾರವಧಿಯಲ್ಲಿ ಅನೇಕ ಸಕ್ಕರೆ ಕಾರ್ಖಾನೆಗಳು ಅಸ್ತಿತ್ವಕ್ಕೆ ಬಂದವು.

ದೇಶವು ಉದ್ಧಾರವಾಗಬೇಕಾದರೆ ಮೊದಲು ಹಳ್ಳಿಗಳು ಉದ್ಧಾರವಾಗಬೇಕು ಎಂದು ನಂಬಿದ್ದ ಎಸ್ಸೆನ್ ಹಳ್ಳಿಗಳಿಗೆ ಶಾಲೆಗಳು, ಕುಡಿಯುವ ನೀರು, ಮತ್ತು ರಸ್ತೆಗಳ ಸೌಲಭ್ಯಗಳನ್ನು ಕಲ್ಪಿಸಿದರು. ರಾಜಕೀಯ ಸಂತ್ರಸ್ತರಿಗೆ ಮತ್ತು ವಯಸ್ಸಾದ ನಿರ್ಗತಿಕರಿಗೆ ಪಿಂಚಣಿ ಸೌಲಭ್ಯವನ್ನು ಕಲ್ಪಿಸಿದರು. ಈ ರೀತಿಯ ಪಿಂಚಣಿ ಸೌಲಭ್ಯವನ್ನು ಕಲ್ಪಿಸಿದ ಭಾರತ ದೇಶದ ರಾಜ್ಯಗಳಲ್ಲಿ ಕರ್ನಾಟಕವೇ ಮೊದಲಿನದು. ಸಾಹಿತಿ, ಕಲಾವಿದರಿಗೆ ಮಾಸಾಶನ ನೀಡುವ ಸಂಪ್ರದಾಯವನ್ನು ಜಾರಿಗೆ ತಂದರು. ಕುವೆಂಪು ಅವರಿಗೆ ೬೦ ವರ್ಷ ತುಂಬಿದಾಗ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿದರು.

ಅವರ ಕಾಲದಲ್ಲಿ ಬೆಂಗಳೂರು ಮತ್ತು ಹೆಬ್ಬಾಳದ ಕೃಷಿ ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ಎಸ್. ಎಸ್. ಎಲ್. ಸಿ. ತನಕ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣದ ಸೌಲಭ್ಯವನ್ನು ಕಲ್ಪಿಸಿದರು.

ಹೀಗೆ ಎಸ್ಸೆನ್ ಅನೇಕ ಯೋಜನೆಗಳನ್ನು ರೂಪಿಸಿ ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿಯಾಗಿದ್ದರು.

## ರಾಷ್ಟ್ರಮಟ್ಟದ ರಾಜಕೀಯ ಧುರೀಣ

ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಚಿರಪರಿಚಿತರಾದ ಕೆಲವೇ ವ್ಯಕ್ತಿಗಳಲ್ಲಿ ಎಸ್ಸೆನ್ ಕೂಡಾ ಒಬ್ಬರು. ಅಧಿಕಾರಕ್ಕಾಗಲಿ ಸ್ಥಾನಮಾನ ಸವಲತ್ತುಗಳಿಗಾಗಿ ಎಂದಿಗೂ ಹಾತೊರೆದವರಲ್ಲ. ಇಲ್ಲಿ ಅಧಿಕಾರವೇ ಇವರನ್ನು ಅರಸಿ ಬರುತ್ತಿತ್ತು ಎನ್ನುವ ಮಾತು ಹೆಚ್ಚು ಸೂಕ್ತವಾಗುತ್ತದೆ. ೧೯೬೮ ರಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದದ್ದು ಅವರ ರಾಜಕೀಯ ಜೀವನದ ಮಹತ್ವದ ತಿರುವು. ನೆಹರೂ ಯುಗ ಮುಗಿದು ಮುಂದೆ ಕಾಂಗ್ರೆಸ್ ಪಕ್ಷ ಇಂದಿರಾ ಅವರ ಹತೋಟಿಗೆ ಬಂದಾಗ ಅನೇಕ ಹಿರಿಯ ನಾಯಕರಿಗೆ ಆದಂತಹ ಉಸಿರುಕಟ್ಟಿದ ಅನುಭವ ಇವರಿಗೂ ಆಗಿತ್ತು. ಈ ಸಂದರ್ಭದಲ್ಲಿಯೇ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಮುಖಂಡರು ಮತ್ತು ಪ್ರಧಾನಿ ಇಂದಿರಾಗಾಂಧಿಯವರ ನಡುವಿನ ಮೈತ್ರಿ ಮುರಿದು ಬಿದ್ದು ಅವರ ನಡುವಿನ ವಿರಸ ಉಲ್ಬಣಗೊಂಡಿತು. ಆಗ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಎಸ್ಸೆನ್ ಅವರನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ಇಂದಿರಾ ಅವರು ಮಾಡಿದ ಪ್ರಯತ್ನಗಳು ಮತ್ತು ಹೂಡಿದ ತಂತ್ರಗಳು ಸಫಲವಾಗಲಿಲ್ಲ. ಕೊನೆಗೆ ಎನ್. ಸಂಜೀವರೆಡ್ಡಿ ಅವರನ್ನು ರಾಷ್ಟ್ರಪತಿ ಸ್ಥಾನಕ್ಕೆ ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿ ಎಂದು ಘೋಷಿಸಿದ್ದ ಇಂದಿರಾ ಅವರೇ ಮುಂದೆ ವಿ. ವಿ. ಗಿರಿಯವರನ್ನು ಬೆಂಬಲಿಸಿ ಕಾಂಗ್ರೆಸ್ ಪಕ್ಷದಲ್ಲಿ ಒಡಕುಂಟಾಗಲು ಕಾರಣರಾದರು. ಸ್ವಾತಂತ್ರ್ಯ ಬಂದ ಮೇಲೆ ಮೊಟ್ಟಮೊದಲಿಗೆ ಕನ್ನಡಿಗರಾಗಿ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನ ಅಲಂಕರಿಸಿದ್ದ ಎಸ್ಸೆನ್ ಮುಂದೆ ಇನ್ನೂ ಉನ್ನತ ಸ್ಥಾನಗಳಿಗೆ ಏರಿ ಏನೆಲ್ಲಾ ಆಗುವ ಅವಕಾಶಗಳಿದ್ದವು. ಅವರು ಅಂದಿನ ಪ್ರಧಾನಿ ಇಂದಿರಾ ಅವರಿಗೆ ಬರಿಯ ಸಹಕಾರ ಕೊಟ್ಟು. ಅವರ ನಿಲುವುಗಳಿಗೆ ಒಪ್ಪಿಗೆ ಸೂಚಿಸಿದ್ದರೆ ಸಾಕಿತ್ತು. ಅದೆಲ್ಲವನ್ನು ಗಳಿಸುವ ಸಾಧ್ಯತೆ ಇತ್ತು. ಆದರೆ ತಮ್ಮ ನಿಷ್ಠುರತೆ ಮತ್ತು

ಪ್ರಾಮಾಣಿಕತೆಯನ್ನು ಬಿಡಲು ಸಿದ್ಧರಿಲ್ಲದ ಎಸ್ಸೆನ್ "ನೀವು ಹಿಡಿದ ಮಾರ್ಗ ತಪ್ಪು" ಎಂದು ಮುಖಕ್ಕೆ ಹೊಡೆದಂತೆ ಹೇಳಿ ಹೊರಬಂದ ಧೀಮಂತ ವ್ಯಕ್ತಿ. ರಾಜಕೀಯ ಜೀವನದಲ್ಲಿ ತತ್ವ ಆದರ್ಶ ಮೌಲ್ಯಗಳ ಬಗ್ಗೆ ತೀವ್ರ ಕಾಳಜಿ ಹೊಂದಿದ್ದ ಎಸ್ಸೆನ್ ಆ ವಿಷಯದಲ್ಲಿ ಎಂದಿಗೂ, ಯಾರೊಂದಿಗೂ ರಾಜಿಮಾಡಿಕೊಂಡವರಲ್ಲ.

ಎಸ್ಸೆನ್ ಹಲವಾರು ಹುದ್ದೆಗಳಲ್ಲಿ ವೈವಿಧ್ಯಮಯವಾಗಿ ಕಾರ್ಯ ನಿರ್ವಹಿಸಿದ್ದಾರೆ. ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರೂ, ಸಂವಿಧಾನ ರಚನಾ ಸಭೆಯ ಸದಸ್ಯರೂ, ಮೈಸೂರು ಸಂವಿಧಾನ ರಚನಾ ಸಭೆಯ ಅಧ್ಯಕ್ಷರೂ, ಲೋಕಸಭಾ ಸದಸ್ಯರೂ, ಕಾಂಗ್ರೆಸ್‌ಕಾರ್ಯಕಾರಿ ಸಮಿತಿಯ ಸದಸ್ಯರೂ ಆಗಿ ಎಸ್ಸೆನ್ ಕಾರ್ಯನಿರ್ವಹಿಸಿದವರು. ಅಲ್ಲದೇ ಭಾರತೀಯ ತೈಲ ನಿಗಮದ ಅಧ್ಯಕ್ಷರೂ ಆಗಿದ್ದರು.

೧೯೭೧ರಲ್ಲಿ ರಾಜಕೀಯಕ್ಕೆ ವಿದಾಯ ಹೇಳಿದ ಮೇಲೆ ಚಿತ್ರದುರ್ಗದಲ್ಲಿ ವಾಸವಾಗಿದ್ದರು. ನಾಡಿಗೆ, ದೇಶಕ್ಕೆ ಅವರು ಎಸ್ಸೆನ್ ಆದರೆ ಚಿತ್ರದುರ್ಗದ ಜನತೆಗೆ ಅವರು ಮೆಚ್ಚಿನ ಅಜ್ಜ ಆಗಿದ್ದರು. ಎಸ್ಸೆನ್ ಅವರಿಗೆ ೯ ಜನ ಮಕ್ಕಳು ಇದ್ದುದರಿಂದ ತುಂಬು ಕುಟುಂಬದಲ್ಲಿ ಬಾಳಿದ ಈ ಹಿರಿಯ ಜೀವ "ನನಗೆ ಸಾಯಲು ಇಷ್ಟವಿಲ್ಲ. ನಾನು ಬಹಳ ಕಾಲ ಬದುಕಬೇಕು. ಈ ಬ್ರಹ್ಮಾಂಡ ನೀಲಾಕಾಶ, ಸೂರ್ಯ, ಚಂದ್ರ, ನಕ್ಷತ್ರಗಳನ್ನು ಕಂಡರೆ ತುಂಬಾ ಪ್ರೀತಿ. ಈ ಪ್ರಪಂಚ ಎಂದರೆ ನನಗೆ ತುಂಬಾ ಆಕರ್ಷಣೆ. ಇದನ್ನು ಕಾಣುತ್ತಾ ಸದಾ ಖುಷಿಯಾಗಿರಬೇಕು. ಆದರೆ ಯಾವುದೇ ಕ್ಷಣಕ್ಕೂ ಕರೆ ಬಂದರೂ ನಾನು ನಿಲ್ಲುವುದಿಲ್ಲ. ಸಂತೋಷದಿಂದ ಹೋಗುತ್ತೇನೆ. ಈ ಮಹಾಚೈತನ್ಯದ ಅವಿಭಾಜ್ಯ ಅಂಗವಾಗುತ್ತೇನೆ" ಎಂದು ಹೇಳುತ್ತಿದ್ದ ಎಸ್ಸೆನ್ ೨೦೦೦ದ ಇಸವಿ ಆಗಸ್ಟ್ ತಿಂಗಳಲ್ಲಿ ಇಹಲೋಕ ಯಾತ್ರೆ ಮುಗಿಸಿ ಪಂಚಮಹಾಭೂತಗಳಲ್ಲಿ ಲೀನವಾದರು.

ಸ್ವಾತಂತ್ರ್ಯ ಬಂದ ಬಳಿಕ ಬಂಗಾರದ ತುಲಾಭಾರದ ಗೌರವ ಪಡೆದ ಪ್ರಥಮ ಮುಖ್ಯಮಂತ್ರಿ, ರಾಜಕಾರಣಿ ಎಸ್ಸೆನ್‌ಆಗಿದ್ದರು. ಚೀನಾ ಜೊತೆಗೆ ಯುದ್ಧ ಸಂಭವಿಸಿದಾಗ ಆದ ವೆಚ್ಚವನ್ನು ಭರಿಸಲು ವಿಜಾಪುರದ ಸಾರ್ವಜನಿಕರು ಸ್ವಪ್ರೇರಣೆಯಿಂದ ಎಸ್ಸೆನ್ ತೂಕದಷ್ಟು ಚಿನ್ನಾಭರಣದ ತುಲಾಭಾರ ಮಾಡಿ ದೇಶಕ್ಕೆ ಸಮರ್ಪಿಸಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ಗಾಂಧೀವಾದದ ದೀಕ್ಷೆ ಪಡೆದು ತಮ್ಮ ಜೀವನದುದ್ದಕ್ಕೂ ಅದನ್ನು ಪಾಲಿಸಿಕೊಂಡು ಬಂದ ಅಪರೂಪದ ವ್ಯಕ್ತಿ. ಯಾವಾಗಲೂ ಗರಿಗರಿಯಾದ ಖಾದಿ ಶುಭ್ರ ವಸ್ತ್ರಗಳನ್ನು ಧರಿಸುತ್ತಿದ್ದ ಸರಳ ಜೀವಿ. ಎರಡು ಅವಧಿಗೆ ಮುಖ್ಯಮಂತ್ರಿಯಾದರೂ ಅವರ ಆಸ್ತಿಯೆಂದರೆ ಚಿತ್ರದುರ್ಗದ ವಿ.ಪಿ. ಬಡಾವಣೆಯ ಪುಟ್ಟ ಮನೆ 'ವಿನಯ' ಮಾತ್ರ. ಅದೂ ಆರೇಳು ದಶಕಗಳ ಹಿಂದೆ ವಕೀಲರಾಗಿ ದುಡಿದು ಸಂಪಾದಿಸಿದ ಹಣದಲ್ಲಿ ಕಟ್ಟಿಸಿದ್ದು. ತೀರಾ ಸಾಧಾರಣವಾದ ಈ ಮನೆ, ಅದನ್ನು ನೋಡಿದವರು ಇದು ಮಾಜಿ ಮುಖ್ಯಮಂತ್ರಿಯೊಬ್ಬರ ಮನೆಯೇ? ಎಂದು ಅಚ್ಚರಿಪಡುವಷ್ಟು ಸರಳವಾದುದು. ಅವರ ನಡೆ-ನುಡಿಗಳ ನಡುವೆ ಅಂತರವಿರಲಿಲ್ಲ ಎಂಬುದನ್ನು ಇದರಿಂದ ಅರಿಯಬಹುದಾಗಿದೆ. ಬೆಂಗಳೂರಿನಲ್ಲಿ ತಮ್ಮದೇ ಸ್ವಂತ ಮನೆ ಇಲ್ಲದ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಎಸ್ಸೆನ್ ಅವರು ಬಹುವಾಗಿ ಪ್ರೀತಿಸುತ್ತಿದ್ದ

ಅವರ ಪತ್ನಿಯ ಸಮಾಧಿ ಇರುವುದು ಚಿತ್ರದುರ್ಗದಿಂದ ೧೦. ಕಿ. ಮೀ. ದೂರ ಇರುವ ದೊಡ್ಡಸಿದ್ದವ್ವನಹಳ್ಳಿಯ ಆತ್ಮೀಯರ ಜಮೀನಿನಲ್ಲಿ.

ಅಧಿಕಾರದಲ್ಲಿದ್ದಾಗ ಸರ್ಕಾರಿ ಕಾರು, ಬಂಗಲೆ, ಆಳು-ಕಾಳು, ಆದೇಶವನ್ನು ಪಾಲಿಸಲು ಕೈ ಕಟ್ಟಿ ನಿಂತ ನೌಕರರು, ಇವೆಲ್ಲವನ್ನು ಕಂಡವರಾದರೂ ಇಂತಹ ಎಲ್ಲ ಆಕರ್ಷಣೆಗಳನ್ನು ದೂರ ಸರಿಸಿ, ರಾಜಕೀಯದಿಂದ ವಿಶ್ರಾಂತಿ ಬಯಸಿ, ತಪಸ್ವಿಯಂತೆ ತಾವು ಬೆಳೆದ ದಾರಿಯಲ್ಲಿ ಜೀವನವನ್ನು ಕಳೆಯಲು ನಿರ್ಧರಿಸಿದ್ದು, ಅವರ ಸರಳತೆಗೆ ಮತ್ತೊಂದು ಉದಾಹರಣೆ. ರಾಜಕೀಯ ಅಧಿಕಾರ ಬಳಸಿ ತಮಗಾಗಿ ಅಥವಾ ತಮ್ಮ ಬಂಧುಗಳಿಗಾಗಿ ಏನನ್ನೂ ಮಾಡಿಕೊಳ್ಳದ ಎಸ್ಸೆನ್‌ಗೆ ಅಂತ್ಯ ಕಾಲಕ್ಕೆ ಅವರದೇ ಆದಂತಹ ಮೂರಡಿ- ಆರಡಿ ಜಾಗವೂ ಇರಲಿಲ್ಲ. ಕೊನೆಗೆ ಅವರನ್ನು ಚಿತ್ರದುರ್ಗದ ಬಳಿ ಇರುವ ಬೃಹನ್ಮಠಕ್ಕೆ ಸೇರಿದ ಸ್ವರ್ಣ ಜಯಂತಿ ಉದ್ಯಾನದಲ್ಲಿ ಸಮಾಧಿ ಮಾಡಬೇಕಾಗಿ ಬಂತು. ಅಧಿಕಾರ ದಲ್ಲಿದ್ದರು ಮತ್ತು ನಿವೃತ್ತಿ ನಂತರವೂ ತಮ್ಮ ಮಾತಿಗೆ ಎಲ್ಲೆಡೆ ಬೆಲೆ ಇದ್ದಾಗಲೂ ತಮಗಾಗಿ ತಮ್ಮ ಮಕ್ಕಳಿಗಾಗಿ ಯಾವುದೇ ಪ್ರಭಾವವನ್ನು ಅವರು ಬಳಸಿದವರಲ್ಲ. ಒಮ್ಮೆ ಅವರ ಮಗ ಬಿಸಿಲಿನಲ್ಲಿ ನಡೆದುಕೊಂಡು ಬರುತ್ತಿದ್ದರೂ. ತಮ್ಮ ವಾಹನದಲ್ಲಿ ಕೂರಿಸಿಕೊಂಡು ಬಂದಿರಲಿಲ್ಲ. ಈ ಬಗ್ಗೆ ಅವರ ಶ್ರೀಮತಿ ವಿಚಾರಿಸಿದಾಗ ಅದು ಸರ್ಕಾರಿ ವಾಹನ ಕುಟುಂಬ ವರ್ಗದವರು ಪ್ರಯಾಣಿಸಲು ಕೊಟ್ಟಿದ್ದಲ್ಲ ಎಂದು ನಿಷ್ಠುರವಾಗಿ ಉತ್ತರಿಸಿದ್ದರು.

ಜೀವನದಲ್ಲಿ ರಾಜಕೀಯದಲ್ಲಿ ಅನೇಕ ಏಳುಬೀಳುಗಳನ್ನು ಕಂಡವರಾದರೂ ತಮ್ಮ ವೃದ್ಧಾಪ್ಯದಲ್ಲೂ ಜೀವನೋತ್ಸಾಹವನ್ನು ಕಳೆದುಕೊಂಡಿರಲಿಲ್ಲ. ಅತ್ಯಂತ ಶಿಸ್ತು ಬದ್ಧ ಜೀವನ ಸಾಗಿಸಿದ ವ್ಯಕ್ತಿ. ಉಪಕಾರ ಸ್ಮರಣೆಯ ಸ್ವಭಾವದವರು, ಅತ್ಯಂತ ಕರುಣಾ ಮೂರ್ತಿ, ಹೆಂಗರುಳುಸ್ವಭಾವದವರು. ಆದರೆ ಸಂದರ್ಭ ಬಂದಾಗ ಅಷ್ಟೇ ಕಠಿಣ ಮನಸ್ಸುಳ್ಳವರೂ ಆಗಿದ್ದರು. ಪತ್ರಿಕೆಗಳನ್ನು ಓದುವುದು, ರೇಡಿಯೋದಲ್ಲಿ ದಿನವೂ ಸಮಾಚಾರ ಕೇಳುವುದು, ಅವರ ತಪ್ಪದ ದಿನಚರಿಯಾಗಿತ್ತು. ಎಸ್ಸೆನ್‌ಗೆ ಅವರ ಬಗ್ಗೆ ಇದ್ದ ಒಂದೇ ಒಂದು ಆರೋಪವೆಂದರೆ ಅವರದು ಹಿತ್ತಾಳೆ ಕಿವಿಯೆಂಬುದು. ಈ ಬಗ್ಗೆ ಅವರ ಜೀವನ ಚರಿತ್ರೆಯನ್ನು ಬರೆಯುವ ಸಂದರ್ಭದಲ್ಲಿ ಖ್ಯಾತ ಸಾಹಿತಿ. ದೇ.ಜ.ಗೌ. ವಿಚಾರಿಸಿದಾಗ "ನಾನೇನು ಹೇಳಲಿ ಇದು ನಿಮಗೆ ಸರಿಯೆಂದು ತೋರಿದರೆ ಖಂಡಿತಾ ಬರೆಯಿರಿ" ಎಂದು ಹೇಳಿ ಉತ್ತೇಜನ ಕೊಟ್ಟಿದ್ದರು. ಅಲ್ಲದೇ "ನೀವು ಜೀವನ ಚರಿತ್ರೆ ಬರೆಯುವಾಗ ನನ್ನ ಬಗ್ಗೆ ಬರಿಯ ಉತ್ತಮ ಅಂಶಗಳನ್ನು ಬರೆಯದೇ ನನ್ನಲ್ಲಿರುವ ಲೋಪದೋಷಗಳ ಬಗ್ಗೆಯೂ ಬರೆಯಿರಿ. ಅವುಗಳನ್ನು ಮರೆಮಾಚಲು ಪ್ರಯತ್ನಿಸಬೇಡಿ" ಎಂದೂ ಹೇಳಿದ್ದರು.

**ಎಸ್ಸೆನ್‌ರಿಗೆ ಸಂದ ಪ್ರಮುಖ ಪ್ರಶಸ್ತಿಗಳು :** ಎಸ್ಸೆನ್ ಅವರಿಗೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ಗೌರವಿಸಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯವು "ನಾಡೋಜ" ಪ್ರಶಸ್ತಿ ನೀಡಿ ಗೌರವಿಸಿದೆ. ಕರ್ನಾಟಕ ಸರ್ಕಾರವು ೧೯೯೯ರಲ್ಲಿ ಕರ್ನಾಟಕ ರತ್ನ ಪ್ರಶಸ್ತಿ ನೀಡಿ ಗೌರವಿಸಿದೆ.

**ಎಸ್ಸೆನ್ ಅವರ ಈಡೇರದ ಬಯಕೆ** : ಬರಡು ನೆಲವಾದ ಚಿತ್ರದುರ್ಗಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಬೇಕು; ಚಿತ್ರದುರ್ಗಕ್ಕೆ ಎರಡನೇ ಹಂತದ ಕುಡಿಯುವ ನೀರಿಗಾಗಿ ಭದ್ರಾ ಮೇಲ್ದಂಡೆ ಯೋಜನೆಯನ್ನು ಕಾರ್ಯಗತಗೊಳಿಸಬೇಕು ಎಂಬುದು ಅವರ ಕೊನೆಯಾಸೆಯಾಗಿತ್ತು. ಈಗ ಈ ಹಿರಿಯ ಜೀವದ ಕೊನೆಯಾಸೆಯನ್ನು ಕಾರ್ಯಗತ ಮಾಡುವುದೇ ಅವರಿಗೆ ಸಲ್ಲಿಸಬಹುದಾದ ಶ್ರದ್ಧಾಂಜಲಿ. 



# ರಾಷ್ಟ್ರನಾಯಕ ಶ್ರೀ ನಿಜಲಿಂಗಪ್ಪನವರು

ಕೆ. ಜಿ. ಮಂಜುಳ*

ನಿಜಲಿಂಗಪ್ಪನವರು ಹುಟ್ಟಿದ್ದು ವ್ಯವಸಾಯಗಾರ ಬಡ ಕುಟುಂಬದಲ್ಲಿ. ಡಿಸೆಂಬರ್ ೧೦,೧೯೦೨ರಲ್ಲಿ ಹಲುವಾಗಿಲಿನಲ್ಲಿ ಜನಿಸಿದ್ದರು. ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡಿದ್ದರಿಂದ ಕುಟುಂಬದಿಂದ ಪಡೆದದ್ದು ಕೇವಲ ಬಡತನ. ಸಾಲದ ಹೊರೆ. ತಂದೆ ಬಿಟ್ಟು ಹೋದ ಒಂದೇ ಆಸ್ತಿ ಎಂದರೆ ಉತ್ತಮ ಚರಿತ್ರೆ, ಸಂಸ್ಕಾರ, ಇದನ್ನೇ ನಿಜಲಿಂಗಪ್ಪನವರು ಬಂಡವಾಳವಾಗಿ ಮಾಡಿಕೊಂಡರು.

ಜಾತಿ ಬಾಂಧವರಾದ ಲಿಂಗಾಯತರು ಕರ್ನಾಟಕದ ಉದ್ದಗಲಕ್ಕೆ ಸಾವಿರಾರು ಗ್ರಾಮಗಳಲ್ಲಿ ಹತ್ತು ಹದಿನೆಂಟು ಉಪಜಾತಿಗಳಲ್ಲಿ ಹಂಚಿ ಹೋಗಿದ್ದರು. ಶತಮಾನಗಳಿಂದ ಬಡತನ, ಶೋಷಣೆ, ಮೂಢತನ, ಅನಕ್ಷರತೆ ಅಂಧಕಾರದಲ್ಲಿ ಮುಳುಗಿದ್ದರು. ಅನಂತರ ನಿಜಲಿಂಗಪ್ಪನವರ ಬೆಂಬಲಕ್ಕೆ ಬಂದ ಕನ್ನಡಿಗರೂ ಪಕ್ಕದ ಐದಾರು ರಾಜ್ಯಗಳಲ್ಲಿ ಹರಿದು ಹಂಚಿ ಹೋಗಿದ್ದರು. ಇಂತಹ ಹಿನ್ನೆಲೆಯಿಂದ ಬಂದ ನಿಜಲಿಂಗಪ್ಪನವರು ಬಂಧುಮಿತ್ರರ ನೆರವಿನಿಂದ, ಸ್ವಪ್ರಯತ್ನದಿಂದ ಹುಟ್ಟೂರಿನಿಂದ ದಾವಣಗೆರೆ, ಚಿತ್ರದುರ್ಗದಲ್ಲಿ ಓದು ಮುಗಿಸಿ ಕಾಲೇಜ್ ಅಭ್ಯಾಸಕ್ಕೆ ಬೆಂಗಳೂರಿಗೆ ಹೋಗಬಯಸಿ ಪ್ರವೇಶಕ್ಕೆ ಅರ್ಜಿ ಹಾಕಿದರು. ಆದರೆ ಅವರಿಗೆ ಪ್ರವೇಶ ನೀಡಿದ್ದು ತುಮಕೂರು ಕಾಲೇಜಿನಲ್ಲಿ. ಇದನ್ನು ಪ್ರತಿಭಟಿಸಿ ಆಗ ಕೊಲಿಜಿಯೇಟ್ ನಿರ್ದೇಶಕರಾಗಿದ್ದ ಸಿ. ಆರ್. ರೆಡ್ಡಿಯವರಿಗೆ ನೇರವಾಗಿ ಮನವಿ ಸಲ್ಲಿಸಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಸೀಟು ಪಡೆದರು. ಅಲ್ಲಿ ತೋಟದಪ್ಪ ಛತ್ರದಲ್ಲಿ ಊಟ ವಸತಿ. ಬಿ ಎಸ್ಸಿ. ಓದುವಾಗಲೇ ·೧೯೨೬ರಲ್ಲಿ

---

**ಅಂತಿಮ ಬಿ.ಎಸ್ಸಿ., ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾವಿದ್ಯಾಲಯ, ಹರಿಹರ*

ಚಿತ್ರದುರ್ಗದಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದಾಗ ಯಾರೊಬ್ಬ ಹಿರಿಯ ವಕೀಲರೂ ಇವರನ್ನು ತಮ್ಮ ಕಿರಿಯ ಸಹೋದ್ಯೋಗಿ ಎಂದು ತೆಗೆದುಕೊಂಡು ವೃತ್ತಿ ಪರಿಣತಿ ಕಲಿಸಲು ಮುಂದೆ ಬರಲಿಲ್ಲ. ಸ್ವಪ್ರಯತ್ನದಿಂದ ಕಲಿತು ಚಿತ್ರದುರ್ಗ ಹಾಗೂ ದಾವಣಗೆರೆಗಳ ನ್ಯಾಯಾಲಯಗಳಲ್ಲಿ ವಕಾಲತ್ತು ನಡೆಸಿ, ಪ್ರಾಮಾಣಿಕತೆಯಿಂದ ದುಡಿದು, ಗೃಹಸ್ಥರಾಗಿ ಮನೆಕಟ್ಟಿಕೊಂಡು, ಐವತ್ತು, ವರ್ಷಗಳು ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿ ಬೆಳೆದರು.

೧೯೩೬ರಲ್ಲಿ ಪಾನವಿರೋಧ ಚಳುವಳಿಯಲ್ಲಿ ಭಾಗವಹಿಸುವುದರ ಮೂಲಕ ನಿಜಲಿಂಗಪ್ಪನವರು ನೇರವಾಗಿ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದರು. ಅಲ್ಲಿಂದ ಮುಂದೆ ಅವರು ಹತ್ತಾರು ಬಾರಿ ಜೈಲು ವಾಸ ಅನುಭವಿಸಿದರು.

ಅವರು ಸೆರೆವಾಸದಲ್ಲಿದ್ದಾಗ ಆ ವೇಳೆಗೆ ದೊಡ್ಡದಾಗಿದ್ದ ಅವರ ಕುಟುಂಬವನ್ನು ನಡೆಸಿಕೊಂಡು ಹೋಗುವ ಭಾರ ಅವರ ಶ್ರೀಮತಿಯವರ ಮೇಲೆ ಬೀಳುತ್ತಿತ್ತು. ಸರಕಾರಕ್ಕೆ ಕ್ಷಮಾಪಣಾ ಪತ್ರ ಬರೆದುಕೊಟ್ಟು ೧೯೪೦ರಲ್ಲಿ ರದ್ದಾಗಿದ್ದ ತಮ್ಮ ವಕೀಲ ವೃತ್ತಿಯ ಸನ್ನದನ್ನು ತಿರುಗಿ ಪಡೆಯ ಬಹುದಿತ್ತು. ಆದರೆ ಅವರು ಮತ್ತೆ ಹಿಂದೆ ನೋಡಲಿಲ್ಲ. ಅವರು ಮೈಸೂರು ಪ್ರದೇಶ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದರು, ಈ ಪದವಿಯನ್ನು ಬಿಡುತ್ತಿದ್ದಂತೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು. ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿ ಸಂವಿಧಾನ ರೂಪಿಸಲು ಆ ಸಭೆಗೆ ಚುನಾವಣೆ ನಡೆದಾಗ ನಿಜಲಿಂಗಪ್ಪನವರು ಸದಸ್ಯರಾಗಿ ಆಯ್ಕೆಯಾಗಿ ಭಾರತದ ಸಂವಿಧಾನವನ್ನು ರೂಪಿಸುವಲ್ಲಿ ವಿಶೇಷ ಪಾತ್ರವಹಿಸಿದರು. ೧೯೫೨ರಲ್ಲಿ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆದಾಗ ಚಿತ್ರದುರ್ಗ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿ, ಅಧಿಕ ಮತ ಪಡೆದು ಲೋಕಸಭೆಗೆ ಪ್ರವೇಶಿಸಿದರು. ಈ ವೇಳೆಗೆ ಅವರು ಕೆ.ಪಿ.ಸಿ.ಸಿ.ಯ ಅಧ್ಯಕ್ಷರೂ ಆಗಿದ್ದರು.

೧೯೨೦ರ ದಶಕದಲ್ಲಿ ನೆಹರೂರವರು ಎ.ಐ.ಸಿ.ಸಿ. ಅಧ್ಯಕ್ಷರಾಗಿದ್ದಾಗ ಹುಬ್ಬಳ್ಳಿಯಲ್ಲಿ ಸಂಭವಿಸಿದ ಒಂದು ಕಹಿ ಪ್ರಸಂಗದಿಂದಾಗಿ ಈ ಭಾಗದ ಬಹುತೇಕ ಕಾಂಗ್ರೆಸ್ ಬೆಂಬಲಿಗರು ವಿಶೇಷವಾಗಿ ಲಿಂಗಾಯತರು. ಆಗ ಧಾರವಾಡ ಜಿಲ್ಲೆಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಹೊಸಮನೆ ಸಿದ್ದಪ್ಪನವರ ನೇತೃತ್ವದಲ್ಲಿ ಕಾಂಗ್ರೆಸ್ ಬಿಟ್ಟು ಹೊರ ಬಂದಿದ್ದರು. ಹೀಗಾಗಿ ೧೯೪೬ರಲ್ಲಿ ನಿಜಲಿಂಗಪ್ಪನವರು ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ಬರುವವರೆಗೆ, ಉತ್ತರ ಕರ್ನಾಟಕದ ಭಾಗದಲ್ಲಿ ಹೆಚ್ಚಿನ ಪ್ರಮುಖ ಲಿಂಗಾಯತ ಮುಂದಾಳುಗಳು ಈ ಪಕ್ಷದಲ್ಲಿರಲಿಲ್ಲ ಮತ್ತು ಕರ್ನಾಟಕದ ಏಕೀಕರಣದ ಪ್ರಶ್ನೆ ಮೂಲೆಗುಂಪಾಗಿ ಹೋಗಿತ್ತು.

೧೯೭೭ನೇ ಇಸ್ವಿ ತುರ್ತು ಪರಿಸ್ಥಿತಿಯ ನಂತರ ಸಾರ್ವತ್ರಿಕ ಚುನಾವಣೆಯಲ್ಲಿ ಇಂದಿರಾಗಾಂಧಿಯವರ ಜೊತೆಗೆ ಅವರ ನೇತೃತ್ವದ ಕಾಂಗ್ರೆಸ್ ಪಕ್ಷ ಕೂಡ ಸೋತು ಹೋಗಿತ್ತು. ಮುರಾರ್ಜಿ ದೇಸಾಯಿಯವರು ಭಾರತದ ಪ್ರಥಮ ಕಾಂಗ್ರೆಸ್ಸೇತರ ಪಕ್ಷದ ಪ್ರಧಾನಿಯಾಗಿ ಅಧಿಕಾರ ಸ್ವೀಕರಿಸಿದ್ದರು. ಆಗ ಮುಂದಿನ ರಾಷ್ಟ್ರಪತಿ ಯಾರು ಎಂಬ ಪ್ರಶ್ನೆ ಎದ್ದಿತ್ತು. ಪಕ್ಷದ ಅನೇಕ ನಾಯಕರು ಇನ್ನಾರು ನಿಜಲಿಂಗಪ್ಪನವರೇ ಎಂದು ಸಂತೋಷ ಪಟ್ಟರು. ಈ ಪ್ರಶ್ನೆಗೆ ತೆರೆ

ಎಳೆಯಲು ಪಕ್ಷ ಅಭ್ಯರ್ಥಿಯನ್ನು ನಿರ್ಣಯಿಸುವುದು ಬಂದಾಗ ಅವರಿಗೆ ಆಶ್ಚರ್ಯ ಕಾದಿತ್ತು. ನಿಜಲಿಂಗಪ್ಪನವರು ತಾವು ಈ ಸ್ಥಾನವನ್ನು ಅಲಂಕರಿಸಲು ಒಪ್ಪದೆ ಶ್ರೀ ನೀಲಂ ಸಂಜೀವ ರೆಡ್ಡಿಯವರ ಹೆಸರು ಸೂಚಿಸಿದರು. ಯಾವೊಬ್ಬ ರಾಜಕಾರಣಿಯ ಜೀವನದ ಮಹದಾಸೆ ಒಂದು ಉನ್ನತ ಪದವಿಯನ್ನು ಅಲಂಕರಿಸುವುದು. ಇದನ್ನು ಈಡೇರಿಸಿಕೊಳ್ಳಲು ಏನೆಲ್ಲಾ ಮಾರ್ಗಗಳನ್ನು ಬಳಸುತ್ತಾರೆ. ಆದರೆ ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವದ ಪ್ರಥಮ ಪ್ರಜೆಯಾಗುವ ಗೌರವವನ್ನು ನಿಜಲಿಂಗಪ್ಪನವರು ನಿರಾಕರಿಸಿದ್ದರು. ಅವರು ಅಧಿಕಾರ ಸ್ಥಾನ ನಿರಾಕರಿಸಿದ್ದು ಇದು ಮೊದಲ ಸಲವಲ್ಲ. ೧೯೫೭ರಲ್ಲಿ ಕರ್ನಾಟಕದ ಏಕೀಕರಣವಾದ ನಂತರ ಚಳುವಳಿಯ ರೂವಾರಿಯಾಗಿದ್ದ ನಿಜಲಿಂಗಪ್ಪನವರು ನವ ಕರ್ನಾಟಕದ ಪ್ರಥಮ ಮುಖ್ಯಮಂತ್ರಿಯಾಗಿ ಚುನಾಯಿತರಾದಾಗಲೂ ಇಂತಹದ್ದೇ ಪ್ರಸಂಗ ಬಂದಿತ್ತು. ರಾಜಕಾರಣ, ಅದರಲ್ಲೂ ಅಧಿಕಾರದಲ್ಲಿರುವ ಪಕ್ಷದಲ್ಲಿ, ಗುಂಪುಗಾರಿಕೆ ಸಾಮಾನ್ಯ. ಹೀಗಾಗಿ ನಿಜಲಿಂಗಪ್ಪನವರಿಗೆ ಆಗದವರು ಇವರ ಮೇಲೆ ಲಂಚ, ಸ್ವಜನ ಪಕ್ಷಪಾತದ ಪಿತೂರಿ ಮಾಡಿ ಎ.ಐ.ಸಿ.ಸಿಗೆ ಬರೆದರು. ಇದನ್ನು ಪುರಸ್ಕರಿಸಿ, ವಿಚಾರಣೆಗೆ, ಒಂದು ಸಮಿತಿ ಬಂದಿತು. ಪ್ರದೇಶ ಮಟ್ಟದಲ್ಲಿ ಚರ್ಚೆಯಾಗದೆ ಪಕ್ಷದ ಮುಖಂಡ ಮುಖ್ಯಮಂತ್ರಿಯ ಗಮನಕ್ಕೆ ತಾರದೆ ಹೀಗೆ ಸಮಿತಿ ಕಳುಹಿಸಿದ್ದು ಪಕ್ಷದ ನಿಯಮಗಳ ಉಲ್ಲಂಘನೆ ಎಂದು ನಿಜಲಿಂಗಪ್ಪನವರು ವಿರೋಧಿಸಿದರು. ಜೊತೆಗೆ ಈ ನೀತಿಯನ್ನು ಖಂಡಿಸಲು ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬಂದಿದ್ದರು. ನಂತರ ಶ್ರೀ ಜತ್ತಿಯವರು ಕರ್ನಾಟಕದ ಮುಖ್ಯಮಂತ್ರಿಗಳಾದದ್ದು, ಅಲ್ಲಿಂದ ಮುಂದೆ ಪ್ರಾದೇಶಿಕ ಕಾಂಗ್ರೆಸ್ ಪಕ್ಷದಲ್ಲಿ ಒಡಕು ಬಂದದ್ದು ಇಂದು ಚರಿತ್ರೆ.

ತಮಗೆ ಬೇಕೆಂದಿದ್ದರೆ ನಿಜಲಿಂಗಪ್ಪನವರು ಆಗ ರಾಷ್ಟ್ರಪತಿ ಆಗಬಹುದಿತ್ತು. ಅವರಲ್ಲಿ ಈ ಸ್ಥಾನಕ್ಕೆ ತಕ್ಕದಾದ ಎಲ್ಲಾ ಅರ್ಹತೆಗಳೂ ಇದ್ದವು. ಇದು ನ್ಯಾಯ ಹಾಗೂ ಧರ್ಮಸಮ್ಮತವೂ ಆಗಿದ್ದಿತು. ಏಕೆಂದರೆ ನೀಲಂರವರು ಗಿರಿಯವರ ವಿರುದ್ಧ ಸ್ಪರ್ಧಿಸಿ ಸೋತ ನಂತರ ಇದು ಕಾಂಗ್ರೆಸ್ ಪಕ್ಷ ತಮಗೆ ಎಸಗಿದ ಅವಮಾನ ಎಂದು ನೀಲಂರವರು ದೂರಿದ್ದರು ಮಾತ್ರವಲ್ಲ, ಪಕ್ಷವನ್ನೂ ಬಿಟ್ಟಿದ್ದರು. ಆದರೂ ನಿಜಲಿಂಗಪ್ಪನವರು ಮಾತ್ರ ತಮ್ಮ ತತ್ವವನ್ನು ಬಿಡದೆ ೧೯೬೯ರಲ್ಲಿ ರೆಡ್ಡಿಯವರಿಗೆ ಕೊಟ್ಟ ವಚನವನ್ನು ಪಾಲಿಸಿದ್ದರು. ಇದರಿಂದ ಅವರ ಕೀರ್ತಿ, ವರ್ಚಸ್ಸು, ಗೌರವ ನೂರ್ಮಡಿ ಹೆಚ್ಚಿ ಇವರು ಸ್ವಾರ್ಥಕ್ಕೆ ರಾಜಕಾರಣ ಮಾಡುತ್ತಾರೆ ಎಂಬುದನ್ನು ಸುಳ್ಳು ಮಾಡಿದ್ದರು.

೧೯೪೬ರಲ್ಲಿ ನಿಜಲಿಂಗಪ್ಪನವರು ಕೆ.ಪಿ.ಸಿ.ಸಿ. ಅಧ್ಯಕ್ಷರಾದ ನಂತರ ಕರ್ನಾಟಕದ ಏಕೀಕರಣ ಮತ್ತು ಕಾಂಗ್ರೆಸ್ ಪಕ್ಷದ ಸಬಲೀಕರಣ ಈ ಎರಡಕ್ಕೂ ಹೆಚ್ಚಿನ ಬಲ ಬಂದಂತಾಯಿತು. ಇದಕ್ಕೆ ನೀರೆರದು ಬೆಂಬಲಕ್ಕೆ ನಿಂತವರು ಹುಬ್ಬಳ್ಳಿಯ ಪತ್ರಿಕೆಗಳು, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಪದಾಧಿಕಾರಿಗಳು. ೧೯೫೬ರಲ್ಲಿ ಎರಡನೆಯ ಸಾರ್ವತ್ರಿಕ ಚುನಾವಣೆ ಬರುವ ವೇಳೆಗೆ ವಿಶಾಲ ಕರ್ನಾಟಕದ ಸ್ಥಾಪನೆಯಾಗಿತ್ತು. ಚಳುವಳಿಯ ಮುಂಚೂಣಿಯಲ್ಲಿದ್ದ ಅಜಾತಶತ್ರುವಾದ, ನಿಜಲಿಂಗಪ್ಪನವರು ಪ್ರಥಮ ಮುಖ್ಯಮಂತ್ರಿಯಾಗಿ ಗದ್ದುಗೆ ಏರಿದರು. ಒಲ್ಲದ ಮನಸ್ಸಿನಿಂದ ಏಕೀಕರಣಕ್ಕೆ ಒಪ್ಪಿದ್ದ ಮೈಸೂರು, ಮದ್ರಾಸ್, ಹೈದರಾಬಾದ್ ಸಂಸ್ಥಾನಗಳಿಂದ ಬಂದ ರಾಜಕಾರಣಿಗಳಲ್ಲಿ ಭಾವೈಕ್ಯ ಇರಲಿಲ್ಲ. ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣವೂ ಆಗಲಿಲ್ಲ.

ನವ ಮೈಸೂರು ಮತ್ತು ವಿಶಾಲ ಮೈಸೂರು ಎಂದು ಹೆಸರಾಯಿತು. ಸಾಹಿತಿಗಳು, ಕಲಾವಿದರು ಮತ್ತು ಸಮಾಜದ ಹಿರಿಯರು ಸಾಕಷ್ಟು ಪ್ರಯತ್ನ ಮಾಡಿದರೂ ಭಾವೈಕ್ಯ ಬರಲಿಲ್ಲ. ಹೀಗಾಗಿ ನಿಜಲಿಂಗಪ್ಪನವರು ತಮ್ಮ ಮೊದಲ ಸುತ್ತಿನ ಹದಿನೇಳು ತಿಂಗಳ ಮುಖ್ಯಮಂತ್ರಿ ಸ್ಥಾನದ ಕಾಲದಲ್ಲಿ ಹೆಚ್ಚಿನ ಶ್ರಮಪಡಬೇಕಾಯಿತು. ಆ ನಂತರವೂ ವಿಶಾಲ ಮೈಸೂರು ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಮುಂದುವರೆದ ಅವರು ೧೯೬೨ರಲ್ಲಿ ಮತ್ತು ಮುಖ್ಯಮಂತ್ರಿಯಾಗಿ ೧೯೬೮ರವರೆಗೆ, ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದರು.

೧೯೫೭ರಿಂದ ೧೯೬೮ರ ವರೆಗೆ ಕರ್ನಾಟಕದ ಅಭಿವೃದ್ಧಿಯ ದೃಷ್ಟಿಯಿಂದ ಒಂದು ಸಂಧಿಕಾಲ. ಎರಡನೆಯ ಪಂಚ ವಾರ್ಷಿಕ ಯೋಜನೆ ಪ್ರಾರಂಭವಾಗುವುದಿತ್ತು. ಫಲವಾಗಿ ಇಂದು ನಾಡಿನ ಹೆಮ್ಮೆಯ ಯೋಜನೆಗಳಾಗಿರುವ ಶರಾವತಿ, ತುಂಗಭದ್ರ, ಹಿಡಕಲ್, ಮಲಪ್ರಭಾ, ಕೃಷ್ಣ, ಹೇಮಾವತಿ, ಕಬಿನಿ, ಹಾರಂಗಿ ನದಿಗಳ ಅಣೆಕಟ್ಟು ಹಾಗೂ ಕಾಲುವೆಗಳು ಹಾಗೂ ಸರಕಾರಿ ಕ್ಷೇತ್ರದಲ್ಲಿ ನ್ಯೂ ಗೌರ್ನಮೆಂಟ್ ಫ್ಯಾಕ್ಟರಿ, ಭದ್ರಾವತಿ ಕಬ್ಬಿಣದ ಕಾರ್ಖಾನೆಗಳ ವಿಸ್ತರಣಾ ಯೋಜನೆಗಳು, ಸಕ್ಕರೆ ಕಾರ್ಖಾನೆಗಳು ಪ್ರಾರಂಭವಾದವು. ಇದರಿಂದ ಕೃಷಿ, ಸಹಕಾರ ಹಾಗೂ ಗ್ರಾಮೀಣ ಅಭಿವೃದ್ಧಿ ಯೋಜನೆಗಳು ತೀವ್ರಗತಿಯಿಂದ ಮುಂದುವರೆದವು. ಹೊಸದಾಗಿ ಅನೇಕ ವಿಶ್ವವಿದ್ಯಾಲಯಗಳು, ತಾಂತ್ರಿಕ ಮತ್ತು ವೈದ್ಯಕೀಯ ಕಾಲೇಜ್‌ಗಳು ಪ್ರಾರಂಭವಾದವು. ಜೊತೆಗೆ ರಸ್ತೆ ಹಾಗೂ ಬಂದರು ನಿರ್ಮಾಣ ಸಾರಿಗೆ, ಮೀನುಗಾರಿಕೆ, ತೋಟಗಾರಿಕೆ, ಪಶುಪಾಲನೆ ಮತ್ತು ಕೈ ಮಗ್ಗದ ಅಭಿವೃದ್ಧಿ ಕಾರ್ಯಗಳು ಪ್ರಾರಂಭವಾದವು. ಆಡಳಿತ ಅಭಿವೃದ್ಧಿಯ ಅಂಗವಾಗಿ ಅನೇಕ ರಾಜ್ಯಗಳಿಂದ ಬಂದ ಅನೇಕ ಸೇವಾ ನಿಯಮಗಳಿಗೆ ಒಳಗಾದ, ನೌಕರರ ಸೇವಾ ಸಂಸ್ಥೆಗಳು ನಿವಾರಣೆಯಾದವು. ಗ್ರಾಮೀಣ ಪ್ರದೇಶದ ಅಭಿವೃದ್ಧಿಯಂತೆ ನಗರಗಳ ಅಭಿವೃದ್ಧಿಗೆ ಹಲವಾರು ನಗರಾಭಿವೃದ್ಧಿ ಮಂಡಳಿಗಳು ಸ್ಥಾಪಿತವಾದವು.

ನೆಹರೂ ದಿನಗಳಲ್ಲಿ ಅವರ ನಂತರದ ಸ್ಥಾನದಲ್ಲಿ ವಲ್ಲಭಭಾಯಿ ಪಟೇಲರಿದ್ದರಂತೆ, ಶಾಸ್ತ್ರಿಜಿಯವರ ಸಂಪುಟದಲ್ಲಿ ಮುರಾರ್ಜಿ ದೇಸಾಯಿ ಇದ್ದರು. ವಿಶಾಲ ಮುಂಬಯಿ ಪ್ರಾಂತ್ಯವನ್ನು ಸಮರ್ಥವಾಗಿ ಆಳಿದ್ದ ಇವರು ಅಪ್ಪಟ ಗಾಂಧಿವಾದಿ, ಗಟ್ಟಿತನದ ವ್ಯಕ್ತಿ. ಮುಖ್ಯವಾಗಿ ಮುಂಬಯಿ, ಗುಜರಾತ್ ರಾಜ್ಯಗಳಲ್ಲಿ ಉದ್ಯೋಗಪತಿಗಳ ಮತ್ತು ವರ್ತಕರ ನಿಕಟವರ್ತಿಯಾಗಿದ್ದರು. ದೇಶವನ್ನು ಅಲಿಪ್ತ ಸ್ಥಾನದಿಂದ ಬಂಡವಾಳಶಾಹಿ ಬಣದತ್ತ ಒಯ್ಯಬಹುದೆಂದು ಹೆದರಿ ಇಂದಿರಾಗಾಂಧಿಯವರನ್ನು ಪ್ರಧಾನಿಗಳೆಂದು ಚುನಾಯಿಸಲಾಯಿತು. ಇದು ಹೇಗಾಯಿತು? ಹೀಗೆ ಆದರದ್ದು ಸರಿಯೆ? ಅಥವಾ ತಪ್ಪೇ? ಎಂಬುದು ಭಾರತದ ರಾಜಕೀಯ ಚರಿತ್ರೆಯಲ್ಲಿ ಇನ್ನೂ ಬಗೆ ಹರಿಯದ ವಿಚಾರವಾಗಿ ಉಳಿದಿದೆ. ಈ ವಿಚಾರ ನಿಜಲಿಂಗಪ್ಪನವರಿಗೆ ರಾಜಕೀಯವಾಗಿ ಕರ್ನಾಟಕದ ಸೀಮೋಲ್ಲಂಘನೆ ಮಾಡಿ ರಾಷ್ಟ್ರಮಟ್ಟದ ರಾಜಕೀಯಕ್ಕೆ ಪ್ರವೇಶಿಸುವಂತೆ ಮಾಡಿತು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಚುನಾಯಿತರಾದರು.

೧೯೭೭ರ ನಂತರ ನಿಜಲಿಂಗಪ್ಪನವರು ರಾಜಕೀಯ ಮತ್ತು ಪಕ್ಷಗಳ ಸಂಬಂಧಗಳನ್ನು ಕಳೆದುಕೊಂಡು ಸಂಪೂರ್ಣವಾಗಿ ರಾಷ್ಟ್ರ ನಿರ್ಮಾಣ ಕಾರ್ಯದತ್ತ ಗಮನ ಹರಿಸಿದ್ದರು. ಈ ವೈರಾಗ್ಯಕ್ಕೆ ಕಾರಣಗಳಿಲ್ಲದಿರಲಿಲ್ಲ. ಮೊದಲನೆಯದಾಗಿ ತುರ್ತು ಪರಿಸ್ಥಿತಿ ಮುಗಿದ ನಂತರ ಅಧಿಕಾರಕ್ಕೆ

ಬಂದ ಜನತಾವಳದಲ್ಲಿದ್ದ ನಾಯಕರ ಕ್ಷುಲ್ಲಕ ರಾಜಕಾರಣದಿಂದಾಗಿ ಅದು ಒಡೆದು ಹೋಳಾಗಿ ಹೋಗಿತ್ತು. ತುರ್ತು ಪರಿಸ್ಥಿತಿಯ ಅನಂತರ ಕೇಂದ್ರದಲ್ಲಿ ಇಂದಿರಾ ಕಾಂಗ್ರೆಸ್ ಪಕ್ಷ ಅಧಿಕಾರ ಕಳೆದುಕೊಂಡರೂ ಕರ್ನಾಟಕದಲ್ಲಿ ದೇವರಾಜ್ ಅರಸರ ನೇತೃತ್ವದಲ್ಲಿ ಅದು ಅಧಿಕಾರದಲ್ಲಿತ್ತು. ಅಷ್ಟೇ ಅಲ್ಲ, ಆರು ತಿಂಗಳ ನಂತರ ಅರಸು ಅವರು ಕರ್ನಾಟಕದ ಚಿಕ್ಕಮಗಳೂರು ಕ್ಷೇತ್ರದಿಂದ ಇಂದಿರಾ ಗಾಂಧಿಯವರನ್ನು ಮತ್ತೆ ಲೋಕಸಭೆಗೆ ಚುನಾಯಿಸಿ ಕಳುಹಿಸುವುದರ ಮೂಲಕ ಅವರ ರಾಜಕೀಯ ಜೀವನಕ್ಕೆ ಪುನರ್ಜನ್ಮ ನೀಡಿದ್ದರು.

ಅರಸರ ನಂತರದ ದಿನಗಳಲ್ಲಿ ರಾಜಕೀಯದಲ್ಲಿ ಪ್ರೌಢತೆ, ಆಡಳಿತದಲ್ಲಿ ಅನುಭವ ಇಲ್ಲದವರಿಂದ ರಾಜ್ಯದ ಪ್ರಗತಿ ಕುಂಠಿತವಾಯಿತು. ಇಂತಹ ಸ್ಥಿತಿಯಿಂದ ರಾಜ್ಯವನ್ನು ರಕ್ಷಿಸಲು ನಿಜಲಿಂಗಪ್ಪನವರು ಮತ್ತೆ ಸಕ್ರಿಯವಾಗಿ ರಾಜಕೀಯದಲ್ಲಿ ಪಾಲ್ಗೊಂಡು ಜನತಾಪಕ್ಷ ಎಂಬ ಹೊಸ ಪಕ್ಷ ಕಟ್ಟಿ, ಬೆಳಸಿ ಅಧಿಕಾರಕ್ಕೆ ತರಲು ಹೋರಾಡಿದರು. ತಾವು ನಿರೀಕ್ಷಿಸಿದ ಪ್ರಗತಿ, ಅಭಿವೃದ್ಧಿಗಳಾಗಲಿಲ್ಲವೆನ್ನುವ ಅತೃಪ್ತಿಯಿಂದ ಎಸ್ಸೆನ್ ೧೯೭೮ ರಿಂದ ಅವರು ಎಲ್ಲಾ ರಾಜಕೀಯ ಪಕ್ಷಗಳ ಸಂಬಂಧಗಳನ್ನು ಕಳೆದುಕೊಂಡು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಹೀಗೆ ಸಕ್ರಿಯ ರಾಜಕಾರಣದಿಂದ ನಿವೃತ್ತರಾದ ನಿಜಲಿಂಗಪ್ಪ ನವರನ್ನು ಸ್ವತಃ ಪ್ರಧಾನ ಮಂತ್ರಿಗಳಾದ ಮುರಾರ್ಜಿ ದೇಸಾಯಿ ಹಾಗೂ ಇನ್ನೂ ಅನೇಕ ನಾಯಕರು, ಗುಜರಾತ್ ರಾಜ್ಯದ ರಾಜ್ಯಪಾಲರಾಗಲು ಕೇಳಿಕೊಂಡರು. ಇದನ್ನೂ ಅವರು ನಿರಾಕರಿಸಿದರು.

ಸಕ್ರಿಯ ರಾಜಕೀಯದಿಂದ ಸ್ವತಃ ತಾವೇ ನಿವೃತ್ತರಾದ ನಿಜಲಿಂಗಪ್ಪನವರು ನಂತರ ಅನೇಕ ಸಂಘ-ಸಂಸ್ಥೆಗಳು ಕೂಡಿಕೊಂಡು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಆಗು ಹೋಗುಗಳ ಬಗ್ಗೆ, ಅನ್ಯಾಯಗಳ ಬಗ್ಗೆ, ಸಾರ್ವಜನಿಕ ಸ್ಥಾನದಲ್ಲಿರುವವರ ನಡಾವಳಿ, ಬಡವರ, ಅಸಹಾಯಕರ ಸಮಸ್ಯೆಗಳಿಗೆ ಸ್ಪಂದಿಸದ ಅಧಿಕಾರಿಗಳ ಬಗ್ಗೆ ಖಂಡಿಸಿದರು. ಪತ್ರಿಕಾ ಗೋಷ್ಠಿ ಕರೆದು ಯಾವ ಭಿಡೆಯೂ ಇಲ್ಲದೆ, ತಮ್ಮ ಅನಿಸಿಕೆ ತಿಳಿಸಿದರು. ತಮಗೆ ಅನ್ಯಾಯವಾಗಿದೆ ಎಂದು ಯಾರೇ ಬಂದರೂ, ಎಲ್ಲರಿಗೂ ಮಾರ್ಗದರ್ಶನ ನೀಡಿ, ಅನ್ಯಾಯದ ವಿರುದ್ಧ ಪ್ರತಿಭಟಿಸಿದರು. ಹೀಗಾಗಿ ಸಕ್ರಿಯ ರಾಜಕಾರಣಿ ಇರಲಿ, ನಿವೃತ್ತ ರಾಜಕಾರಣಿ ಇರಲಿ, ಸಾಹಿತಿ ಕಲಾಕಾರರಿರಲಿ, ಶಿಕ್ಷಣತಜ್ಞರಿರಲಿ, ಗುರು-ಮಠಾಧೀಶರರಿರಲಿ, ಶೈಕ್ಷಣಿಕ ಪ್ರವಾಸಕ್ಕೆ ಬಂದ ಶಾಲಾ ಕಾಲೇಜು ವಿದ್ಯಾರ್ಥಿಗಳಿರಲಿ, ರೈತರಿರಲಿ ಯಾರೇ ಚಿತ್ರದುರ್ಗಕ್ಕೆ ಬಂದರೂ ತೀರ್ಥಕ್ಷೇತ್ರಕ್ಕೆ ಬಂದಂತೆ ಎಲ್ಲರೂ ನಿಜಲಿಂಗಪ್ಪನವರ ಮನೆ 'ವಿನಯ'ಕ್ಕೆ ಒಂದು ಅವರಿಂದ ನಾಲ್ಕು ಸಾಂತ್ವನದ, ಬುದ್ಧಿಯ ಮಾತು ಅಥವಾ ನಿರ್ದೇಶನ ಪಡೆದು ಹೋಗುತ್ತಿದ್ದರು.

೯೮ ವರ್ಷಗಳವರೆಗೆ ಸಾರ್ಥಕ ಬದುಕು ಬಾಳಿದ ನಿಜಲಿಂಗಪ್ಪನವರು ಅದರಲ್ಲಿ ಸುಮಾರು ಅರವತ್ತು ವರ್ಷಗಳನ್ನು ಸಾರ್ವಜನಿಕ ಸೇವೆಗೆ ಕಳೆದರು. ಆದರೂ ಯಾರೊಬ್ಬರೂ ಯಾವೊಂದು ಆಪಾದನೆ ಮಾಡಿ ಅವರತ್ತ ಬೆರಳೆತ್ತಿ ತೋರಿಸುವ ಧೈರ್ಯಮಾಡಲಿಲ್ಲ. ಅವರು ಏನೇ ಅಧಿಕಾರ ಸ್ಥಾನದಲ್ಲಿದ್ದರೂ ಬಂಗಾರದ ಬಟ್ಟೆಯೊಳಗಿನಿಂದ ಬಂದರೂ ಬೆತ್ತಲಾಗಿ ಬರುವ ಸೂಜಿಯಂತೆ ಕೈ-ಮೈಗೆ ಏನನ್ನು ಹಚ್ಚಿಕೊಳ್ಳದೆ ಸ್ವಚ್ಛವಾಗಿ ಬಂದಿದ್ದರು. ಈ ನೈತಿಕ ಧೈರ್ಯದಿಂದಾಗಿ ಸದಾ

ಅವರು ನಾಲ್ಕು ಜನರ ಮಧ್ಯೆ ಇದ್ದು ಚಟುವಟಿಕೆಯುಕ್ತ ಜೀವನ ಮಾಡಿದರು. ಹೀಗಾಗಿ ವೃದ್ಧಾಪ್ಯ ಜೀವನದಲ್ಲಿ ಅವರಿಗೆ ಯಾವೊಂದು ವೈಯಕ್ತಿಕವಾದ ಕೊರಗೂ ಕಾಡಲಿಲ್ಲ.

ಈ ಕೆಲವು ಸಾರ್ವಜನಿಕ ವಿಚಾರಗಳಿಗಾಗಿ ಅವರಿಗೆ ಕೊರಗುಗಳಿದ್ದವು:

೧. ಭಾರತದಲ್ಲಿ ಬಡತನ, ಅಸಕ್ಷರತೆ, ಅನಾರೋಗ್ಯ, ನಿರುದ್ಯೋಗ ಶೋಷಣೆ, ಅತ್ಯಾಚಾರಗಳು ದೂರವಾಗದೆ ಉಳಿದದ್ದು.

೨. ರಾಜಕೀಯ ನಾಯಕರಲ್ಲಿ, ಸರಕಾರಿ ನೌಕರರಲ್ಲಿ, ಮಠ ಮಾನ್ಯಗಳಲ್ಲಿ ನ್ಯಾಯ, ನೀತಿ, ನಿಯತ್ತು, ಜನ ಸಾಮಾನ್ಯರ ಬಗ್ಗೆ ಕಳಕಳಿ ಇಲ್ಲದ್ದು.

೩.ದೇಶದಲ್ಲಿ ಮಕ್ಕಳಿಗೆ ಸೂಕ್ತ ಶಿಕ್ಷಣ, ಮನೋರಂಜನೆ ಆಟದ ಮೈದಾನ, ಉಡಲು, ಹೊದಿಯಲು ಬಟ್ಟೆ ಮತ್ತು ಔಷಧೋಪಚಾರ ಇಲ್ಲದಿರುವುದು.

೪. ವೃದ್ಧರಿಗೆ ಸೂಕ್ತ ಗೌರವ, ಕಾಲಕಳೆಯಲು ಉದ್ಯಾನವನ, ತಿರುಗಾಡಲು ಸುರಕ್ಷಿತವಾದ ರಸ್ತೆ ಹಾಗೂ ವೈದ್ಯಕೀಯ ಸವಲತ್ತು ಇಲ್ಲದೆ ಇರುವುದು.

೫. ಕರ್ನಾಟಕದ ಏಕೀಕರಣವಾಗಿ ದಶಕಗಳೇ ಕಳೆದಿದ್ದರೂ ಉತ್ತರ ಕರ್ನಾಟಕ ಜಿಲ್ಲೆಗಳು ಇನ್ನೂ ಹೆಚ್ಚಿನ ಅಭಿವೃದ್ಧಿ ಕಾಣದೆ ಉಳಿದಿರುವುದು.

ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಅವರಿಗೆ ಇದ್ದ ಕೊರಗೆಂದರೆ ಕನಸಾಗಿ ಉಳಿದ ಭದ್ರಾ ಮೇಲುದಂಡೆ ನೀರಾವರಿ ಯೋಜನೆ. ಇದರಿಂದ ಸದಾ ಬರಗಾಲದ ನೆರಳಿನಲ್ಲಿರುವ ಹೊಳಲ್ಕೆರೆ, ಹೊಸದುರ್ಗ, ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮುರು ತಾಲ್ಲೂಕಿನ ಜನರಿಗೆ ದನಕರುಗಳಿಗೆ ಕೊನೆಯ ಪಕ್ಷ ಕುಡಿಯುವ ನೀರಿನ ಬವಣೆಯಾದರೂ ತಪ್ಪುತ್ತದೆ ಎಂದು ಮರುಗುತ್ತಿದ್ದರು.



# ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪ

ಬಿ. ಗೀತಾ*

ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖರಲ್ಲೊಬ್ಬರಾದ ಎಸ್. ನಿಜಲಿಂಗಪ್ಪನವರು ನಿಷ್ಣಾತ ಆಡಳಿತಜ್ಞ, ನೀತಿ-ನಿಯತ್ತುಗಳ ವ್ಯಕ್ತಿ. ಆಧುನಿಕ ಕರ್ನಾಟಕದ ರೂವಾರಿಗಳಲ್ಲಿ ಎದ್ದು ಕಾಣುವ ಧುರೀಣ. ರಾಜಕೀಯ ಪರಿಶುದ್ಧವೆನಿಸಿಕೊಳ್ಳುವುದು ಬಹು ಕಠಿಣ. ಅಂತಹುದರಲ್ಲಿ ಪರಿಶುದ್ಧತೆಯನ್ನು ಸಾಧಿಸಿ ತನ್ನ ವಿರೋಧಿಗಳೂ ತಲೆದೂಗುವಂತೆ ಮಾಡಿದ ಈ ಧೀಮಂತ ವ್ಯಕ್ತಿ ಕರ್ನಾಟಕದ ಕಣ್ಮಣಿಗಳಲ್ಲಿ ಒಬ್ಬರಾಗಿದ್ದಾರೆ.

## ನಿಜಲಿಂಗಪ್ಪನವರ ಜೀವನ ಚರಿತ್ರೆ

ಅಂದು ಚಿತ್ರದುರ್ಗದ ಪ್ರಶಾಂತ ವಾತಾವರಣದಲ್ಲಿ ತೃಪ್ತಿಕರವಾದ ಜೀವನ ನಡೆಸುತ್ತಿದ್ದ ನಿಜಲಿಂಗಪ್ಪನವರದು ಕ್ರಿಯಾಶೀಲ ಬದುಕು ಅವರೇ ಹೇಳುವಂತೆ,

"ಕ್ರಿಯಾಶೀಲವಲ್ಲದ ಜೀವನ ಜಡವಾಗುತ್ತದೆ. ಕ್ರಿಯೆಯೇ ಬದುಕು. ಬದುಕೇ ಕ್ರಿಯೆ. ಕ್ರಿಯೆ ನಿಂತಾಗ ಸಾವು ಸನ್ನಿಹಿತ ವಾದಂತೆಯೇ" ಎಂದಿದ್ದಾರೆ. ನಿಜಲಿಂಗಪ್ಪನವರು ಉಜ್ವಲ ದೇಶಾಭಿಮಾನಿ. ಇಳಿವಯಸ್ಸಿನಲ್ಲೂ ಅವರು ದೇಶದ ಆಗು ಹೋಗುಗಳ ಚಿಂತನೆ ನಡೆಸುತ್ತಿದ್ದರು. ರಾಜಕೀಯ ಜೀವನದಲ್ಲಿ ಅವರಂತೆ ತ್ಯಾಗ ಮನೋಭಾವದಿಂದ ಕೆಲಸ ಮಾಡಿರುವವರು ಅಪರೂಪ. ಗಾಂಧೀಜಿಯವರು ಪ್ರತಿಪಾದಿಸಿದ ಸೇವಾ ಜೀವನದ ಬೆಲೆ ಏನೆಂದು ಅರ್ಥ ಮಾಡಿಕೊಂಡವರೂ ಹೌದು. ಅವರಿಗೆ ಗಾಂಧೀಜಿಯೇ ದೇವರು.

ನಿಜಲಿಂಗಪ್ಪನವರು ೧೯೦೨ ಡಿಸೆಂಬರ್ ೧೦ ರಂದು ಬಳ್ಳಾರಿ ಜಿಲ್ಲೆಯ

---

*ಪ್ರಥಮ ಬಿ. ಎ., ಶ್ರೀ ಮಾರುತಿ ಪ್ರಥಮ ದರ್ಜೆ ಕಾಲೇಜು, ಹೊಳಲೂರು, ಶಿವಮೊಗ್ಗೆ ಜಿಲ್ಲೆ

ಹರಪನಹಳ್ಳಿ ತಾಲ್ಲೂಕಿನ ಹಲುವಾಗಿಲು ಎಂಬ ಗ್ರಾಮದಲ್ಲಿ ಜನಿಸಿದರು. ತಂದೆ ಅಬಲೂರು ಅಡಿವೆಪ್ಪ, ಸಣ್ಣ ವರ್ತಕರು, ತಾಯಿ ನೀಲಮ್ಮ ಶಿವಭಕ್ತೆ. ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡ ನಿಜಲಿಂಗಪ್ಪನವರು ತಾಯಿಯ ಆರೈಕೆಯಲ್ಲಿ ಬೆಳೆದರು. ಆರ್ಥಿಕವಾಗಿ ಸಾಧಾರಣ ಕುಟುಂಬ ವಾದುದರಿಂದ ತಾಯಿ ಕೂಲಿ ಮಾಡಿ ಇವರ ಶಿಕ್ಷಣಕ್ಕೆ ನೆರವಾದ ಪ್ರಸಂಗವುಂಟು.

ಅನಂತರ ತನ್ನ ಸೋದರಿಯ ಕರೆಯ ಮೇರೆಗೆ ಸಿದ್ದವ್ವನ ಹಳ್ಳಿಗೆ ಹೋಗಿ ನೆಲೆಸಿದರು. ಹಾಗಾಗಿ ನಿಜಲಿಂಗಪ್ಪನವರು ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರೆಂದೇ ಪ್ರಚಾರಗೊಂಡರು. ದಾವಣಗೆರೆಯ ಅಂಗ್ಲೋವರ್ನಾಕ್ಯುಲರ್ ಶಾಲೆಯಲ್ಲಿ ಮಾಧ್ಯಮಿಕ ಶಾಲಾ ಶಿಕ್ಷಣ ಪಡೆದು ಕೊಂಡರು. ಚಿತ್ರದುರ್ಗದ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರಿಸಿದ ನಿಜಲಿಂಗಪ್ಪನವರಿಗೆ ರುದ್ರಪ್ಪನವರ ಮಿತ್ರರಿಂದ ನೆರವೂ ದೊರೆಯಿತು. ಪ್ರೌಢ ಶಿಕ್ಷಣವಾದ ಬಳಿಕ ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಸೇರಿದರು. ಗುಬ್ಬಿ ತೋಟದಪ್ಪನವರ ಛತ್ರದಲ್ಲಿ ವಾಸ್ತವ್ಯ ಹೂಡಿದರು, ಒಳ್ಳೆಯ ವಾಚನಾಭಿರುಚಿ ಬೆಳಸಿಕೊಂಡಿದ್ದ ನಿಜಲಿಂಗಪ್ಪನವರು ಓದಿನಲ್ಲಿ ಶ್ರದ್ಧಾಷಕ್ತಿಗಳನ್ನು ತೋರಿ ೧೯೨೪ರಲ್ಲಿ ಬಿ. ಎ. ಪದವಿಗಳಿಸಿದರು. ಕಾಲೇಜ್ ಓದುತ್ತಿರುವಾಗ ಅವರದು ಲವಲವಿಕೆಯ ಜೀವನ ಕ್ರೀಡೆ ಮತ್ತು ವ್ಯಾಯಾಮಗಳಲ್ಲಿ ಚರ್ಚೆ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ಕ್ರಿಕೆಟ್ ಮತ್ತು ಟೆನ್ನಿಸ್ ಆಟಗಳೆಂದರೆ ಬಲುಪ್ರಿಯ. ಕಲೆ, ಸಾಹಿತ್ಯಗಳಲ್ಲಿಯೂ ಒಲವು ತೋರಿದರು. ಕ್ರಿಕೆಟ್ ನೋಡುವುದರಲ್ಲಿ ತೀವ್ರ ಆಸಕ್ತಿ ಬೆಳಸಿಕೊಂಡಿದ್ದರು. ವಿದ್ಯಾಭ್ಯಾಸ ಕಾಲದಲ್ಲಿ ವಿಶೇಷವಾಗಿ ಅದರ ಮೇಲೆ ತಾಯಿ ನೀಲಮ್ಮ ಹಾಗೂ ಗುಡಿ ರುದ್ರಪ್ಪ ಮಾಸ್ಟರ ಅವರ ಪ್ರಭಾವವಿತ್ತು. ಬಿ. ಎ. ಆದ ಅನಂತರ ಪುಣೆಗೆ ಹೋಗಿ ಅಲ್ಲಿನ ಲಾ ಕಾಲೇಜ್‌ನಲ್ಲಿ ವ್ಯಾಸಂಗ ಮಾಡಿ 'ಲಾ' ಮಾಡಿಕೊಂಡರು. ಸಂಪ್ರದಾಯಬದ್ಧ ಶಿಕ್ಷಣದಿಂದಾಗಿ ಅವರ ವ್ಯಕ್ತಿತ್ವ ರೂಪು ಗೊಂಡಿತು. ಬಸವೇಶ್ವರರ ವಚನಗಳು, ಶಂಕರಾಚಾರ್ಯರ ದರ್ಶನ, ಗಾಂಧಿ ವಿಚಾರಗಳು ಅವರ ಮೇಲೆ ಅಗಾಧ ಪರಿಣಾಮ ಬೀರಿದವು. ಗಾಂಧಿಯವರನ್ನು ೧೯೨೪ ರಲ್ಲಿಯೇ ಬೆಳಗಾವಿಯಲ್ಲಿ ಜರುಗಿದ ಅಖಿಲಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ನೋಡಿ ಹರ್ಷಗೊಂಡರು.

ಜೀವನ ನಿರ್ವಹಣೆಗಾಗಿ ನಿಜಲಿಂಗಪ್ಪನವರು ವಕೀಲಿ ವೃತ್ತಿ ಹಿಡಿದು ತಮ್ಮ ವಾದ ಕೌಶಲ, ನಿಷ್ಠೆ ಸಹನೆ ಇವುಗಳಿಂದಾಗಿ ಯಶಸ್ವಿಯಾಗುತ್ತಾ ಬಂದರು. ೧೯೨೭ರಲ್ಲಿ ದಾವಣಗೆರೆಯ ಕೆಳಮಧ್ಯಮ ವರ್ಗ ಬೆಳ್ಳುಳ್ಳಿ ಮನೆತನದ ಮುರಿಗಮ್ಮನವರೊಡನೆ ಅವರ ಮದುವೆಯಾಯಿತು. ಚಿತ್ರದುರ್ಗದಲ್ಲಿ ನೆಲೆಸಿದರು, ಸಮರಸ ಸಂಸಾರ ಜೀವನ, ಒಳ್ಳೆವರಮಾನ. ಪುಸ್ತಕ ಓದುವ ಹವ್ಯಾಸ ಟೆನ್ನಿಸ್ ಆಟ ಇವೆಲ್ಲ ನಿಜಲಿಂಗಪ್ಪನವರನ್ನು ನೆಮ್ಮದಿಯಾಗಿರಿಸಿತ್ತು.

## ರಾಷ್ಟ್ರೀಯ ಆಂದೋಲನದಲ್ಲಿ ಪ್ರವೇಶ

೧೯೨೪ರ ಬೆಳಗಾವಿ ಕಾಂಗ್ರೆಸ್ ಅಧಿವೇಶನ ನ್ಯೂ ಇಂಡಿಯಾ ಪತ್ರಿಕೆ, ಮಾಳವೀಯರ ಭಾಷಣ, ಸ್ವಾಮಿ ಶ್ರದ್ಧಾನಂದರ ವ್ಯಕ್ತಿತ್ವ ನಿಜಲಿಂಗಪ್ಪನವರ ಮೇಲೆ ಹೆಚ್ಚಿನ ಪ್ರಭಾವ ಬೀರಿದಂತೆ ತೋರುತ್ತದೆ. ಆಗ ದೇಶದಲ್ಲಿ ಎಲ್ಲೆಲ್ಲೂ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ತಟ್ಟಿತ್ತು. ಗಾಂಧೀಜಿಯವರ ಕರೆಗೆ ಓಗೊಟ್ಟು ಕಾಲೇಜು ವಿದ್ಯಾರ್ಥಿಗಳು, ವೃತ್ತಿ ನಿರತರು ಅನೇಕರು ಸ್ವಾತಂತ್ರ್ಯ ಸಂಗ್ರಾಮಕ್ಕೆ

ಧುಮುಕಿದ್ದರು. ನಿಜಲಿಂಗಪ್ಪನವರು ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಯಂ ಸೇವಕರಾಗಿ ಕೆಲಸ ಮಾಡಿದರು. ಗಾಂಧಿ ತತ್ವಗಳಿಗೆ ಮಾರು ಹೋಗಿದ್ದರು. ಇದೀಗ ಗಾಂಧೀಜಿ ಕರ ಅವರನ್ನು ಸ್ವತಂತ್ರ್ಯ ಸಂಗ್ರಾಮದತ್ತ ಆಕರ್ಷಿಸಿತು. ಸಂಸಾರ ಹೊಣೆಯನ್ನು ಪತ್ನಿಯ ಮೇಲೆ ಹೊರಿಸಿ, ಒಂದೇ ಮನಸ್ಸಿನಿಂದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ಗಾಂಧೀಜಿಯವರು ನಡೆಸಿದ ಸತ್ಯಾಗ್ರಹಗಳಲ್ಲಿ ಪಾಲ್ಗೊಂಡರು. ಸೆರಮನೆವಾಸವನ್ನು ಅನುಭವಿಸಿದರು. ಕಾಂಗ್ರೆಸ್ ಸಂಸ್ಥೆಯಲ್ಲಿ ಅವರಿಗೆ ಒಲವುಂಟಾಗಿ ವಾರ್ಷಿಕ ಅಧಿವೇಶನಗಳಿಗೆ ಹೋಗಿ ಬರುತ್ತಿದ್ದರು.

೧೯೩೬ರ ವರ್ಷ ನಿಜಲಿಂಗಪ್ಪನವರು ರಾಜಕಾರಣದಲ್ಲಿ ಆಸಕ್ತಿ ತೋರಿದರು, ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಸ್ವಾತಂತ್ರ್ಯ ಹೋರಾಟ, ಜವಾಬ್ದಾರಿ ಸರ್ಕಾರ ಕುರಿತಾದ ಹೋರಾಟದಲ್ಲಿ ಸಕ್ರಿಯ ಪಾತ್ರ ವಹಿಸಿದರು. ಕರ್ನಾಟಕದಲ್ಲಿ ಪ್ರವಾಸ ಮಾಡಿ ಕನ್ನಡಿಗರಲ್ಲಿ ಜಾಗೃತಿ ಮೂಡಿಸಲು ಶ್ರಮಿಸಿದರು. ಇಂಗ್ಲೀಷ್ ಮತ್ತು ಕನ್ನಡ ಭಾಷೆ ಎರಡರಲ್ಲಿಯೂ ಸಮಾನ ವಾಗ್ಮಿತೆಯನ್ನು ಸಂಪಾದಿಸಿದ್ದ ಅವರಿಗೆ ಸಾರ್ವಜನಿಕರನ್ನು ಆಕರ್ಷಿಸುವುದು ಕಷ್ಟದ ಮಾತಾಗಿರಲಿಲ್ಲ. ಇಳಿವಯಸ್ಸಿನಲ್ಲಿಯೂ ಅವರ ಮಾತೆಂದರೆ ಜನ ಕಿವಿಗೊಟ್ಟು ಆಲಿಸುತ್ತಿದ್ದರು. ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಆಗಿನ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸನ್ನು ಜನಪ್ರಿಯಗೊಳಿಸಿದರು. ಗಾಂಧೀಜಿಯ ಸಂದೇಶವನ್ನು ಜನತೆಗೆ ಮುಟ್ಟಿಸಿದರು. ರಾಜಕೀಯ ವಿಮೋಚನೆ, ಸಮಾಜ ಸುಧಾರಣೆ, ಸಾಂಸ್ಕೃತಿಕ ಹಾಗೂ ರಾಜಕೀಯ ಕರ್ನಾಟಕ ಏಕೀಕರಣ, ಗ್ರಾಮೀಣ ಅರ್ಥವ್ಯವಸ್ಥೆಯ ಪುನರುದ್ಧಾರ, ಸ್ತ್ರೀ-ಪುರುಷ ಸಮಾನತೆ ಹಾಗೂ ವಿಧವಾ ವಿವಾಹ ಪ್ರತಿಪಾದನೆ-ಇವು, ಅವರನ್ನಾವರಿಸಿದ ವಿಚಾರಗಳು. ಪರಂಪರಾಗತವಾದ ಭಾವನೆಗಳೊಂದಿಗೆ ಆಧುನಿಕ ಪ್ರಗತಿಪರ ದೃಷ್ಟಿ ಸಮನ್ವಯಗೊಳಿಸಲು ಶ್ರಮಿಸಿದರು. 'ಅರಣ್ಯ ಸತ್ಯಾಗ್ರಹ' ನಿಮಿತ್ತ ಮೈಸೂರು ಸರ್ಕಾರದ ಒಂದೂವರೆ ವರ್ಷಗಳ ಕಾಲದ ಕಾರಾಗೃಹ ಅನುಭವಿಸಿದರು. ವಕೀಲ ವೃತ್ತಿಯನ್ನು ಹಿಂದಕ್ಕೆ ಪಡೆದರೂ ಸಹ ೧೯೪೨ರಲ್ಲೂ ದೇಶಾದ್ಯಂತ ನಡೆದ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದಾಗ ಇವರನ್ನು ಸ್ಥಾನಭದ್ರತೆಯಲ್ಲಿಡಲಾಗಿತ್ತು.

೧೯೪೫-೪೬ರಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದ ಬಳಿಕ ನಿಜಲಿಂಗಪ್ಪನವರ ಕಾರ್ಯಕ್ಷೇತ್ರ ವಿಸ್ತಾರವಾಯಿತು. ಕಾಲೇಜಿನ ದಿನಗಳಲ್ಲಿ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಪ್ರಭಾವ ಬೀರಿದುದರಿಂದಾಗಿ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ ಇತಿಹಾಸಗಳ ಬಗ್ಗೆ ಅಭಿಮಾನ ಮೂಡಿಸಿ ಕೊಂಡಿದ್ದರು. ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಕನ್ನಡದ ಪ್ರದೇಶಗಳಲ್ಲಿ ಓಡಾಡಿ ಈ ಎಲ್ಲಾ ಪ್ರದೇಶಗಳಲ್ಲಿ ಹಂಚಿ ಹೋಗಿದ್ದ ಕರ್ನಾಟಕ ಏಕೀಕರಣವಾಗದೆ ರಾಜ್ಯದ ಏಳಿಗೆ ಸಾಧ್ಯವಾಗದೆಂಬ ಪ್ರಾಮಾಣಿಕ ಹಂಬಲದಿಂದ ಅವರು ೧೯೪೭ರಲ್ಲಿ ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯ ಘೋಷಿಸಿದ ಮೇಲೆ ಕರ್ನಾಟಕ ಏಕೀಕರಣ ಸಮಸ್ಯೆ ನಿಜಲಿಂಗಪ್ಪನವರಂಥ ರಾಜಕೀಯ ಧುರೀಣರಿಗೆ ಸವಾಲಾಗಿ ನಿಂತಿತು. ಕನ್ನಡ ಭೂಪ್ರದೇಶಗಳ ಚರಿತ್ರೆಯನ್ನು ಅವಲೋಕಿಸಿದಾಗ, ಕದಂಬ, ಗಂಗ, ರಾಷ್ಟ್ರಕೂಟರು, ಬಾದಾಮಿ ಚಾಳುಕ್ಯರು, ಕಲ್ಯಾಣಚಾಲುಕ್ಯರು, ಸೇವುಣರು. ಹೊಯ್ಸಳರು ವಿಜಯನಗರದ ಅರಸರು, ಬಹಮನಿ ಸುಲ್ತಾನರು ಹೈದರಾಲಿ ಮತ್ತು ಟಿಪ್ಪುಸುಲ್ತಾನ, ಮೈಸೂರಿನ ಅರಸರು ಮುಂತಾದ ಮನೆತನಗಳು ಆಳ್ವಿಕೆಯ ಜೊತೆಗೆ, ಸಾಂಸ್ಕೃತಿಕ

ಹಿನ್ನೆಲೆ ಹಾಗೂ ಅನನ್ಯತೆಗಳನ್ನು ಒದಗಿಸಿ ಕೊಟ್ಟಿದ್ದವು ಎಂಬುವುದು ಕಂಡುಬರುತ್ತದೆ. ರಾಜಕೀಯವಾಗಿ, ಆರ್ಥಿಕವಾಗಿ ಈ ಹೊತ್ತಿನ ಕರ್ನಾಟಕ ವಿರುವಂತೆ ಹಿಂದೆ ಅಖಂಡ ಕರ್ನಾಟಕವೆಂಬುದು ಇರಲಿಲ್ಲ. ಅದು ಅಲ್ಲದೆ ಭಾರತದಲ್ಲಿ ತಳವೂರಿ ಆಳ್ವಿಕೆ ನಡೆಸಿದ ಬ್ರಿಟಿಷರು ಇಲ್ಲಿನ ಜನರನ್ನು ನಿಯಂತ್ರಿಸಿ ತಮಗೆ ಬೇಕಾದ ಹಾಗೆ ಬಳಸಿಕೊಂಡಿದ್ದರು. ಒಂದೇ ಭಾಷೆ ಮಾತನಾಡುವ ಜನರೇ ಬೇರೆ ಬೇರೆ ಕಡೆ ಹಂಚಿಹೋಗಿದ್ದರು. ಈ ಎಲ್ಲಾ ಕನ್ನಡ ಜನ ಒಂದಾಗಬೇಕು. ಎಂಬ ಹಂಬಲ ಉಂಟಾದ್ದಲ್ಲದೆ ಭಾಷಾವಾರು ಪ್ರಾಂತ್ಯ ನಿರ್ಮಾಣವಾಗಬೇಕೆಂದು ಹಲವರು ಆಶಿಸಿದರು. ಇದನ್ನು ಎಷ್ಟೋ ರಾಜ ಮಹಾರಾಜರುಗಳೇ ತಮ್ಮ ಸ್ಥಾನಮಾನಗಳು ಹೋದಾವೆಂದು ಭಾಷಾವಾರು ಪ್ರಾಂತ್ಯಗಳ ನಿರ್ಮಾಣ ಕುರಿತ ಆಂದೋಲನಕ್ಕೆ ವಿಘ್ನಗಳನ್ನು ತಂದರು. ನೆಹರೂರವರು ಒಮ್ಮೆ ನಿಜಲಿಂಗಪ್ಪನವರ ಭುಜ ಅಲುಗಿಸುತ್ತ "ಈ ಏಕೀಕರಣದ ವ್ಯವಹಾರವನ್ನು ಬಿಡಬಾರದೇಕೆ?" ಎಂದು ಕೇಳಿದಾಗ "ಪಂಡಿತ್ ಜಿ ಜನರಿಗೆ ಬೇಕಾದುದನ್ನು ನಾನು ಬಿಟ್ಟು ಕೊಡಲಾರೆ" ಎಂದು ನಿಷ್ಠುರವಾಗಿ ಹೇಳಿದ್ದ ತತ್ವನಿಷ್ಠೆ ವ್ಯಕ್ತಿ ನಿಜಲಿಂಗಪ್ಪನವರು. ಅವರದ್ದು ಸ್ಥಿರ ಸಂಕಲ್ಪ, ಕರ್ನಾಟಕದ ಏಕೀಕರಣವೇ ಮಂತ್ರ! ಸರ್ದಾರ ವಲ್ಲಭಾಯಿ ಪಟೇಲರು ನಿಜಲಿಂಗಪ್ಪನವರ ಆತ್ಮಾಭಿಮಾನ ಕಂಡು ಬೆರಗಾಗಿ ಹೋದರಷ್ಟೆ! ಪ್ರಧಾನಿ ನೆಹರು ಸಹ ಭಾಷೆಗಳ ಮೇಲೆ ರಾಜ್ಯ ವಿಂಗಡನೆ ಮಾಡಬೇಕೆಂಬ ನಿಲುವನ್ನು ಒಪ್ಪಲೇ ಬೇಕಾಯಿತು.

೧೯೪೭೦ರಲ್ಲಿ ನಿಜಲಿಂಗಪ್ಪ ಸಂವಿಧಾನದ ಸಮಿತಿಯ ಸದಸ್ಯರಾಗಿದ್ದರು.

ಏಕೀಕರಣದ ಒತ್ತಡದ ಬಗ್ಗೆ ಕೇಂದ್ರದಲ್ಲಿ ಪ್ರಸ್ತಾಪಿಸಲು ೧೯೪೮ ಜನವರಿಯಲ್ಲಿ ಒಂದು ಶಿಷ್ಟ ಮಂಡಳಿಯನ್ನು ರೂಪಿಸಲಾಗಿ, ಅವರು ಅದರ ನೇತೃತ್ವ ವಹಿಸಿದರು. ಆಗ ಆಂಧ್ರ ಕೇರಳ ಮಹಾರಾಷ್ಟ್ರದವರು ಸಹ ಕೇಂದ್ರದಲ್ಲಿ ಒತ್ತಡ ತಂದಿದ್ದರು. ರಾಜಕೀಯ ಧುರೀಣರು ಅಲ್ಲದೆ ಏಕೀಕರಣಕ್ಕಾಗಿ ಕನ್ನಡ ಸಾಹಿತಿ ಕವಿಗಳು ಶ್ರಮಿಸಿದರು. ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಕೆಂಗಲ್ ಹನುಮಂತಯ್ಯನವರು ಏಕೀಕರಣವಾಗಲೇಬೇಕೆಂದು ತುಡಿಯುತ್ತಿದ್ದರು.

೧೯೫೩ರಲ್ಲಿ ನೇಮಕಗೊಂಡ ರಾಜ್ಯಪುನರ್ ಆಯೋಗವು ಎಸ್. ನಿಜಲಿಂಗಪ್ಪ ಹಾಗೂ ಕಾಮರಾಜನಾಡಾರ್ ಮುಂತಾದ ದಕ್ಷಿಣದ ನಾಯಕರ ನಿಲುವನ್ನು, ಅವರು ತಂದ ಒತ್ತಡದಿಂದಾಗಿ ಆಯೋಗವು ವಸ್ತು ಸ್ಥಿತಿಯನ್ನು ಲಕ್ಷ್ಯಕ್ಕೆ ತೆಗೆದುಕೊಂಡಿತು. ೧೯೫೦ರ ಆಗಸ್ಟ್ ತಿಂಗಳಲ್ಲಿ ಭಾಷಾವಾರು ಪ್ರಾಂತ್ಯ ಮಸೂದೆ ಪಾರ್ಲಿಮೆಂಟ್ ಅನುಮೋದನೆ ಪಡೆಯಿತು. ನಿಜಲಿಂಗಪ್ಪ ತಮ್ಮ ಪ್ರಾಮಾಣಿಕ ಪ್ರಯತ್ನದಲ್ಲಿ ಯಶಸ್ಸು ಸಂಪಾದಿಸಿದರು. ಮೈಸೂರು ಪ್ರಾಂತ್ಯ ಕಾಂಗ್ರೆಸ್ ಅಧ್ಯಕ್ಷರಾಗಿ ಉತ್ತರ ಮತ್ತು ದಕ್ಷಿಣ ಕರ್ನಾಟಕಗಳ ನಡುವೆ ಸ್ನೇಹ ಸೇತುವೆಯಂತಿದ್ದ ಕನ್ನಡಿಗರ ಗೌರವಕ್ಕೆ ಪಾತ್ರರಾದರು. ಇವರ ಪರಿಶ್ರಮದ ಫಲವೇ ಇಂದಿನ ಕರ್ನಾಟಕ ಆ ಹಿನ್ನೆಲೆಯಲ್ಲಿ ಇವರನ್ನು "ಕರ್ನಾಟಕದ ರೂವಾರಿ" ಎಂದು ದೇ. ಜವರೇಗೌಡರು ಕರೆದಿದ್ದಾರೆ.

ಕರ್ನಾಟಕ ಏಕೀಕರಣವಾದ ನಂತರ ಎಸ್. ನಿಜಲಿಂಗಪ್ಪನವರು, ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ೧೯೫೬ರ ನವೆಂಬರ್ ೧ ರಂದು ಹೊಸ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಅಂದು ಭಾರತದ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್‌ರವರು ರಾಜ್ಯ ರಚನೆಯ ಬಗ್ಗೆ ಅಧಿಕೃತವಾಗಿ ಘೋಷಿಸಿದರು. ಆ ಸಮಾರಂಭದಲ್ಲಿ ಎಸ್. ನಿಜಲಿಂಗಪ್ಪ

ಮತ್ತು ರಾಜ್ಯಪಾಲ ಜಯಚಾಮರಾಜ ಒಡೆಯರು ಉಪಸ್ಥಿತರಿದ್ದರು. ಛಿದ್ರವಾಗಿದ್ದ ಕನ್ನಡ ಆಡಳಿತ ಘಟಕಗಳು ಮತ್ತು ಕನ್ನಡಿಗರು ಒಂದೇ ಆಡಳಿತಕ್ಕೆ ಒಳಪಟ್ಟರು. ಕನ್ನಡ ನಾಡನ್ನು 'ಮೈಸೂರು' ರಾಜ್ಯವೆಂದು ಕರೆಯಲಾಯಿತು.

ರಾಜ್ಯದ ಮುಂದೆ ಗಂಭೀರವಾದ ಸಮಸ್ಯೆಗಳು ತಲೆದೋರಿದವು, ಮೊದಲು ಅವುಗಳನ್ನು ನಿವಾರಿಸಲು ಶ್ರಮಿಸಬೇಕು ಎಂದು ಕರೆಯಿತ್ತರು. ನಿರುದ್ಯೋಗ ಸಮಸ್ಯೆ, ವಿದ್ಯುಚ್ಛಕ್ತಿ ಕೊರತೆ, ದಾರಿದ್ರ್ಯ, ಕೃಷಿಕ್ಷೇತ್ರದಲ್ಲಿ ಹಿನ್ನಡೆ. ನೀರಾವರಿ ಸಮಸ್ಯೆ, ಶಿಕ್ಷಣ ಸೌಲಭ್ಯಗಳ ಕೊರತೆ, ಇವೆಲ್ಲ ಎದುರಿಗೆ ಇದ್ದವು, ಅಸ್ಪೃಶ್ಯತೆ ಜಾತೀಯತೆ ಈ ದೇಶದಿಂದ ತೊಲಗುವವರೆಗೆ ದೇಶಕ್ಕೆ ಶಾಂತಿಯಿಲ್ಲ, ಭದ್ರತೆಯೂ ಇಲ್ಲ ಎಂಬುವುದು ಎಸ್ಸೆನ್‌ರವರ, ಸ್ಪಷ್ಟ ನಿಲುವು. ಅಸ್ಪೃಶ್ಯತೆ ಹೋದರೆ ಜಾತೀಯತೆ ತಾನಾಗಿಯೇ ತೊರಟು ಹೋಗುತ್ತದೆ. ಎಂದು ಹೇಳಿದ್ದರು.

೧೯೫೬ರ ನವೆಂಬರ್‌ನಲ್ಲಿ ರಾಜ್ಯದ ಮುಖ್ಯಮಂತ್ರಿಗಳಾಗಿ ೧೯೫೮ರ ಏಪ್ರಿಲ್‌ವರೆಗೆ ಹೊಣೆ ಹೊತ್ತಿದ್ದರು. ೧೯೫೭ರ ಮಾರ್ಚ್‌ನಲ್ಲಿ ಚುನಾವಣೆಗಳು ನಡೆದು ನಿಜಲಿಂಗಪ್ಪನವರು, ಮುಖ್ಯ ಮಂತ್ರಿಗಳಾಗಿ ಆರಿಸಿ ಬಂದರು. ೧೯೫೮ರಲ್ಲಿ ಸಹಕಾರಿ ಕೃಷಿ ಪದ್ಧತಿಯ ಅಧ್ಯಯನ ತಂಡದ ಮುಖ್ಯಸ್ಥರಾಗಿ ಕೆಲಸ ಮಾಡಿದರು. ಭಾರತೀಯ ತೈಲ ನಿಗಮದ ಗೌರವ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಮುಖ್ಯಮಂತ್ರಿಗಳಾಗಿದ್ದಾಗ ಭಿನ್ನಮತ ಏರ್ಪಟ್ಟು, ಸಭೆಯಲ್ಲಿ ಬಹುಮತ ಕಳೆದುಕೊಂಡರೆಂಬ ನಿರ್ಣಯಕ್ಕಾಗಿ ನಿಜಲಿಂಗಪ್ಪ ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ಸಲ್ಲಿಸಿದರು.

೧೯೬೧ರಲ್ಲಿ ಕಾಂಗ್ರೆಸ್ ಪಾರ್ಲಿಮೆಂಟ್ ಬೋರ್ಡ್‌ನ ಸದಸ್ಯರಾಗಿದ್ದ ನಿಜಲಿಂಗಪ್ಪನವರು ಪುನಃ ೧೯೬೨ರಲ್ಲಿ ರಾಜ್ಯದ ಮುಖ್ಯ ಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ೧೯೬೨ರ ಮಾರ್ಚಿ ೯ರಿಂದ ಜುಲೈ ೨೦ ರವರೆಗೆ ಮುಖ್ಯಮಂತ್ರಿಗಳಾಗಿದ್ದ ಎಸ್. ಆರ್. ಕಂಠಿಯವರು ಅಧಿಕಾರ ಬಿಟ್ಟು ಕೊಟ್ಟಾಗ ಆಸ್ಥಾನವನ್ನು ನಿಜಲಿಂಗಪ್ಪನವರು ಅಲಂಕರಿಸಿ "ಕಂಠಿಯವರು ಭರತನಂತೆ" ಎಂದು ಹೇಳಿದರು. ೧೯೬೭ರಲ್ಲಿ ಚುನಾವಣೆಗಳಾದಾಗ ಮತ್ತೆ ನಿಜಲಿಂಗಪ್ಪ ನವರನ್ನೇ ಮುಖ್ಯಮಂತ್ರಿಗಳನ್ನಾಗಿ ಮಾಡಲಾಯಿತು.

ಅಖಂಡ ಕರ್ನಾಟಕದ ಪ್ರಪ್ರಥಮ ಮುಖ್ಯಮಂತ್ರಿಗಳಾಗಿ ಪ್ರಸಿದ್ಧರಾಗಿದ್ದ ನಿಜಲಿಂಗಪ್ಪನವರು, ತಮ್ಮ ಅಧಿಕಾರವಧಿಯಲ್ಲಿ ರಾಜ್ಯದ ಹಿತದೃಷ್ಟಿಯಿಂದ ಅನೇಕ ಅಭಿವೃದ್ಧಿ ಕಾರ್ಯಗಳನ್ನು ರೂಪಿಸಿ ನೆರವೇರಿಸಿದರು. ಆಗ ರಾಜ್ಯದ ಮುಂದೆ ಹಲವಾರು ಆರ್ಥಿಕ ಸಮಸ್ಯೆಗಳು ಇದ್ದವು. ಸ್ವಾತಂತ್ರ್ಯ ಬಂದು ೧೦-೧೫ ವರ್ಷಗಳಾಗಿದ್ದುದಷ್ಟೆ. ದೇಶದಲ್ಲಿ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ ಕೈಗಾರಿಕೆಗಳ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಲಾಯಿತು. ಆಗ ನಿಜಲಿಂಗಪ್ಪನವರು ಕೃಷಿಕ್ಷೇತ್ರಕ್ಕೆ ಹೆಚ್ಚು ಹಣವನ್ನು ಬಳಸಿ ಸಂಪತ್ತು ರೂಢಿಸಿ ನಿರುದ್ಯೋಗ ನಿವಾರಣೆ ಮಾಡಬೇಕು ಎಂಬ ಅಭಿಪ್ರಾಯವನ್ನು ಪ್ರಧಾನಿ ನೆಹರೂರವರ ಮುಂದಿಟ್ಟರು. ನೆಹರೂ ಅವರು ಭಾರತ ಕೈಗಾರಿಕೆ ಮತ್ತು ತಂತ್ರಜ್ಞಾನಗಳಲ್ಲಿ ಅಭಿವೃದ್ಧಿ ಕಂಡು ವಿಶ್ವದ ಪ್ರಬಲರಾಷ್ಟ್ರಗಳೊಡನೆ ಸರಿಸಾಟಿಯಾಗಿ ನಿಲ್ಲುವಂತಾಗಬೇಕು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.

ಭಾರತ ಹೇಳಿ ಕೇಳಿ ಹಳ್ಳಿಗಳ ದೇಶ. ಇಲ್ಲಿ ಕೃಷಿಯನ್ನು ಅವಲಂಬಿಸಿದವರೆ ಹೆಚ್ಚು.

ಗಾಂಧೀಯವರ ಅನುಯಾಯಿಯಾಗಿ ಎಸ್ಸೆನ್, ರೈತರ ಮನೆಯತನಕ ನೀರು ಹರಿಸುವಲ್ಲಿ ಕೃಷಿಉತ್ಪಾದನೆ ಹೆಚ್ಚಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು. ಹಾಗೆಂದು ಕೈಗಾರಿಕೆಗಳನ್ನು ಅಲಕ್ಷಿಸಲಿಲ್ಲ, ಇದಕ್ಕೆ ಅಗತ್ಯವಾದ ಉತ್ಪಾದನೆಗೆ ಪ್ರೋತ್ಸಾಹ ನೀಡಿದರು.

ಕರ್ನಾಟಕದ ಭಾರೀ ನದಿ ಯೋಜನೆಗಳು ಅವರ ಅಧಿಕಾರದ ಅವಧಿಯಲ್ಲಿ ರೂಪು ಗೊಂಡಿತು, ಕೃಷ್ಣಾ ಕಾವೇರಿ ಪಾತ್ರಗಳ ಪೂರ್ಣ ಪ್ರಯೋಜನ ಪಡೆಯಲು ಅವರು ಪ್ರಯತ್ನ ನಡೆಸಿದರು. ಶರಾವತಿ ಜಲವಿದ್ಯುತ್ ಯೋಜನೆಯ ಕಾಮಗಾರಿ ಗಳಿಗೆ ಅನುವು ಮಾಡಿಕೊಟ್ಟರು. ಶರಾವತಿ ಜಲವಿದ್ಯುದಾಗಾರ ಯೋಜನೆ ನಾಡಿನ ಹೆಮ್ಮೆಯ ಯೋಜನೆ, ಇಂದು ಶರಾವತಿ ವಿದ್ಯುತ್ ಉತ್ಪಾದನೆ ಕೇಂದ್ರ ಒಂದೇ ವರ್ಷಕ್ಕೆ ೫೦೦೦ ದ.ಲ. ಯೂನಿಟ್‌ಗಳಷ್ಟು ವಿದ್ಯುತ್ ಉತ್ಪಾದಿಸುತ್ತಿದೆ. ಈ ವಿದ್ಯುತ್ ಆಗಾರದ ಮೊದಲ ಘಟಕವನ್ನು ೧೯೬೫ರಲ್ಲಿ ಪ್ರಧಾನಿ ಲಾಲ್ ಬಹದ್ದೂರ ಶಾಸ್ತ್ರಿಯವರು ದೇಶಕ್ಕೆ ಅರ್ಪಿಸಿದರು. ಇಂದು ಈ ವಿದ್ಯುದಾಗಾರದಲ್ಲಿ ೧೦ ಘಟಕಗಳು ಕೆಲಸ ಮಾಡುತ್ತಿವೆ. ಇದಕ್ಕೆ ನೀರು ಒದಗಿಸುವ ಲಿಂಗನಮಕ್ಕಿ ಅಣೆಕಟ್ಟಿನ ಬುಡದಲ್ಲಿ ೩ ವಿದ್ಯುತ್ ಘಟಕಗಳಿವೆ. ಈ ಯೋಜನೆಯನ್ನು ಪೂರೈಸುವಲ್ಲಿ ಶ್ರಮಿಸಿದ ಕೀರ್ತಿ ನಿಜಲಿಂಗಪ್ಪನವರದಾಗಿದೆ.

ನಿಜಲಿಂಗಪ್ಪನವರು ಕೃಷಿ ನೀರಾವರಿ ವಿದ್ಯುತ್ ಉತ್ಪಾದನೆಗಳಿಗೆ ಮಹತ್ವ ನೀಡಿದಂತೆ ಅರಣ್ಯಾಭಿವೃದ್ಧಿ ಹಾಗೂ ಅರಣ್ಯಗಳ ಸಂರಕ್ಷಣೆಗೂ ಗಮನಹರಿಸಿದರು. ಅವುಗಳ ಪ್ರಯೋಜನ ವ್ಯಾಪಕವಾದುದು, ಮುಖ್ಯವಾಗಿ ನಿಸರ್ಗದ ಸಮತೋಲನ ಹಾಗೂ ವಾತಾವರಣ ಶುದ್ಧಿಗೆ ಅರಣ್ಯಗಳ ಅಗತ್ಯವಿದೆ, ಆದ್ದರಿಂದ ಅರಣ್ಯಾಧಾರಿತ ಉದ್ದಿಮೆಗಳು ಹಲವು ಹತ್ತು. ಅರಣ್ಯಗಳನ್ನು ಬೆಳೆಸುವುದರಲ್ಲಿ ಸರ್ಕಾರದೊಂದಿಗೆ ಸಹಕರಿಸಲು ಗ್ರಾಮಂತರ ಪ್ರದೇಶಗಳು, ಶಾಲೆಗಳು ಕುಟುಂಬಗಳನ್ನು ಕೋರಿದರು.

ಸಾಕ್ಷರತೆ ಹೆಚ್ಚಬೇಕು ಎಂಬುದನ್ನು ನಿಜಲಿಂಗಪ್ಪನವರು ಮೊದಲನಿಂದಲೂ ಹೇಳುತ್ತಾ ಬಂದಿದ್ದರು. ಜನರು ಅಕ್ಷರಸ್ಥರಾಗ ಬೇಕು ಇದಕ್ಕೆ ಸೂಕ್ತವಾದ ಶಿಕ್ಷಣ ದೊರೆಯಬೇಕು ಎಂದು ಅವರು ಶಿಕ್ಷಣಾಭಿವೃದ್ಧಿಗೆ ಗಮನಹರಿಸಿದರು. ಅವರ ಅಧಿಕಾರಾವಧಿಯಲ್ಲಿ ಬೆಂಗಳೂರು ಮತ್ತು ಹೆಬ್ಬಾಳದ ಕೃಷಿ ವಿಶ್ವವಿದ್ಯಾನಿಲಯಗಳು ಸ್ಥಾಪನೆಗೊಂಡವು. ಸಾಹಿತಿ ಕಲಾವಿದರಿಗೆ ಮಾಸಾಶನ ನೀಡುವ ಒಂದು ಸಂಪ್ರದಾಯವನ್ನು ಪ್ರಾರಂಭಿಸಿ ಅವರ ಭದ್ರತೆಗೆ ನೆರವಾದರು.

ಭೂಸುಧಾರಣೆಯ ಮೂಲಕ ಭೂ ಹೀನರಿಗೆ ಭೂಮಿ ಒದಗಿಸುವ ಒಂದು ಯೋಜನೆಯನ್ನು ಅವರು ಕಲ್ಪಿಸಿ ಕಾರ್ಯಗತ ಗೊಳಿಸಿದರು. ರಾಜಕೀಯ ಸಂತ್ರಸ್ತರಿಗೆ ಹಾಗೂ ನಿರ್ಗತಿಕ ರಾದವರಿಗೆ ಪೆನ್‌ಶನ್ ಸೌಲಭ್ಯವನ್ನು ಸಹ ಕಲ್ಪಿಸಿಕೊಟ್ಟುದು ಭಾರತ ಇತಿಹಾಸದಲ್ಲಿ ಮೊದಲು ಎನ್ನಬೇಕು. ಇವರ ಅಧಿಕಾರವಧಿಯಲ್ಲಿ ಅಂದರೆ ೧೯೬೪ರಲ್ಲಿ ಮಹಾಕವಿ ಕುವೆಂಪು ರವರಿಗೆ ರಾಷ್ಟ್ರಕವಿ ಸ್ಥಾನಮಾನ ಲಭಿಸಿತು. ಅಸ್ಪೃಶ್ಯತೆಯನ್ನು ಹೋಗಲಾಡಿಸುವಲ್ಲಿ ನಿಜಲಿಂಗಪ್ಪ ರೂಪಿಸಿದ ಯೋಜನೆ ಮನನೀಯ. ನಿವೇಶನಗಳನ್ನು ಹಂಚುವಾಗ ಇಲ್ಲವೆ ರೂಪಿಸುವಾಗ ಸವರ್ಣೀಯರ ಮನೆಗಳ ಸನಿಹದಲ್ಲಿಯೇ ಅಸ್ಪೃಶ್ಯರ ಮನೆಗಳು ಬರುವಂತೆ ವ್ಯವಸ್ಥೆ ಮಾಡಬೇಕೆಂದು ಒಂದು ಆಜ್ಞೆಯನ್ನು ಹೊರಡಿಸಿದರು. ಇದರಿಂದ ಭೇದಭಾವ ತೊಲಗಿದಂತಾಗುತ್ತದೆ ಎಂಬುವುದು ಅವರ

ಅಭಿಪ್ರಾಯವಾಗಿತ್ತು. ತಾವು ಮುಖ್ಯಮಂತ್ರಿಗಳಾಗಿದ್ದಾಗ ಜನಕಲ್ಯಾಣವನ್ನು ಬಯಸಿದರು. ಮೈಸೂರು ಬೆಂಗಳೂರು ಮೊದಲಿನಿಂದಲೂ ಪ್ರಗತಿ ಕಂಡಿವೆ. ಉತ್ತರದ ಭಾಗಗಳು ಪ್ರಗತಿ ಕಾಣಬೇಕೆಂದು ಬಯಸಿದರು.

೧೯೬೮ರಲ್ಲಿ ನಿಜಲಿಂಗಪ್ಪನವರು ಮುಖ್ಯಮಂತ್ರಿ ಪದವಿ ತ್ಯಜಿಸಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷ ಸ್ಥಾನ ಅಲಂಕರಿಸಿದರು. ೧೯೬೭ರ ಮಹಾಚುನಾವಣೆಯಲ್ಲಿ ಕಾಂಗ್ರೆಸ್ ಪುನಶ್ಚೇತನಕ್ಕಾಗಿ ಶ್ರಮಿಸಿದರು. ಎಸ್ಸೆನ್ ಮುಖ್ಯಮಂತ್ರಿ ಪದವಿಯನ್ನು ಬಿಟ್ಟದ್ದು ಅವರ ಹಿತೈಷಿಗಳಿಗೆ ಇಷ್ಟವಾಗಲಿಲ್ಲ. ಇಂದಿರಾ ಗಾಂಧಿಯವರು ಪ್ರಧಾನಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ತಮ್ಮ ಪಾಲಿನ ಕರ್ತವ್ಯ ನಿರ್ವಹಿಸುತ್ತಾ ಬಂದರು. ಭ್ರಷ್ಟಾಚಾರವನ್ನು ಬೆಂಬಲಿಸುವ ಜಾಯಮಾನ ಅವರದಲ್ಲ. ಮೊದಲಿನಿಂದಲೂ ಕೈಗಾರಿಕೋದ್ಯಮಗಳನ್ನು ಅವು ರಾಷ್ಟ್ರದ ಬೊಕ್ಕಸವನ್ನು ಬರಿದು ಮಾಡಬಹುದೆಂದು ತಿಳಿದ ನಿಜಲಿಂಗಪ್ಪನವರು ಅವನ್ನು ಸರ್ಕಾರಕ್ಕೆ ಲಾಭ ತರುವ ಬಗೆಯಲ್ಲಿ ಕೆಲವು ನಿಬಂಧನಗಳಿಂದಲೂ ಖಾಸಗಿ ಕ್ಷೇತ್ರಕ್ಕೆ ವಹಿಸ ಬೇಕೆಂದು ಸಲಹೆ ಮಾಡಿದರು. ಅದು ಪ್ರಧಾನಿ ಒಪ್ಪದ ವಿಷಯವಾಯಿತು. ಈ ನಡುವೆ ಇಂದಿರಾಗಾಂಧಿಯವರು ರಾಜಧನರದ್ದು, ಬ್ಯಾಂಕ್ ರಾಷ್ಟ್ರೀಕರಣ, ಭೂಸುಧಾರಣೆ ಕಾರ್ಯಕ್ರಮ ಗಳನ್ನು ಅನುಷ್ಠಾನಕ್ಕೆ ತಂದರು. ಎಸ್ಸೆನ್‌ರವರು ರಾಷ್ಟ್ರಪತಿ ಸ್ಥಾನಕ್ಕೆ ಬರಬಹುದಾದಂತಹ ಸನ್ನಿವೇಶ ಮುಂದೆ ನಿರ್ಮಾಣವಾದರೂ ಬೇಡ ಎನ್ನುವಂತೆ ತ್ಯಾಗ ಬುದ್ಧಿ ತೋರಿದರು. ಭ್ರಷ್ಟ ರಾಜಕೀಯ ಹಿಡಿಸದಂತಾಯಿತು. ರಾಷ್ಟ್ರಪತಿ ಸ್ಥಾನಕ್ಕೆ ಸ್ಪರ್ಧಿಸಿದ ಕಾಂಗ್ರೆಸ್ ಅಭ್ಯರ್ಥಿ ನೀಲಂ ಸಂಜೀವರೆಡ್ಡಿ ಸೋತರು. ಇಂದಿರಾಗಾಂಧಿಯವರ ಬೆಂಬಲದಿಂದ ಸ್ವತಂತ್ರ ಅಭ್ಯರ್ಥಿ ವಿ. ವಿ. ಗಿರಿಯವರು ಜಯಗಳಿಸಿದರು. ಪ್ರಧಾನಿ ಮತ್ತು ಕಾಂಗ್ರೆಸ್ ಅಧ್ಯಕ್ಷ ಇವರಿರ್ವರಲ್ಲಿ ಹೊಂದಾಣಿಕೆ ಉಂಟಾಗದೆ ಎಸ್ಸೆನ್ ತಾವು ನಂಬಿಕೊಂಡು ಬಂದ ತತ್ತ್ವಕ್ಕೆ ನಿಷ್ಠರಾಗಿ ಉಳಿದರು. ಇಂತಹ ಪರಿಸ್ಥಿತಿಯಲ್ಲಿ ಕಾಂಗ್ರೆಸ್, ಆಡಳಿತ ಕಾಂಗ್ರೆಸ್ ಮತ್ತು ಸಂಸ್ಥಾಕಾಂಗ್ರೆಸ್ ಎಂದು ಇಬ್ಭಾಗವಾಯಿತು. ಅಪ್ಪಟ ಗಾಂಧಿವಾದಿಗಳಾದ ಎಸ್ಸೆನ್ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷರಾಗಿ ಮುಂದುವರಿದರು.

೧೯೭೫ರ ಜೂನ್ ೨೬ರಂದು ದೇಶಾದ್ಯಂತ ತುರ್ತು ಪರಿಸ್ಥಿತಿ ಜಾರಿಗೆ ಬಂದಾಗ ಜಯಪ್ರಕಾಶ್ ನಾರಾಯಣರಂಥ ಹಿರಿಯ ರಾಷ್ಟ್ರನಾಯಕರ ಕರೆಗೆ ಓಗೊಟ್ಟು ಕಾಂಗೈ ವಿರೋಧಿ ಗಳೆಲ್ಲ ಹೊಸ ಪಕ್ಷ ಕಟ್ಟಿದರು. ಇದನ್ನೇ ಜನತಾಪಕ್ಷ ಎಂದು ಕರೆಯಲಾಯಿತು (೧೯೭೭) ಚುನಾವಣೆಯಲ್ಲಿ ಭಾರೀ ಗೆಲವು ಕಂಡು ಅಧಿಕಾರಕ್ಕೂ ಬಂದು ಮೊರಾರ್ಜಿ ದೇಸಾಯಿ ಯವರು ಪ್ರಧಾನಿಗಳಾದರು. ರಾಷ್ಟ್ರಪತಿಸ್ಥಾನ ಖಾಲಿಯಾದಾಗ ತಾವೇ ಪ್ರಧಾನಿಯವರನ್ನು ಭೇಟಿ ಮಾಡಿ ನೀಲಂ ಸಂಜೀವರೆಡ್ಡಿಯವರಿಗೆ ರಾಷ್ಟ್ರಪತಿ ಸ್ಥಾನ ಕೊಡಬಹುದಾಗಿದೆ ಎಂದು ಸಲಹೆ ಮಾಡಿದರು. ತಮಗೆ ಆ ಸ್ಥಾನ ದೊರೆಯುವಂತಿದ್ದರೂ ತನಗೆ ಆ ಯಾವ ಅಧಿಕಾರವೂ ಬೇಡ, ಸಾಮಾನ್ಯ ಸೇವಕನಾಗಿದ್ದುಕೊಂಡು ದೇಶಸೇವೆ ಮಾಡುವೆನೆಂದು ಬಿಟ್ಟರು.'

೧೯೭೯ರಲ್ಲಿ ಲೋಕಸಭಾ ಚುನಾವಣೆ ನಡೆದಾಗ ಎಸ್ಸೆನ್‌ರವರು ಆ ತಮ್ಮ ಇಳಿಯ ವಯಸ್ಸಿನಲ್ಲಿ ಆರೋಗ್ಯ ಲೆಕ್ಕಿಸದೆ ಜನತಾ ಪಕ್ಷದ ಪರವಾಗಿ ಕರ್ನಾಟಕದಲ್ಲಿ ಹಾಗೂ ಹೊರಗೆ ಪ್ರಚಾರ ಕೈಗೊಂಡರು. ಆದರೆ ಮತ್ತೆ ಜನತಾ ಪಕ್ಷ ಅಧಿಕಾರಕ್ಕೆ ಬಂದದ್ದು ೧೯೮೩ರಲ್ಲಿ.

ಎಸ್ಸೆನ್ ಸರಳಜೀವಿಗಳು, ಜನರೊಂದಿಗೆ ಮಾತನಾಡುವುದೆಂದರೆ ಅವರಿಗೆ ಪ್ರಿಯ, ಸಭೆ ಸಮಾರಂಭಗಳಿಗೆ ತೊಂಬತ್ತರ ಪ್ರಾಯದಲ್ಲೂ, ಕರೆದರೆ ಹೋಗಿ ಬರುವಂಥ ಪರಿಪಾಠ ಬೆಳಸಿಕೊಂಡಿದ್ದರು. ಅವರಿಗೆ ಏನಾದರೊಂದು ಕೆಲಸ ಮಾಡುತ್ತಿರುವ ಹಂಬಲ. ಪತ್ರಿಕೆಗಳನ್ನು, ಪುಸ್ತಕಗಳನ್ನು ಓದುವುದು ಒಂದು ದಿನವೂ ತಪ್ಪಿಸುತ್ತಿದ್ದಿಲ್ಲ!

ತಮ್ಮನ್ನರಿಸಿ ಬಂದ ರಾಜಕಾರಣಿಗಳಿಗೆ ಹಿತವಚನಗಳನ್ನು ನೀಡಲು ಮರೆಯುವುದಿಲ್ಲ. ಹಣ ಅಧಿಕಾರಿಗಳಿಗೆ ಅವರು ಜೋತುಬೀಳಲಿಲ್ಲ.

ಎಸ್ಸೆನ್ ದೊಡ್ಡ ಕೈಗಾರಿಕೆಗಳನ್ನು ಎಂದೂ ವಿರೋಧಿಸಲಿಲ್ಲ. ಗುಡಿ ಕೈಗಾರಿಕೆಗಳು ಬೆಳೆಯಬೇಕು ಎಂದ ಅವರ ದೇಶಾಭಿಮಾನ ಉಜ್ಜ್ವಲವಾದುದು. ಎಸ್ಸೆನ್ ಬರಿಯ ಪುಸ್ತಕಪ್ರಿಯರಾಗಿರದೆ ಸಾಹಿತ್ಯ ಕಲೆಗಳ ಒಲವನ್ನು ಬೆಳೆಸಿಕೊಂಡು ಕಥೆ, ಕಾದಂಬರಿಗಳನ್ನು ವಿಮರ್ಶಿಸಬಲ್ಲವರೂ ಆಗಿದ್ದರು. ಜೀವನವನ್ನು ಪ್ರೀತಿಸಿರುವ ಎಸ್ಸೆನ್ ಕರ್ನಾಟಕ ಕಂಡಿರುವ ಒಬ್ಬ ಆದರ್ಶ ಮುಖ್ಯಮಂತ್ರಿ. ಕನ್ನಡ ಭಾಷೆ ಸಂಸ್ಕೃತಿಗಳ ಸಮಗ್ರ ಅಭ್ಯುದಯನವನ್ನು ಕರ್ನಾಟಕ ಏಕೀಕರಣದ ಮೂಲಕ ಸಾಧಿಸಿದ ಸಮನ್ವಯಕಾರರು. ೧೯೬೮ರಲ್ಲಿಯೇ ಕರ್ನಾಟಕ ವಿಶ್ವವಿದ್ಯಾಲಯವು ಎಸ್ಸೆನ್ ಅವರಿಗೆ ಗೌರವ ಡಿಲಿಟ್ ಪ್ರಶಸ್ತಿ ನೀಡಿ ಗೌರವಿಸಿದೆ. ಹಂಪೆ ವಿಶ್ವವಿದ್ಯಾನಿಲಯವು ನಾಡೋಜ ಪ್ರಶಸ್ತಿ ನೀಡಿ ಗೌರವಿಸಿತು.

ಎಸ್. ನಿಜಲಿಂಗಪ್ಪನವರು ಅಧಿಕಾರದ ಅವಧಿಯಲ್ಲಿ ಜನತೆಗೆ ಅನುಕೂಲವಾಗುವಂಥ, ಕೆಲಸಗಳನ್ನು ಎತ್ತಿಕೊಂಡು ಎಲ್ಲಾ ಕೆಲಸಗಳನ್ನು ಸಾಧಿಸಿದರು. ಮುಖ್ಯವಾಗಿ ರೈತರಿಗೆ ಪ್ರೋತ್ಸಾಹ ನೀಡಿದರು. ಎಸ್. ನಿಜಲಿಂಗಪ್ಪನವರು ಕರ್ನಾಟಕದ ಹಾಗೂ ಭಾರತದ ಅಭಿವೃದ್ಧಿಗಾಗಿ ಅವಿರತ ಶ್ರಮಿಸಿದ್ದಾರೆ. ಅವರ ಸೇವೆ ಕನ್ನಡಿಗರ ಮನದಲ್ಲಿ ಅಚ್ಚಳಿಯದೆ ಉಳಿಯುವಂತಹುದಾಗಿದೆ.



# ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರು

ಎಚ್. ಎಂ. ಸಾವಿತ್ರಮ್ಮ*

ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖ ರಲ್ಲೊಬ್ಬರಾದ ಎಸ್. ನಿಜಲಿಂಗಪ್ಪನವರು ನಿಷ್ಣಾತ ಆಡಳಿತಜ್ಞ, ನೀತಿ-ನಿಯತ್ತುಗಳಿಗೆ ಹೆಸರಾದ ಶುದ್ಧ ವ್ಯಕ್ತಿ ಆಧುನಿಕ ಕರ್ನಾಟಕದ ರೂವಾರಿಗಳಲ್ಲಿ ಎದ್ದು ಕಾಣುವ ಧುರೀಣ. ರಾಜಕೀಯದಲ್ಲಿ ಪರಿಶುದ್ಧ ವೆನಿಸಿಕೊಳ್ಳುವುದು. ಬಹು ಕಠಿಣ. ಅಂತಹುದರಲ್ಲಿ ಪರಿಶುದ್ಧತೆಯನ್ನು ಸಾಧಿಸಿ ತನ್ನ ವಿರೋಧಿಗಳೂ ತಲೆದೂಗುವಂತೆ ಮಾಡಿದ ಈ ಧೀಮಂತ ವ್ಯಕ್ತಿ ಕರ್ನಾಟಕದ ಕಣ್ಮಣಿಗಳಲ್ಲಿ ಒಬ್ಬರಾಗಿದ್ದಾರೆ.

ಸಿದ್ದವನಹಳ್ಳಿ ನಿಜಲಿಂಗಪ್ಪನವರು ಟೇಬಲ್ ಮೇಲೆ ಮೂರ್ನಾಲ್ಕು ಪುಸ್ತಕ ಹರಡಿಕೊಂಡಿದ್ದರಂತೆ. ಸಂದರ್ಶಕನೊಬ್ಬ 'ಇಷ್ಟೊಂದು ಒಂದೇದಿನ ಓತ್ತಿರಾ?' ಎಂದಾಗ ಉತ್ತರಿಸಿದ್ದು "ಬೇಸರ ತಂದರೆ ಮತ್ತೊಂದು ಓದುವುದು".

ಅಂದರೆ ಸಮಯದ ಮೌಲ್ಯ, ಸತತ ಪರಿಶ್ರಮ, ಹೋರಾಟಗಳ ಮೂಲಕ ಉತ್ತುಂಗಕ್ಕೇರಿದ ಎಸ್ಸೆನ್ ಅವರ ಜೀವನ ಸಾಗಿದ್ದು ಹೀಗೆ.

**ಬಾಲ್ಯ ಜೀವನ** : ಎಸ್. ನಿಜಲಿಂಗಪ್ಪನವರು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕು ಹಲುವಾಗಿಲು ಗ್ರಾಮದಲ್ಲಿ ೧೯೦೨ರಲ್ಲಿ ಜನಿಸಿದರು. ಅಬಲೂರು ಆಡಿವೆಪ್ಪ ಮತ್ತು ನೀಲಮ್ಮನವರು ಇವರ ತಂದೆ ತಾಯಂದಿರು. ತಮ್ಮ ಆರನೇ ವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡರು. ಆಗ ತಾಯಿ ನೀಲಮ್ಮ ಕೂಲಿ ಮಾಡಿ ಮಕ್ಕಳನ್ನು ಸಾಕಿದರು. ಅನಂತರ ತನ್ನ ಸಹೋದರಿಯ ಕರೆಯ ಮೇರೆಗೆ ಚಿತ್ರದುರ್ಗ ಜಿಲ್ಲೆಯ ಸಿದ್ದವ್ವನಹಳ್ಳಿಗೆ ಹೋಗಿ ನೆಲಸಿದರು. ಹಾಗಾಗಿ

---

*ದ್ವಿತೀಯ ಬಿ.ಎಸ್ಸಿ., ಧ.ರಾ.ಮ. ವಿಜ್ಞಾನ ಕಾಲೇಜು, ದಾವಣಗೆರೆ

ನಿಜಲಿಂಗಪ್ಪನವರು ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರೆಂದೇ ಪ್ರಚಾರಗೊಂಡರು. ದಾವಣಗೆರೆಯ ಬೆಳ್ಳೊಳ್ಳಿ ಮನೆತನದ ಮುರಿಗಮ್ಮ ಅವರನ್ನು ವಿವಾಹವಾಗಿ ಹಾಲಿನಂತಹ ಸಂಸಾರ ನಡೆಸುತ್ತಿದ್ದರು.

ದಾವಣಗೆರೆಯ ಉದ್ಯಮಿ ರುದ್ರಪ್ಪನವರ ಆಶ್ರಯದಲ್ಲಿ ಆರಂಭಿಕ ಶಿಕ್ಷಣ. ಚಿತ್ರದುರ್ಗ, ಬೆಂಗಳೂರು, ಪುಣೆಯಲ್ಲಿ ವಿದ್ಯಾಭ್ಯಾಸ ಮುಂದುವರಿಸಿ, ಪುಣೆಯಲ್ಲಿ ಕಾನೂನು ಪದವೀಧರರಾಗಿ ಮರಳಿ ಚಿತ್ರದುರ್ಗದಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ಎಂದಿಗೂ ಕಕ್ಷಿದಾರರನ್ನು ಪೀಡಿಸದೆ ನ್ಯಾಯವಾಗಿದ್ದ ಪ್ರಕರಣಕ್ಕೆ ಮಾತ್ರ ವಕಾಲತ್ತು ವಹಿಸುತ್ತಿದ್ದರು. ಬೆಳಗಾವಿಯಲ್ಲಿ ಗಾಂಧೀಜಿಯ ಭಾಷಣದಿಂದ ಪ್ರೇರಿತರಾಗಿ ಸ್ವಾತಂತ್ರ ಹೋರಾಟಕ್ಕೆ ಧುಮುಕಿದರು. ನಂತರ ಸಂಘಟನೆಗಾಗಿ ರಾಷ್ಟ್ರಮಟ್ಟ ದಲ್ಲಿ ಸಂಚರಿಸಿದರು. ಸಂಸಾರದ ನೊಗ ಪತ್ನಿಯ ಮೇಲೆ ಹೊರಿಸಿದರು.

೧೯೨೪ರಲ್ಲಿ ಬೆಳಗಾವಿ ಕಾಂಗ್ರೆಸ್ ಅಧಿವೇಶನ. 'ನ್ಯೂ ಇಂಡಿಯಾ ಪತ್ರಿಕೆ' ಮಾಳವೀಯರ ಭಾಷಣ, ಸ್ವಾಮಿ ಶ್ರದ್ಧಾನಂದರ ವ್ಯಕ್ತಿತ್ವ ನಿಜಲಿಂಗಪ್ಪನವರ ಮೇಲೆ ಹೆಚ್ಚಿನ ಪ್ರಭಾವ ಬೀರಿದಂತೆ ತೋರುತ್ತದೆ. ರಾಷ್ಟ್ರೀಯ ಆಂದೋಲನದ ಚಟುವಟಿಕೆಗಳನ್ನು ಬೆಂಗಳೂರಿನಲ್ಲಿ ವೀಕ್ಷಿಸಿ ಅದರಿಂದ ಹೆಚ್ಚು ಆಕರ್ಷಿತರಾದರು. ಅಂಕೋಲ, ಸಿದ್ದಾಪುರಗಳಲ್ಲಿ ನಡೆದ ಚಳುವಳಿಗೆ ನೆರವಾಗಲು ಕೈಲಾದಷ್ಟು ಹಣ ಸಂಗ್ರಹಿಸಿ ಕಳುಹಿಸಿದ್ದರು. ೧೯೩೬ರಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಸ್ಥಾಪನೆಯಾಗಿ ನಿಜಲಿಂಗಪ್ಪ ಅಧ್ಯಕ್ಷರಾಗಿಯೂ ವಾಸುದೇವರಾವ್ ಕಾರ್ಯದರ್ಶಿಯಾಗಿಯೂ ಆರಿಸಿ ಬಂದರು. ಕೆ. ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ ತನ್ನ ಚಟುವಟಿಕೆಗಳನ್ನು ತೀವ್ರಗೊಳಿಸಿತು. ಅದರಲ್ಲಿ ಸಂಪೂರ್ಣ ತಮ್ಮನ್ನೇ ತೊಡಗಿಸಿಕೊಂಡ ನಿಜಲಿಂಗಪ್ಪ ಹಲವು ಬಾರಿ ಬಂಧಿತರಾಗಿ ಸೆರೆಮನೆಗೆ ತಳ್ಳಲ್ಪಟ್ಟರು. ಸತ್ಯಾಗ್ರಹ ಮಾಡಿ ದಂಡ ಕೂಡಾ ತೆತ್ತರು.

ಎಂಥ ಕಠಿಣ ಸಂದರ್ಭದಲ್ಲೂ ಎದೆಗುಂದದೆ ನಗುತ್ತಲೆ ಸಮಸ್ಯೆ ನಿಭಾಯಿಸುವ ಛಾತಿ ಅವರಲ್ಲಿತ್ತು. ಭಾಷೆಯ ಸಮಸ್ಯೆಯನ್ನು ವ್ಯವಸ್ಥಿತ, ವೈಜ್ಞಾನಿಕ, ವೈಚಾರಿಕ ಹಾಗೂ ಸಾಂಸ್ಕೃತಿಕವಾಗಿ ಯೋಚಿಸಿದರು. ರಾಷ್ಟ್ರದ ಭಾವೈಕತೆಗೆ ಹಿಂದಿ ಭಾಷೆ ಅನಿವಾರ್ಯ ಎಂಬ ಸೆಳೆತ ಅವರಲ್ಲಿತ್ತು. ೧೯೪೭ರಲ್ಲಿ ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಲು ದೆಹಲಿಯಿಂದ ಕೊಡಗಿನ ಮಾರ್ಗವಾಗಿ ಧಾವಿಸುತ್ತಿದ್ದ ಇವರನ್ನು ಬಂಧಿಸಿ ಇಪ್ಪತ್ತು ದಿನ ಸೆರೆಮನೆಯಲ್ಲಿಡಲಾಗಿತ್ತು. ಸೆರೆಮನೆಗೆ ಹೋಗಿ ಬಂದಷ್ಟೂ ಇವರು ಅಪ್ಪಟ ದೇಶಾಭಿಮಾನಿಯಾಗ ತೊಡಗಿದರು. ಕನ್ನಡ ನಾಡು ನುಡಿಗಾಗಿ ಕೂಡಾ ಅವಿರತ ಶ್ರಮಿಸಿದರು. ಇವರ ಪರಿಶ್ರಮದ ಫಲವೇ ಇಂದಿನ ಕರ್ನಾಟಕ. ಆ ಹಿನ್ನೆಲೆಯಲ್ಲಿ ಇವರನ್ನು 'ಕರ್ನಾಟಕದ ರೂವಾರಿ' ಎಂದು ದೇ.ಜ.ಗೌ. ಬಣ್ಣಿಸಿದ್ದಾರೆ.

ನೆಹರು ಅವರನ್ನು ಭೇಟಿ ಮಾಡಿದಾಗಲೆಲ್ಲ ಎಸ್ಸೆನ್ ಬೃಹತ್ ಕೈಗಾರಿಕೆ ಮಿತಗೊಳಿಸಿ, ಕೃಷಿಗೆ ಒತ್ತು ಕೊಡಿ ಎಂದು ಒತ್ತಾಯಿಸುತ್ತಲೇ ಬಂದರು. ವ್ಯವಸಾಯ ಕ್ಷೇತ್ರದಲ್ಲಿ ಜಲ ಸಂಗ್ರಹಣೆ ಹಾಗೂ ವಿತರಣೆ ಮುಖ್ಯವಾಗಿದ್ದು, ಕೆರೆಕಟ್ಟೆ ಅಭಿವೃದ್ಧಿಗೊಳಿಸಿದರೆ ದೇಶದ ನೀರಾವರಿ ವ್ಯವಸ್ಥೆ ಅಭಿವೃದ್ಧಿ ಪಡಿಸಬಹುದು. ರೈತರ ಮನೆತನಕ ನೀರು ಹರಿಸದಿದ್ದರೆ, ಸರಕಾರವಿದ್ದೂ ಇಲ್ಲದಂತೆ ಎಂಬುದು ಅವರ ನಿಲುವಾಗಿತ್ತು.

ನೀರಾವರಿ ಹೆಚ್ಚಿದರೆ ಗ್ರಾಮೀಣರಿಗೆ ಉದ್ಯೋಗ ಕೊಟ್ಟಂತೆ ಎಂಬುದು ಅವರ ಧ್ಯೇಯ.

ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಅಣೆಕಟ್ಟು ನಿರ್ಮಿಸಿ ವಿದ್ಯುತ್ ಸ್ಥಾವರ ಸ್ಥಾಪಿಸಬೇಕು ಎಂಬುದು ಅವರ ಹೆಬ್ಬಯಕೆ. ವಿಶ್ವವಿದ್ಯಾನಿಲಯಗಳು ಇಟ್ಟಿಗೆ ಕಾರ್ಖಾನೆಗಳಂತಾಗಬಾರದು. ಸ್ವಾತಂತ್ರ್ಯದ ಸತ್ವ ರಕ್ಷಿಸಿಕೊಳ್ಳಬೇಕು. ಎಂದು ಸೂಚ್ಯವಾಗಿ ಹೇಳುತ್ತಿದ್ದರು.

ಸಾಹಿತಿ ಕಲಾವಿದರಿಗೆ ಮಾಸಾಶನ ಮಂಜೂರು ಮಾಡಿದ ಕೀರ್ತಿ ಇವರದು. ಕಾಮರಾಜ್, ಅತುಲ್ಯ ಘೋಷ್, ಎಸ್. ಕೆ. ಪಾಟೀಲ್, ಸಂಜೀವ ರೆಡ್ಡಿ, ಚವ್ಹಾಣರು ಎಸ್ಸೆನ್‌ರ ರಾಷ್ಟ್ರಮಟ್ಟದ ಜೀವದ ಗೆಳೆಯರು.

ಎಸ್ಸೆನ್ ಎಂದೂ ಸಮಯ ಸಾಧಕರಾಗಿ ಕೆಲಸ ಮಾಡಿಲ್ಲ. ಅವರ ಅವಧಿಯಲ್ಲಿ ಕಾಂಗ್ರೆಸ್ ವಿಭಜನೆ ಅವರ ಮನಸ್ಸನ್ನು ವಿಕ್ಷಿಪ್ತಗೊಳಿಸಿತ್ತು. ಈ ಸಂದರ್ಭದಲ್ಲಿ ಎಸ್ಸೆನ್ ಬೆಂಬಲಿಗರು ಒಂದಷ್ಟು ಜನ ಅಡ್ಡಗೋಡೆ ಮೇಲೆ ನಿಂತರು. ಆದರೂ ಅಂಜದೆ ಇಂದಿರಾಗಾಂಧಿಯವರ ವರ್ತನೆಯನ್ನು ಕಡೆತನಕ ಖಂಡಿಸಿದವರು ಎಸ್ಸೆನ್.

೧೯೭೧ರಲ್ಲಿ ಅಧಿಕಾರ ಪಡೆದ ಸಾದಿಕ್ ಅಲಿ, ಅಶೋಕ ಮೆಹ್ತಾ ಅವರು ಎಸ್ಸೆನ್ ಅವರ ಸಲಹೆಯಂತೆ ನಡೆಯುತ್ತಿದ್ದರು. ತುರ್ತು ಪರಿಸ್ಥಿತಿ ಘೋಷಿಸಿದಾಗ ಜೆ. ಪಿ. ನಾಯಕತ್ವದಲ್ಲಿ ಇಂದಿರಾ ವಿರೋಧಿ ನಾಯಕರು ಒಂದಾದರು. ಜನತಾ ಪಕ್ಷ ಅಧ್ಯಕ್ಷರನ್ನು ಚುನಾಯಿಸುವ ಕಾಲಕ್ಕೆ ಜಗಜೀವನರಾಂ ಕಡೆ ವಾಲಿದರು. ಕಾರಣ ದಲಿತನೊಬ್ಬ ಪ್ರಧಾನಿಯಾಗುವ ಆಸೆಯನ್ನು ಗಾಂಧೀಜಿ ಕಂಡಿದ್ದರು ಎಂಬ ಕಾರಣಕ್ಕೆ.

೧೯೭೭ರಲ್ಲಿ ಲೋಕಸಭೆ ಚುನಾವಣೆಯಲ್ಲಿ ಜನತಾಪಕ್ಷದ ಪರ ಪ್ರಚಾರ ಕೈಗೊಂಡರು. ಮೂರು ಬಾರಿ ವಿಧಾನಸಭೆಗೆ ಆಯ್ಕೆಯಾಗಿದ್ದ ಎಸ್ಸೆನ್ ಯಶಸ್ವಿ ಮುಖ್ಯಮಂತ್ರಿಯಾಗಿದ್ದರು. ಎಸ್ಸೆನ್‌ರನ್ನು ರಾಷ್ಟ್ರಪತಿ ಮಾಡುವದಕ್ಕೆ ಎರಡು ಬಾರಿ ಕೇಂದ್ರ ನಾಯಕರು ಪ್ರಯತ್ನಿಸಿದ್ದರೂ ಅದನ್ನು ತಿರಸ್ಕರಿಸಿದ್ದರು. ರಾಜಕೀಯ ಧುರೀಣ : ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಚಿರಪರಿಚಿತರಾದ ಕೆಲವೇ ವ್ಯಕ್ತಿಗಳಲ್ಲಿ ಎಸ್. ನಿಜಲಿಂಗಪ್ಪನವರು ಒಬ್ಬರು. ಅಧಿಕಾರಕ್ಕಾಗಿ, ಸ್ಥಾನಮಾನ ಹಾಗೂ ಸವಲತ್ತುಗಳಿಗಾಗಿ ಇವರು ಎಂದೂ ಹಾತೊರೆದವರಲ್ಲ. ಅಧಿಕಾರ ಇವರನ್ನೇ ಅರಸಿ ಬರುತ್ತಿತ್ತು ಎನ್ನುವುದು ಸೂಕ್ತ. ೧೯೬೮-೬೯ರಲ್ಲಿ ರಾಷ್ಟ್ರಮಟ್ಟದ ರಾಜಕೀಯದಲ್ಲಿ ಹಿಂದೆಂದಿಗಿಂತಲೂ ಬೇರೆಯೇ ಪರಿಸ್ಥಿತಿ ಕಾಣಿಸಿಕೊಂಡಿತ್ತು. ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಮುಖಂಡರು ಮತ್ತು ಪ್ರಧಾನಮಂತ್ರಿ ಇಂದಿರಾ ಗಾಂಧಿ ಅವರ ನಡುವಿನ ವಿರಸ ಉಲ್ಬಣವಾಗಿತ್ತು. ಮುಂದೆ ಕಾಲಕ್ರಮೇಣ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ನಿಜಲಿಂಗಪ್ಪನವರನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಪ್ರಧಾನಿ ಇಂದಿರಾಗಾಂಧಿ ಮಾಡಿದ ಪ್ರಯತ್ನಗಳು ಮತ್ತು ಹೂಡಿದ ತಂತ್ರ ಗಳೆಲ್ಲವೂ ವಿಫಲಗೊಂಡವು. ಕೊನೆಗೆ ತಾವೇ ಬೆಂಬಲಿಸಿ ಅಭ್ಯರ್ಥಿಯಾಗಿ ನಿಲ್ಲಿಸಿದ್ದ ಸಂಜೀವರೆಡ್ಡಿಯವರ ವಿರುದ್ಧ ರಾಷ್ಟ್ರಾಧ್ಯಕ್ಷರ ಚುನಾವಣೆಯಲ್ಲಿ ವಿ. ವಿ. ಗಿರಿಯವರನ್ನು ಎತ್ತಿ ಕಟ್ಟಿದ ಇಂದಿರಾಗಾಂಧಿಯವರು ಪಕ್ಷದ ಅಭ್ಯರ್ಥಿಯನ್ನು ಸೋಲಿಸಿದ್ದಲ್ಲದೆ ಅಖಿಲ ಭಾರತ ಕಾಂಗ್ರೆಸ್ ಪಕ್ಷ ಇಬ್ಭಾಗವಾಗಲು ಕಾರಣರಾದರು. ಮೊಟ್ಟ ಮೊದಲಿಗೆ ಸ್ವತಂತ್ರ ಭಾರತದಲ್ಲಿ ಕನ್ನಡಿಗರಾಗಿ ಅಖಿಲ ಭಾರತ ಕಾಂಗ್ರೆಸ್‌ನ ಅಧ್ಯಕ್ಷ ಗಾದಿಗೇರಿದ್ದ ಶ್ರೀ ನಿಜಲಿಂಗಪ್ಪನವರು ಮುಂದೆ ಇನ್ನೂ ಉನ್ನತ ಸ್ಥಾನವಾದ ರಾಷ್ಟ್ರಪತಿ ಸ್ಥಾನಕ್ಕೆ

ಏರಿ ಏನೆಲ್ಲಾ ಆಗುವ ಅವಕಾಶವಿತ್ತು. ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯ ನಿಲುವುಗಳಿಗೆ ಇವರು ಸಮ್ಮತಿ ಸೂಚಿಸುವುದೊಂದ ರಿಂದಲೇ ಅದೆಲ್ಲಾ ಗಳಿಸುವ ಸಾಧ್ಯತೆ ಇದ್ದಿತು. ಆದರೆ ತಮ್ಮ ನೀತಿ ನಿಯಮಗಳನ್ನು ಬಿಟ್ಟುಕೊಡಲು ಸಿದ್ಧರಿಲ್ಲದ ಶ್ರೀ ನಿಜಲಿಂಗಪ್ಪನವರು "ನೀವು ಹಿಡಿದ ಮಾರ್ಗ ತಪ್ಪು" ಎಂದು ಮುಖಕ್ಕೆ ರಾಚುವಂತೆ ಹೇಳಿ ಹೊರಬಂದ ಧೀಮಂತ ವ್ಯಕ್ತಿ.

ಅವರು ಹಲವು ಹುದ್ದೆಗಳಲ್ಲಿದ್ದು, ವೈವಿಧ್ಯಮಯ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರೂ, ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಪಾರ್ಲಿಮೆಂಟರಿ ವರ್ಕಿಂಗ್ ಕಮಿಟಿಯ ಸದಸ್ಯರೂ. ಭಾರತ ಸಂವಿಧಾನ ರಚನಾ ಸಭೆಯ ಸದಸ್ಯರೂ, ಮೈಸೂರು ಸಂವಿಧಾನ ರಚನಾ ಸಭೆಯ ಸದಸ್ಯರೂ, ಲೋಕಸಭಾ ಸದಸ್ಯರು (೧೯೫೨-೫೬) ವಿಶಾಲ ಮೈಸೂರು ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರೂ, ಎರಡು ಬಾರಿ ಮೈಸೂರು ರಾಜ್ಯದ ಮುಖ್ಯಮಂತ್ರಿಯೂ (೧೯೫೬-೫೮, ೧೯೬೨-೬೮) ಆಗಿ ಎಸ್. ನಿಜಲಿಂಗಪ್ಪನವರು ಕರ್ನಾಟಕದ ಹಾಗೂ ಭಾರತದ ಅಭಿವೃದ್ಧಿಗಾಗಿ ಅವಿರತ ಶ್ರಮಿಸಿದ್ದಾರೆ. ಏಕೀಕೃತಗೊಂಡ ಕರ್ನಾಟಕದ ಪ್ರಥಮ ಮುಖ್ಯ ಮಂತ್ರಿಯಾದ ಹೆಗ್ಗಳಿಕೆ ಅವರದಾಗಿದೆ. ಅವರ ಸೇವೆ ಕನ್ನಡಿಗರ ಮನದಲ್ಲಿ ಅಚ್ಚಳಿಯದೆ ಉಳಿಯುವಂತಹುದಾಗಿದೆ.

ಚುನಾವಣೆಯಲ್ಲಿ ಆಯ್ಕೆಯಾದ ಕಾಂಗ್ರೆಸ್ ಪಕ್ಷದ ಮುಖಂಡರಾದ ಎಸ್. ನಿಜಲಿಂಗಪ್ಪ ನವರು ಏಕೀಕೃತಗೊಂಡ ವಿಶಾಲ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿಯಾದರು. ಇವರ ಕಾಲದಲ್ಲಿ ಶರಾವತಿ ವಿದ್ಯುತ್ ಯೋಜನೆ, ಘಟಪ್ರಭ, ಮಲಪ್ರಭ ನೀರಾವರಿ ಯೋಜನೆಗಳು ಆರಂಭಗೊಂಡವು.

ಚುರುಕು ಬುದ್ಧಿ, ಹರಿತ ಸ್ಮೃತಿ ಶಕ್ತಿ ಹೊಂದಿದ್ದ ಅವರು ಬೆಂಗಳೂರಿನ ಕಲ್ಮಷ ವಾತಾವರಣದಿಂದ ದೂರ ಸರಿದು ಚಿತ್ರದುರ್ಗದ ನಗರದಲ್ಲಿ ಇದ್ದರು. ರಾಜಧಾನಿಯಿಂದ ಹೊರಗೆ ವಾಸ ಮಾಡುತ್ತಿದ್ದ ಏಕೈಕ ಮಾಜಿ ಮುಖ್ಯಮಂತ್ರಿ ಇವರು.

'ಮಾನವ ಜನ್ಮ ದೊಡ್ಡದು. ಇದಕ್ಕೆ ಸರಿಸಮಾನವಾದ ಜನ್ಮ ಇನ್ನೊಂದಿಲ್ಲ. ಈ ಜೀವನ ಇನ್ನೊಬ್ಬರನ್ನು ಹಾಳು ಮಾಡುವುದಕ್ಕಲ್ಲ, ಉದ್ಧಾರಕ್ಕೆ. ಭ್ರಷ್ಟಾಚಾರ ತೊಡೆದು ಹಾಕಿ ಎಂಬುದೇ ಅವರ ಜೀವನ ಮಂತ್ರ'.

'ಅನುಭವವೇ ಜ್ಞಾನ, ಜ್ಞಾನವೇ ಸುಖ, ಅದೇ ಸತ್ಯ ಅದೇ ಜೀವನ, ದೀನ ದಲಿತರಿಗೆ ವಸತಿ, ವಿದ್ಯೆ ಸಿಗುವವರೆಗೂ ವಿಶ್ವಕ್ಕೆ ನೆಮ್ಮದಿಯಿಲ್ಲ' ಎಂಬುದು ನಿಜಲಿಂಗಪ್ಪನವರ ಪ್ರತಿದಿನದ ಸೊಲ್ಲಾಗಿತ್ತು. ನುಡಿದಂತೆ ನಡೆದ ಅಪರೂಪದ ಮುತ್ಸದ್ದಿ ಎಸ್. ನಿಜಲಿಂಗಪ್ಪ ಎಲ್ಲ ಪೀಳಿಗೆ ಯವರಿಗೂ ಮಾದರಿಯೇ ಸರಿ.



# ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರು

ಎಂ. ಜ್ಯೋತಿಲಕ್ಷ್ಮಿ*

ಅನೇಕ ಶತಮಾನಗಳ ನಮ್ಮ ಸ್ವಾತಂತ್ರ್ಯ ಸಂಘರ್ಷ ಇಂದು ಯಶಸ್ಸಿನ ಒಂದು ಘಟ್ಟ ಮುಟ್ಟಿದೆ. ನಮ್ಮ ರಾಷ್ಟ್ರದ ಸ್ವತಂತ್ರ ಸಾರ್ವಭೌಮ ಜೀವನವನ್ನು ಕಟ್ಟುವ ಸುವರ್ಣಾವಕಾಶ ನಮಗಿಂದು ಒದಗಿಬಂದಿದೆ. ನಮ್ಮ ರಾಷ್ಟ್ರಜೀವನವನ್ನು ಯಾವ ಆದರ್ಶದ ಬೆಳಕಿನಲ್ಲಿ, ಯಾವ ಸಿದ್ಧಾಂತದ ಅಡಿಗಲ್ಲ ಮೇಲೆ ಕಟ್ಟಬೇಕು. ಎಂಬ ಸವಾಲಿಗೆ ನಾವಿಂದು ಕಟ್ಟುನಿಟ್ಟಿನ ಜೀವನ ಹಾಗೂ ಸಾಮಾಜಿಕ ಬದುಕನ್ನು ರೂಢಿಸಿಕೊಳ್ಳಬೇಕಾಗಿದೆ.

ನಮ್ಮ ಜನಸಾಮಾನ್ಯರ ಅಂತಃಕರಣವನ್ನು ತಟ್ಟಿ ವಿಧಿಸುವ ರಾಷ್ಟ್ರೀಯ ಆದರ್ಶಗಳಿಲ್ಲದೆ ಹೋದಲ್ಲಿ ರಾಷ್ಟ್ರದ ಪುನರುತ್ಥಾನಕ್ಕಾಗಿ ಅವರಲ್ಲಿ ಸ್ವಯಂ ಪ್ರೇರಣೆ ಕಾರ್ಯೋತ್ಸಾಹ, ತ್ಯಾಗ, ಪೌರುಷಗಳು ಬೆಳೆದು ನಿಲ್ಲುವುದಾದರೂ ಹೇಗೆ? ಎಂದಮೇಲೆ ಜನರೆದೆಗೆ ಸ್ಫೂರ್ತಿ, ಉತ್ಸಾಹಗಳನ್ನೆರೆಯಬಲ್ಲ ಭಾರತೀಯತೆಯ ಆದರ್ಶವನ್ನು ಎತ್ತಿಹಿಡಿಯುವುದು ಇಂದು ಆದ್ಯ ಕರ್ತವ್ಯವಾಗಿದೆ.

ನಮ್ಮ ಭಾರತೀಯತೆಯ - ನಮ್ಮ ಸಂಸ್ಕೃತಿ, ಪರಂಪರೆ, ಇತಿಹಾಸ, ತತ್ವಜ್ಞಾನ, ಜೀವನಾದರ್ಶಗಳ-ಹಿರಿಮೆ ಈ ಲೋಕದಲ್ಲಿ ಸಾಟಿಯಿಲ್ಲದ್ದು. ಆಧುನಿಕ ಜೀವನದ ಅನೇಕ ವಿಕಟ ಸಮಸ್ಯೆ - ಸವಾಲುಗಳಿಗೆ ಸಮರ್ಪಕವಾಗಿ ಸಮಾಧಾನ ನೀಡಬಲ್ಲಂತಹ ಸಮಗ್ರ ಜೀವನದೃಷ್ಟಿ, ವಿಚಾರಸಂಪತ್ತು, ಒಬ್ಬ ಸಜ್ಜನ ವ್ಯಕ್ತಿಯ ಬದುಕಿನ ಅಧ್ಯಯನ ಹಾಗೂ ಅವರು ಬೆಲೆಕೊಡುತ್ತಿದ್ದ ಮೌಲ್ಯ ಗಳಿಂದ ಉಳಿಸಿಕೊಳ್ಳಬೇಕಾಗಿದೆ. ತಮ್ಮ ವೈಯಕ್ತಿಕ ಬದುಕನ್ನು ಸಮಾಜಕ್ಕೆ ಕೊಟ್ಟು, ಸ್ವಾಭಿಮಾನದ ನೆಲೆಯ ಮೇಲೆ ಪ್ರಾಮಾಣಿಕತೆಯನ್ನು ಬೆಳೆಸಿಕೊಂಡವರು ಇಂದು ನಮಗೆ ದಾರಿದೀಪವಾಗಲು ಸಾಧ್ಯ.

---

*ಅಂತಿಮ ಬಿ.ಎಸ್ಸಿ., ಸರ್ಕಾರಿ ವಿಜ್ಞಾನ ಕಾಲೇಜು, ಚಿತ್ರದುರ್ಗ

ಆದರ್ಶದ ಕನಸು ಕಾಣುವವರಿಗೆ ದೊಡ್ಡ ದೊಡ್ಡ ಸಿದ್ಧಾಂತದ ಮಾತುಗಳನ್ನಾಡದ, ಸಾಮಾಜಿಕ ಪ್ರಜ್ಞೆಯ ಬಗ್ಗೆ ಭಾಷಣ ಬಿಗಿಯದ, ವಾಸ್ತವವನ್ನರಿತು ಜನಮುಖಿಯಾಗಿ ಬದುಕಿ, ಸಿಕ್ಕ ಅಧಿಕಾರವನ್ನು ಪ್ರಾಮಾಣಿಕವಾಗಿ ನಾಡಿನ ಏಳ್ಗೆಗಾಗಿ ಬಳಸಿದವರು ಮಾತ್ರ ಸದಾ ಮನದಲ್ಲಿ ಉಳಿಯುತ್ತಾರೆ.

ಕೀರ್ತಿಕಾಮನೆಯ ದೌರ್ಬಲ್ಯಕ್ಕೆ ಬಲಿಯಾಗದೆ ಜನರೆಲ್ಲಾ ಬಂಧುಗಳೇ ಎಂಬ ಅಲಂಕಾರಿಕ ಅರ್ಥದಲ್ಲಿಯೇ ಅಲ್ಲದೆ, ವಾಸ್ತವದಲ್ಲಿಯೂ ಎಲ್ಲರ ಬಂಧುವಾಗಿ "ಯೋಗಿಯಂತೆ ಬಾಳಿದ ಸಂಸಾರಿ", ಅವಕಾಶವಿದ್ದರೂ ಸತ್ಯ ಪಥದಿಂದ ವಿಚಲಿತರಾಗದ ಗಟ್ಟಿ ಮನಸ್ಸಿನ, ಆತ್ಮೀಯತೆಯ ವ್ಯಕ್ತಿ "ಎಸ್. ನಿಜಲಿಂಗಪ್ಪ" ನವರಂತಹ ರಾಷ್ಟ್ರನಾಯಕರು ನಮಗೆ ಮಾರ್ಗದರ್ಶಿ ಗಳಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಪ್ರಜಾಸತ್ತೆಯ ಮೂಲಸಿದ್ಧಾಂತವನ್ನೇ ಆಚರಣೆಯಲ್ಲಿ ತೋರಿದ ಇವರ ನಡತೆಯಲ್ಲಿ ರಾಜ್ಯಾಧಿಕಾರ ತಮ್ಮ ಖಾಸಗಿ ಆಸ್ತಿಯಲ್ಲ; ಅದರಲ್ಲಿ ತಮ್ಮ ಸಂಬಂಧಿಗಳ ಪಾಲು ಇಲ್ಲ ಎಂಬುದು ಎದ್ದು ಕಾಣುತ್ತದೆ. ಸಜ್ಜನಿಕೆಯಿಂದ, ಹಿತಕರವಾದ ವರ್ತನೆಯಿಂದ ಮತಿವಂತಿಕೆ ಯಿಂದ ಜ್ಞಾನೋಪಾಸನಾಶೀಲದಿಂದ ಎಲ್ಲರ ಮೆಚ್ಚುಗೆಗೆ, ವಿಶ್ವಾಸಕ್ಕೆ ಪಾತ್ರರಾಗಿ ಸಾಹಸಪೂರ್ಣ ಸಾಧನೆಯನ್ನು ಮೆರೆದ ಎಸ್. ನಿಜಲಿಂಗಪ್ಪನವರ ಸ್ವಾಭಿಮಾನ ಹಾಗೂ ಛಲ ನಮ್ಮೆಲ್ಲರ ಜೀವನಾದರ್ಶನ ಚೈತನ್ಯ ಚಿಲುಮೆಯಾಗಬೇಕು.

'ರಾಷ್ಟ್ರನಾಯಕ', 'ಕರ್ನಾಟಕ ಶಿಲ್ಪಿ', ಎಸ್. ನಿಜಲಿಂಗಪ್ಪನವರು ಜನಿಸಿದ್ದು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕು ಹಲುವಾಗಿಲಿನಲ್ಲಿ. ಹಲುವಾಗಿಲು ಗ್ರಾಮದ ಅಂದಿನ ವಾತಾವರಣ, ಹುಟ್ಟಿ ಬೆಳೆದ ಮನೆತನ ಅವರ ಮನಸ್ಸನ್ನು ಸೌಜನ್ಯ ಶೀಲ, ಸ್ನೇಹಮಯಿ, ನೀತಿಸಂಪನ್ನರಾಗಿ ಮಾಡುವಲ್ಲಿ ಪರಿಣಾಮಕಾರಿಯಾಗಿದೆ. ಅವರಲ್ಲಿ ಕಂಡುಬರುವ ಒಂದು ಗುಣವೆಂದರೆ ಪ್ರಾಮಾಣಿಕತೆ ಇನ್ನೊಂದು ಅವರು ಯಾವುದನ್ನು ಸರಿಯೆಂದು ನಂಬುತ್ತಿದ್ದರೋ ಅಥವಾ ಇತರರು ಯಾವುದು ಸರಿಯೆಂಬುದಾಗಿ ಅವರನ್ನು ನಂಬಿಸುತ್ತಿದ್ದರೋ ಅದನ್ನು ಪಟ್ಟುಹಿಡಿದು ಮಾಡುವ ಸ್ವಭಾವ. ತನ್ನ ತಾತನ ಲಿಂಗನಿಷ್ಠೆ, ಸ್ವಾಭಿಮಾನ, ಪರೋಪಕಾರದ ಬುದ್ಧಿ ಹಾಗೂ ಕಷ್ಟ ಸಹಿಷ್ಣುತೆ ಅವರ ತಾಯಿ-ನೀಲಮ್ಮನ ಮುಖಾಂತರ ರಕ್ತಗತವಾಗಿ ಬಂದವು. ಚಿಕ್ಕಂದಿನಲ್ಲಿ ಕಂಡುಂಡ ಬಡತನ ಅದರ ಮನಸ್ಸನ್ನು ರೂಪಿಸಿತು. ಅವರ ಆರ್ಥಿಕ ಪರಿಸ್ಥಿತಿ ಸ್ವಭಾವದ ಮೇಲೆ ಪ್ರಭಾವ ಬೀರಿತು.

ಮಾನಸಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣಕ್ಕೆ ಪೂರಕವಾಗಿ ಅಂದಿನ ಸಾಂಪ್ರದಾಯಿಕ ಹಾಗೂ ಸಾಂಸ್ಕೃತಿಕ ವಾತಾವರಣ ಅವರು ಓದಿಲ್ಲದೆ ವಿದ್ಯಾಂವತರಾಗುವಲ್ಲಿ ಯಶಸ್ವಿಯಾಯಿತು. ಊರಿನಲ್ಲಿ ನಡೆಯುತ್ತಿದ್ದ ಯಕ್ಷಗಾನ, ಬಯಲಾಟ, ಹರಿಕತೆ, ನಾಟಕ ಇವುಗಳ ನಡುವೆ ಬೆಳೆದ ಎಸ್. ನಿಜಲಿಂಗಪ್ಪನವರು ಒಳ್ಳೆಯ ಸಂಸ್ಕಾರದಿಂದ ಸುಸಂಸ್ಕೃತ ವ್ಯಕ್ತಿಯಾದರು. ಅಲ್ಲದೆ ಋಣಮುಕ್ತತೆಯ ಪಾಠವನ್ನು ಹರಿಶ್ಚಂದ್ರ ನಾಟಕದಿಂದ ಕಲಿತರಲ್ಲದೆ ಶಿವನೇ ಸರ್ವೋತ್ತಮ ಎಂಬ ಭಾವನೆಯನ್ನು ಬೆಳೆಸಿಕೊಂಡು ಅದರ ನಂಬಿಕೆಯಲ್ಲಿಯೇ ಜೀವನವನ್ನು ನಡೆಸುವಲ್ಲಿ ಸಹಕಾರಿಯಾಯಿತು.

ನಿಜಲಿಂಗಪ್ಪನವರು ಆರು ವರ್ಷದವರಿದ್ದಾಗಲೇ ತಂದೆ-ಅಡಿವೆಪ್ಪ ತೀರಿಕೊಳ್ಳುತ್ತಾರೆ.

ತಾಯಿ ಹಾಗೂ ತಾತರ ನೆರಳಿನಲ್ಲಿ ಬೆಳೆದ ಅವರು ನೀತಿ ನ್ಯಾಯ-ಧರ್ಮನಿಷ್ಠೆಯ ಪ್ರತೀಕವಾದರು. ತಾಯಿಯ ಧೈರ್ಯ ಹಾಗೂ ಸ್ವಾಭಿಮಾನ ಅವರಲ್ಲಿ ರಕ್ತಗತವಾಗಿ ಬಂದಿತು. ಅವರು ಹುಟ್ಟಿದಾಗಲೇ ಅವರ ತಾತ ಹಸ್ತರೇಖೆಯನ್ನು ವೀಕ್ಷಿಸಿ ಮುಂದೆ ಕೀರ್ತಿಶಾಲಿಯಾದ ಮಹಾವ್ಯಕ್ತಿಯಾಗುತ್ತಾರೆಂದು ಭವಿಷ್ಯ ನುಡಿದಿದ್ದರು. ಎಲ್ಲರ ಮುದ್ದಿನ ಮಗನಾಗಿ ಬೆಳೆದ ಎಸ್. ನಿಜಲಿಂಗಪ್ಪನವರು ತಾತನ ಸಾವಿನ ನಂತರ ಬಂದೊದಗಿದ ಕಷ್ಟಗಳ ಸುರಿಮಳೆಯನ್ನು ವಿಧಿಯಿಲ್ಲದೆ ಎದುರಿಸಬೇಕಾಯಿತು. ಆ ಸಮಯದಲ್ಲಿ ಅವರ ಸಂಸಾರಕ್ಕೆ ಸಹಾಯಕರಾಗಿ ನಿಂತವರು, ಸಾವಕ್ಕ-ರುದ್ರಪ್ಪ ದಂಪತಿಗಳು. ಅವರ ಅಕ್ಷರಾಭ್ಯಾಸ - ಮಗ್ಗಿಲೆಕ್ಕ, ಬಾಯಿಲೆಕ್ಕ, ಅಮರಕೋಶ, ಶರಣ ಲೀಲಾಮೃತ, ಸರ್ವಜ್ಞ ವಚನಗಳಿಂದ ಸಾಗಿತು. ಮೊದಲ ಬಾರಿಗೆ "ಓಂ ನಮಃ ಶಿವಾಯಃ ಸಿದ್ಧಂ ನಮಃ" ಎಂಬ ಅಕ್ಷರಗಳನ್ನು ತಿದ್ದಿದ ಅವರು ಮುಂದೆ ಗೆಳೆಯರಿಗೆ ಆದರ್ಶವಾಗಿ, ಗುರುಗಳಿಗೆ ಪ್ರಿಯವಾಗಿ ಬೆಳೆದರು.

ಸೌಜನ್ಯ ಶೀಲ, ಸ್ನೇಹಮಯಿ, ನೀತಿ ಸಂಪನ್ನ ನಿಜಲಿಂಗಪ್ಪನವರು ಸ್ವಾತಂತ್ರ್ಯಕ್ಕಾಗಿ, ಸ್ವಾಭಿಮಾನಕ್ಕಾಗಿ. ಪ್ರಾಣದ ಹಂಗು ತೊರೆದು ಹೋರಾಡಿದ ರಾಷ್ಟ್ರನಾಯಕರ ಕಥೆಗಳನ್ನು ಕೇಳಿ ಭವಿಷ್ಯದ ಗರ್ಭದಲ್ಲಿ ಆದರ್ಶವನ್ನು ಚಿಗುರೊಡೆಸಿಕೊಂಡದ್ದು ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ, ಸಿದ್ಧಪ್ಪನ ಹಳ್ಳಿಯಲ್ಲಿ ನಡೆದ ಅವರ ಪ್ರಾಥಮಿಕ ಶಿಕ್ಷಣ, ಚಿಕ್ಕಪ್ಪನ ಸಹಾಯದಿಂದ ಬುದ್ಧಿವಂತಿಕೆಯನ್ನು, ಜಾಣತನವನ್ನು ಸಂಪಾದಿಸುವಲ್ಲಿ ನೆರವಾಯಿತು.

ಅವರ ಮಾಧ್ಯಮಿಕ ಶಿಕ್ಷಣ ಚಿತ್ರದುರ್ಗದಲ್ಲಿ ಮುಂದುವರೆಯಿತು. ಅವರು ಉಪಾಧ್ಯಾಯ ನರಸಿಂಹರಾಯರ ಶಾಲೆಯಲ್ಲೇ ಉಳಿದು, ದಾವಣಗೆರೆಯಲ್ಲಿ ವಾರಾನ್ನಕ್ಕೆ ಸೇರಿಕೊಂಡು ಒಮ್ಮೊಮ್ಮೆ ಹಸಿದ ಹೊಟ್ಟೆಗೆ ಹಳಸಿದ ಆಹಾರವನ್ನು ಸೇವಿಸಿ ಕಷ್ಟಕರ ಜೀವನ ನಡೆಸಿದ ಸಂಯಮಿ ಎಸ್. ನಿಜಲಿಂಗಪ್ಪನವರು. ತಾಯಿಯ ಹರಕೆ, ಗುರುಗಳ ಆಶೀರ್ವಾದ, ಗೆಳೆಯರ ಹಾಗೂ ಚಿಕ್ಕಪ್ಪನ ಪ್ರೋತ್ಸಾಹದಿಂದ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನದಲ್ಲಿ ತೇರ್ಗಡೆಯಾಗಿ ಬದುಕಿನ ಯಶಸ್ಸಿನಲ್ಲಿ ಸಾಮರ್ಥ್ಯದ ಜೊತೆಗೆ ಜಾಣತನವನ್ನು ಬೆಳೆಸಿಕೊಂಡು, ವಿದ್ಯಾರ್ಥಿ ಜೀವನದಲ್ಲಿ ಅತ್ಯುತ್ತಮ ಸಾಧನೆಗೈದರು. ಆ ಸಮಯದಲ್ಲಿ ನಡೆಯುತ್ತಿದ್ದ ಬ್ರಾಹ್ಮಣೇತರರ ಮೇಲಿನ ದೌರ್ಜನ್ಯವನ್ನು ಹಾಗೂ ಅನ್ಯಾಯವನ್ನು ಖಂಡಿಸಿ. ಪ್ರತಿಭಟನೆಯ ದಾರಿಯಲ್ಲಿ ನಡೆಯಲು ಮುನ್ನುಗ್ಗಿದರು. ಅನ್ಯಾಯದ ಅಸಮಾಧಾನದ ಹೊಣೆಯ ತಾಪ ಅರಿವಿಗೆ ಬಂದದ್ದು ಆ ವಯಸ್ಸಿನಲ್ಲೇ. ಇದರಿಂದ ನಿಜಲಿಂಗಪ್ಪನವರಿಗೆ ಹಿಂದುಳಿದ ವರ್ಗದವರ ಏಳಿಗೆಗೆ ದುಡಿಯಲು ಮಾರ್ಗದರ್ಶನವಾಯಿತು. ಅವರ ಮುಂದಿನ ಕಾಲೇಜು ವಿದ್ಯಾಭ್ಯಾಸ ಬೆಂಗಳೂರಿನಲ್ಲಿ ನಡೆಯುತ್ತದೆ. ಆ ಸಮಯದಲ್ಲಿ ಮಹಾತ್ಮಗಾಂಧಿಯವರ ಭೇಟಿಯಿಂದ ಅವರು ಮರೆಯಲಾರದಂಥ ಸಂತೋಷವನ್ನು ಪಡೆಯುತ್ತಾರೆ. ಅವರ ಭಾಷಣಗಳಿಂದ ಪ್ರಭಾವಿತರಾದ ಎಸ್. ನಿಜಲಿಂಗಪ್ಪನವರು. ಅವರ ಧ್ಯೇಯ-ಧೋರಣೆಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾರೆ.

೧೯೨೪ರಲ್ಲಿ ಕಾನೂನು ಪದವಿ ಪಡೆಯಲು ಪುಣೆಯಲ್ಲಿ ನೆಲೆಸುತ್ತಾರೆ. ಆಗ ಅದು ಭಾರತೀಯರ ರಾಜಕೀಯ ವಿದ್ಯಮಾನಗಳ ಪ್ರಮುಖ ಕೇಂದ್ರವಾಗಿತ್ತು. ಆ ಸಂದರ್ಭದಲ್ಲಿ ನಡೆದ

"ಬೆಳಗಾವಿಯ ಕಾಂಗ್ರೆಸ್ ಅಧಿವೇಶನ. ಗಾಂಧೀಜಿಯ ದರ್ಶನ, ಅವರ ಭಾಷಣ, ನಾಯಕರ ಘೋಷಣೆಗಳು" ನಿಜಲಿಂಗಪ್ಪನವರ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿ ಬದುಕಿನ ಒಂದು ಭಾಗವಾಗಿ ಉಳಿಯುತ್ತದೆ. ಇದರಿಂದ ಅವರು ಸ್ವಾತಂತ್ರ್ಯ ಆಂದೋಲನದ ದೀಕ್ಷೆ ಪಡೆದು, ರಾಷ್ಟ್ರಭಕ್ತಿ, ರಾಷ್ಟ್ರಸೇವೆ, ಸ್ವಾತಂತ್ರ್ಯಾಪೇಕ್ಷೆಯನ್ನು ಗಳಿಸಿಕೊಳ್ಳುತ್ತಾರೆ. ಜೀವನದ ಅಸಮಾಧಾನದ ತಾಪ ತಪಸ್ಸಾಗಿ ಪರಿಣಮಿಸುತ್ತದೆ.

೧೯೨೬ರಲ್ಲಿ ತಮ್ಮ ಪ್ರಥಮ ವಕೀಲ ವೃತ್ತಿಯನ್ನು ಚಿತ್ರದುರ್ಗದಲ್ಲಿ ಪ್ರಾರಂಭಿಸುತ್ತಾರೆ. ಮುಂದಿನ ಅವರ ಧ್ಯೇಯ "ಕಾನೂನು ವೃತ್ತಿಯ ಮೂಲಕ ಸಮಾಜದ ಅಭ್ಯುದಯವನ್ನು, ಶ್ರೇಯಸ್ಸನ್ನು ಸಾಧಿಸುವುದು." ಸ್ವತಂತ್ರ ಮನೋವೃತ್ತಿಯ ವೈಚಾರಿಕತೆ ಮನೋಧರ್ಮದ ಆತ್ಮ ಶ್ರದ್ಧೆಯುಳ್ಳ ನಿಜಲಿಂಗಪ್ಪನವರು ವೃತ್ತಿ ಜೀವನದಲ್ಲಿ ಅಪಾರ ಯಶಸ್ಸನ್ನು ಗಳಿಸಿ ಅಪೂರ್ವ ವರ್ಚಸ್ಸಿನಿಂದ ಸರ್ವಾಕರ್ಷಕರಾಗಿ ಮೆರೆದರು.

ಗ್ರಾಮೀಣ ಜನರ ಸ್ಥಿತಿಗತಿಗಳನ್ನು ಸ್ವತಃ ತಾವೇ ನೋಡಿದ್ದರಿಂದ, ಬಡತನದ ಬೇಗೆಯಲ್ಲಿ ಬೆಂದು ಬಂದದ್ದರಿಂದ ಸಹಾನುಭೂತಿ ಅನುಕಂಪಗಳನ್ನು ತಮ್ಮ ವೃತ್ತಿಯಲ್ಲಿ ಅಳವಡಿಸಿಕೊಂಡದ್ದು, ಅವರ ಕೀರ್ತಿ ಪತಾಕೆಗೆ ಕಳೆ ತಂದಿದೆ.

ಬ್ರಾಹ್ಮಣೇತರ ಚಳವಳಿಗಳಿಂದ ಪ್ರಭಾವಿತರಾಗಿದ್ದ ನಿಜಲಿಂಗಪ್ಪನವರು "ಅದೃಷ್ಟಶಾಲಿ ಯಶಸ್ವಿ ನ್ಯಾಯವಾದಿ" ಗಳಾಗಲು ಬಹಳ ಕಾಲ ಹಿಡಿಯಲಿಲ್ಲ. ಅವರ ಜೀವನದಲ್ಲಿ ಶೀಘ್ರಾತಿ ಶೀಘ್ರ ಒದಗಿದ ಯಶಸ್ಸಿಗೆ, ಅವರ ಪ್ರಾಮಾಣಿಕತೆ, ಸತ್ಯ ಸಂಧತೆ, ನ್ಯಾಯನಿಷ್ಠೆ, ವೃತ್ತಿ ಪ್ರೇಮ, ಏಕಾಗ್ರತೆ, ದೀನ-ದಲಿತರ ಮೇಲಿನ ಅನುಕಂಪ, ಸೌಜನ್ಯ ಮತ್ತು ಸರಸ ಸಜ್ಜನಿಕೆಗಳೇ ಕಾರಣ. ಅನೇಕ ಪ್ರತಿಭಟನೆಗಳನ್ನು ಹೋರಾಟಗಳನ್ನು ನಡೆಸಿ ಬಡವರ ಬಂಧುವಾಗಿ, ನ್ಯಾಯಒದಗಿಸುವುದರ ಜೊತೆಗೆ ಸೇವಾಮನೋಭಾವದ ಮಹಾನುಭಾವರೆಂದು ಕೃತಜ್ಞತೆಯನ್ನು ಸಂಪಾದಿಸಿದರು. ಅನ್ಯಾಯವು ಯಾವ ರೀತಿಯಲ್ಲಿ ಪ್ರಕಟವಾದರೂ ಅದನ್ನು ಪ್ರತಿಭಟಿಸುವ, ವಿರೋಧಿಸುವ ಪ್ರವೃತ್ತಿ ನಿಜಲಿಂಗಪ್ಪನವರದು. ಅವರ ಈ ಬದುಕಿನ ಯಶಸ್ಸಿಗೆ ನೆರಳಂತೆ ನಿಂತವರು ಮಡದಿ ಮುರಿಗೆಮ್ಮ ಹಾಗೂ ಮುತ್ತಿನಂಥ ಮಕ್ಕಳು.

ಬೆಳಗಿನ ಜಾವ ಐದರಿಂದ ರಾತ್ರಿ ಹತ್ತರವರೆಗೆ ನಿರಂತರವಾಗಿ ಸಾಗುತ್ತಿದ್ದ ಅವರ ಜೀವನ ಕ್ರಮದಲ್ಲಿ ಸಾರ್ವಜನಿಕರ ಸೇವಾ ಕಾರ್ಯಗಳಿಗಾಗಿಯೇ ಹೆಚ್ಚಿನ ಕಾಲವನ್ನು ಮುಡುಪಾಗಿಟ್ಟಿದ್ದರು. ಅವರು ಬೆಳೆದಂತಹ ಸಂಸ್ಕೃತಿ ಹಾಗೂ ಕಷ್ಟಕರ ಬದುಕು ಸೇವಕರನ್ನು ಸಹ ಉದಾರವಾಗಿ ಸರಿಸಮವಾಗಿ ಕಾಣಲು ಅನುಕೂಲವಾಯಿತು. ರಾಜಕೀಯದಿಂದ ಸಂಪೂರ್ಣ ದೂರವಿದ್ದ ನಿಜಲಿಂಗಪ್ಪನವರು ಬಡಜನರ ಕಲ್ಯಾಣಕ್ಕಾಗಿ ಪಣ ತೊಟ್ಟು ನಿಂತ ಮಹಾನ್ ವ್ಯಕ್ತಿ.

ಜಗತ್ತಿನ ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಳ ಇತಿಹಾಸವನ್ನು ಅವಲೋಕನ ಮಾಡಿದರೆ ಆ ದೇಶಗಳ ಬುದ್ಧಿಜೀವಿಗಳಲ್ಲಿ ನ್ಯಾಯವಾದಿಗಳೇ ಬಹುಸಂಖ್ಯೆಯಲ್ಲಿ ಮುಂದಾಳುಗಳಾಗಿ ಮುಂಚೂಣಿಯಲ್ಲಿದ್ದುದು ಕಂಡುಬರುತ್ತದೆ. ಮೈಸೂರು ಕಾಂಗ್ರೆಸ್ ಸ್ಥಾಪನೆಯಾಗಿ ಸಾಕಷ್ಟು ಬಲಶಾಲಿಯಾಗಿದ್ದಾಗ, ಚಿತ್ರದುರ್ಗ ಜಿಲ್ಲೆಯ ಪಕ್ಷದ ಜವಾಬ್ದಾರಿ, ಅಧಿಕಾರ ಎಸ್ಸೆನ್ ಅವರಿಗೆ ದೊರಕಿತು.

ಗಾಂಧೀಜಿಯ ಕಾರಾಗೃಹವಾಸ, ಹಾಗೂ ಉಪವಾಸ ವ್ರತಗಳು ಮತ್ತು ಸತ್ಯಾಗ್ರಹಗಳು, ಅನುಭವಿಸುತ್ತಿದ್ದ ಘೋರ ಯಾತನೆಗಳು, ದೈಹಿಕ ಶ್ರಮ, ಮಾನಸಿಕ ತಳಮಳಗಳನ್ನು ಕಂಡ ಆಗಿನ ಮೈಸೂರು ಕಾಂಗ್ರೆಸ್ಸಿನ ಪ್ರಸಿದ್ಧ ಮುಖಂಡರಾದ ಟಿ. ಸಿದ್ಧಲಿಂಗಯ್ಯನವರು ಪ್ರಚಾರಕ್ಕಾಗಿ ಚಿತ್ರದುರ್ಗಕ್ಕೆ ಬಂದಾಗ ನಿಜಲಿಂಗಪ್ಪನವರ ಖ್ಯಾತಿಯನ್ನು ಅರಿತು ಅವರ ಸಹಾಯ, ಸಹಕಾರಗಳು ಅತ್ಯಗತ್ಯವೆಂದು ತಿಳಿದು, "ಗಾಂಧೀಜಿ ಸಮಕಾಲೀನರಾಗಿ ಅವರ ನೇತೃತ್ವದಲ್ಲಿ ನಾಡಿಗೆ ಸೇವೆ ಸಲ್ಲಿಸುವ ಭಾಗ್ಯ ಎಲ್ಲರಿಗೂ ಲಭಿಸುವುದಿಲ್ಲ" ಎಂದು ಹೇಳಿ ಕೊನೆಗೊಮ್ಮೆ ಅವರನ್ನು ರಾಜಕೀಯ ರಂಗದ ಮೇಲೆ ತಳ್ಳಿ 'ರಾಜಕೀಯ ಧರ್ಮ ದೀಕ್ಷೆ' ಕೊಟ್ಟರು.

೧೯೩೦ರಲ್ಲಿ ನಿಜಲಿಂಗಪ್ಪನವರು ಜಿಲ್ಲಾ ಕಾಂಗ್ರೆಸ್ಸಿಗೆ ಸೇರ್ಪಡೆಯಾದರು. "ಜಿಲ್ಲಾ ಕಾಂಗ್ರೆಸ್ ಸಮಿತಿ" ಸ್ಥಾಪನೆಯಾದ ನಂತರ ಅದರ ಅಧ್ಯಕ್ಷತೆಯೂ ಕೂಡ ಅದರ ಪಾಲಿಗೆ ಬಿತ್ತು. ಅವರಿಗೆ ಜನ ಬೆಂಬಲ, ಜನಪ್ರಿಯತೆ ಇದ್ದುದರಿಂದ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಅಧ್ಯಕ್ಷರಾಗಲೂ ಸಹಾಯಕವಾಯಿತು. ಹೀಗೆ ಹಿಡಿದು ಉಪದೇಶಿಸಿದ ರಾಜಕೀಯ ಧರ್ಮದೀಕ್ಷೆ ಕಡೆತನಕ ಉಳಿಯಿತು.

ಶಿವಪುರ ಧ್ವಜಸತ್ಯಾಗ್ರಹದಲ್ಲಿ ನಿಜಲಿಂಗಪ್ಪನವರು ಭಾಗವಹಿಸಿದ್ದರು. ಅನಂತರ ವಿದುರಾಶ್ವತ್ಥದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಎಷ್ಟೋ ಯಾತ್ರಿಕರು ಗುಂಡಿಗೆಬಲಿಯಾದ ಘಟನೆಯ ಪರಿಣಾಮ ನಿಜಲಿಂಗಪ್ಪನವರ ಮನಸ್ಸನ್ನು ಕದಡಿತಲ್ಲದೆ ಸ್ವಾತಂತ್ರ್ಯ ದೇವಿಯ ಸೇವೆಗೆ ಅಣಿಯಾಗಲು ಪರಿಣಾಮಕಾರಿ ಯಾದ ದಿಟ್ಟತನ ಮೂಡಿಸುತ್ತದೆ. ಇದರಿಂದ ಅವರ ವಕೀಲ ವೃತ್ತಿಗೆ ಸ್ವಲ್ಪ ಪೆಟ್ಟುಬಿದ್ದು ಅದನ್ನು ಬಿಡಲೇ ಬೇಕಾದ ಸಂದರ್ಭ ಅನಿವಾರ್ಯವಾಗುತ್ತದೆ. ತಾವೂ ಸತ್ಯಾಗ್ರಹದಲ್ಲಿ ಭಾಗವಹಿಸಿ ಸಕ್ರಿಯ ಪಾತ್ರವಹಿಸಬೇಕೆಂದುಕೊಂಡ ನಿಜಲಿಂಗಪ್ಪನವರು, ೧೯೩೦ರಲ್ಲಿ ತುರುವನೂರು ಈಚಲುಮರ ಸತ್ಯಾಗ್ರಹದ ನಾಯಕರೆಂಬ ಕಾರಣಕ್ಕೆ ಜೈಲುವಾಸ ಅನುಭವಿಸಬೇಕಾಗುತ್ತದೆ" ಗಾಂಧಿಯ ಪರೀಕ್ಷೆ ಕಟ್ಟಿದ್ದೀರಿ. ನೀವು ಅದರಲ್ಲಿ ತೇರ್ಗಡೆ ಯಾಗಬೇಕು" ಎಂಬ ಮಡದಿಯ ಮಾತಿಗೆ ಹೃದಯ ತುಂಬಿ ಬಂದರೂ ಸಹ, ಅವರ ಜೈಲುವಾಸದಿಂದ ದೊಡ್ಡ ಕುಟುಂಬ ಯಜಮಾನರಿಲ್ಲದೆ ಅನಾಥವಾಗಿ, ಆಘಾತದಿಂದ ಕುಗ್ಗುತ್ತದೆ.

೧೯೪೦ರಲ್ಲಿ ಅವರ ಬಿಡುಗಡೆಯಾದಾಗ ಅವರು ತಮ್ಮ ವೃತ್ತಿ ಜೀವನವನ್ನು ತ್ಯಜಿಸಿ, ರಾಜಕೀಯ ಜೀವನದಲ್ಲಿ ಸಕ್ರಿಯವಾಗಿ ಪಾಲ್ಗೊಂಡು. ಪುನಃ 'ಚಲೇಜಾವ್ ಚಳವಳಿ'ಯ ಸಂದರ್ಭದಲ್ಲಿ ಜೈಲುವಾಸ ಅನುಭವಿಸಿ ಬಿಡುಗಡೆ ಹೊಂದುತ್ತಾರೆ. ೧೯೪೬ರಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿ ಅವರ ಶಕ್ತಿ ಸಾಮರ್ಥ್ಯ ಕೌಶಲ್ಯಕ್ಕೆ ಸಾಕ್ಷಿಯಾಗಿ ಅನೇಕ ಸಾಧನೆಯಲ್ಲಿ ಸಾಹಸಿಯಾಗಿ ಮೆರೆದರು. ಸ್ವತಂತ್ರ್ಯ ಹೋರಾಟದಲ್ಲಿ ಗಾಂಧಿಯವರ ಜೊತೆ ಸಕ್ರಿಯವಾಗಿ ಪಾತ್ರವಹಿಸಿದ ಅವರು "ಏಕೀಕರಣದ ರೂವಾರಿ"ಯಾಗಿ, "ಕರ್ನಾಟಕ ಶಿಲ್ಪಿ"ಯಾಗಿ ಮೆರೆದರು. ಅವರ ಈ ಅಧ್ಯಕ್ಷತೆಯ ಕಾಲದಲ್ಲಿ ಬಂದೊದಗಿದೆ ಅನೇಕ ಘನಘೋರ ಸಮಸ್ಯೆಗಳು. ಬಹುತೇಕ ಸ್ವಾತಂತ್ರ್ಯದ ಹಾಗೂ ಏಕೀಕರಣದ ಸವಾಲುಗಳಾಗಿ ಪರಿಣಮಿಸಿದವು. ಕರ್ನಾಟಕ ಏಕೀಕರಣದ ಮುಂದಾಳುವಾಗಿ ಜನತೆಗೆ ಬೆಂಬಲವಾಗಿ ನಿಂತು ರಾಜಕೀಯ ಪಕ್ಷಗಳ ಹಾಗೂ ಕರ್ತವ್ಯಗಳ ಕಡೆ ಗಮನ ಹರಿಸಿ ಅದರ ಮಾರ್ಗದರ್ಶಕರಾಗಿ

ಸೇವೆ ಸಲ್ಲಿಸಿದರು. ಆ ಸಮಯದಲ್ಲಿ ನಿಜಲಿಂಗಪ್ಪನವರು ಧೈರ್ಯ, ಸಾಹಸದಿಂದ ಸಾಧನೆ ಗೈಯದಿದ್ದರೆ ಇಂದು ಕರ್ನಾಟಕದಿಂದ ಹೊರಗೆ ಉಳಿಯುತ್ತಿದ್ದ ನಗರಗಳೆಷ್ಟೋ. ನಿಶ್ಚಿತ ಗುರಿಯನ್ನು ಸಾಧಿಸುವಲ್ಲಿ ಅವರ ಕಟ್ಟುನಿಟ್ಟಿನ ಹಾಗೂ ಧ್ಯೇಯ-ಧೋರಣೆಯ ಜೀವನ ಕ್ರಮ ಕೊನೆಗೂ ಫಲ ನೀಡಿತು.

ನಿಜಲಿಂಗಪ್ಪನವರು ಪ್ರಥಮ ಲೋಕ ಸಭಾ ಸದಸ್ಯರು ಸಹ ಆಗಿ ಅಲ್ಲಿಂದ ೧೯೫೬ರಲ್ಲಿ "ಏಕೀಕೃತ ಕರ್ನಾಟಕದ ಪ್ರಥಮಮುಖ್ಯಮಂತ್ರಿ"ಗಳಾಗಿ ಆಯ್ಕೆಯಾದರು. ಅಪಾರ ನಿಸರ್ಗ ಸಂಪತ್ತಿನಿಂದ ಸಂಪದ್ಭರಿತವಾದ ಈ ಕರ್ನಾಟಕ ಜನಜೀವನ ಸುಖಮಯವಾಗಲಿ, ಬಡತನ, ನೀಗಲಿ, ಅನಕ್ಷರತೆ ತೊಲಗಲಿ ಕನ್ನಡವೇ ಶಿಕ್ಷಣ ಮಾಧ್ಯಮವಾಗಲಿ ಎಂಬ ಆಶಯದೊಂದಿಗೆ ನಿಜಲಿಂಗಪ್ಪನವರು ಕಾರ್ಯೋನ್ಮುಖರಾಗಿದ್ದರು.

ಅಜ್ಞಾನ, ಮೌಢ್ಯ, ಅನಾರೋಗ್ಯದಿಂದ ತುಂಬಿ ತುಳುಕುತ್ತಿದ್ದ ಹಳ್ಳಿಯ ಸ್ವರೂಪವನ್ನು ಬದಲಿಸಿ ಸುಸಮೃದ್ಧವಾದ ಕ್ಷೇತ್ರಗಳಾ ಗುವಂತೆ ಮಾಡಲು ಪ್ರಯತ್ನಿಸಿದರು. ರಾಷ್ಟ್ರಾಭಿವೃದ್ಧಿ ಕಾರ್ಯದಲ್ಲಿ ನಾಡಿನ ಯುವಕರನ್ನು ತೊಡಗಿಸಿಕೊಳ್ಳಲು ಮುಂದಾದರು.

೧೯೫೭ ಮಾರ್ಚ್ ತಿಂಗಳ ಸಾರ್ವತ್ರಿಕ ಚುನಾವಣೆಯಲ್ಲಿ ಮೊಳಕಾಲ್ಮೂರು ವಿದಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಪ್ರಚಂಡ ಬಹುಮತದಿಂದ ಆರಿಸಿಬಂದರು. ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರಾಗಿ ನಿಷ್ಠಾವಂತ ಕಾಂಗ್ರೆಸ್ಸಿಗರ ಮಂತ್ರಿಮಂಡಲ ಸ್ಥಾಪಿಸಿದರು. ಅಸ್ಪೃಶ್ಯತೆಯ ನಿವಾರಣೆಗೆ ಪರಿಣಾಮಕಾರಿ ಹಾಗೂ ಫಲದಾಯಕವಾದ ಕ್ರಮಗಳನ್ನು ರೂಪಿಸಿದರು.

ಸಂಶಯ ಪಿಶಾಚಿಯ ನಗ್ನ ನೃತ್ಯ ಹಾಗೂ ಅಪಪ್ರಚಾರದ ಸಾಂಕ್ರಾಮಿಕ ಪಿಡುಗು ದೇಶದ ಎಲ್ಲೆಡೆ ಹುಟ್ಟಿದಾಗ, ಅರಾಜಕತೆಯುಂಟಾದಂತೆ ಸಂಯಮದ ಪಾತ್ರ ವಹಿಸುವಲ್ಲಿ ನಿಜಲಿಂಗಪ್ಪನವರು ಮೊದಲನೆಯ ವ್ಯಕ್ತಿ.

೧೯೫೮ರಲ್ಲಿ ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ನೀಡಿದ ಅವರು ಹೊಸದುರ್ಗ ಕ್ಷೇತ್ರದಿಂದ ಸ್ಪರ್ಧಿಸಿ ಸೋಲನ್ನನುಭವಿಸಿದರು. ಪುನಃ ಬಾಗಲಕೋಟೆ ಕ್ಷೇತ್ರದಿಂದ ಅವಿರೋಧವಾಗಿ ಆಯ್ಕೆಯಾಗಿ, ಎರಡನೆ ಬಾರಿಗೆ ಮುಖ್ಯ ಮಂತ್ರಿಯ ಸ್ಥಾನವನ್ನು ಅಲಂಕರಿಸಿ, ಮಹತ್ವಪೂರ್ಣವಾದ ಸಾಮಾಜಿಕ ಪರಿವರ್ತನೆಯ ಮೂಲಕ ಸಾಮಾಜಿಕ ಕ್ರಾಂತಿಯನ್ನು ಸಾಧಿಸಲು ಮುಂದಾದರು, ಅರಣ್ಯಾಭಿವೃದ್ಧಿ, ನೀರಾವರಿ, ವಿದ್ಯುತ್, ಇವುಗಳ ಬಗ್ಗೆ ಹೆಚ್ಚಿನ ಗಮನ ಹರಿಸಿದರು.

ಸಂಶಯ ಹಾಗೂ ಅಪಪ್ರಚಾರದ ಜಾಡಿನ ಜೊತೆಗೆ ಹೊಂದಾಣಿಕೆಯ ಕೊರತೆಯಾಗಿ ಮಂತ್ರಿಮಂಡಲದಲ್ಲಿ ಬಿರುಕು-ಭಿನ್ನಾಭಿಪ್ರಾಯಗಳು ತಲೆಯೆತ್ತಿ ಅವರ ಮಂತ್ರಿ ಪದವಿಗೆ ಕುತ್ತು ಬಂತು. ಶಿಗ್ಗಾವಿ ಕ್ಷೇತ್ರದಿಂದ ೧೯೬೭ರಲ್ಲಿ ಪುನಃ ವಿಧಾನ ಸಭೆಗೆ ಆಯ್ಕೆಯಾಗಿ ಮೂರನೇ ಬಾರಿಗೆ ಮುಖ್ಯಮಂತ್ರಿ ಪಟಕ್ಕೇರಿದರು. ಶುದ್ಧ ಅಂತಃಕರಣ ಹಾಗೂ ಸಚ್ಚಾರಿತ್ರದ ಶ್ರೇಷ್ಠ ವ್ಯಕ್ತಿಯಾಗಿ ಕಹಿ ಅನುಭವಗಳನ್ನು ಎದುರಿಸುವಲ್ಲಿ ಯಶಸ್ವಿಯಾದರು. ನಿಜಲಿಂಗಪ್ಪನವರ ಸಮೃದ್ಧಿಯ ಕನಸಿನ ಕರ್ನಾಟಕ ಈಗ ಮತ್ತೆ ಚಿಗುರೊಡೆದು, ಗ್ರಾಮೀಣಾಭಿವೃದ್ಧಿಯ ಮೂಲಕ, ರಾಜ್ಯಾಧಿಕಾರವನ್ನು ಕೈಗೆತ್ತಿಕೊಂಡರು.

ಉತ್ತರ ಭಾರತದ ಕಾಂಗ್ರೆಸ್ ನಾಯಕರ ಬಗ್ಗೆ ಜನರಲ್ಲಿ ವಿಶ್ವಾಸ ಕುಸಿಯುತ್ತಿದ್ದ ಆ ಕಾಲದಲ್ಲಿ

ಕಾಂಗ್ರೆಸ್ಸನ್ನು ಬಲಪಡಿಸಲು ನಿಜಲಿಂಗಪ್ಪನವರು ತಮ್ಮ ಮುಖ್ಯಮಂತ್ರಿ ಹುದ್ದೆಗೆ ರಾಜೀನಾಮೆಯನ್ನು ನೀಡಿ "ಅಖಿಲ ಭಾರತ ಕಾಂಗ್ರೆಸ್ ಸಮಿತಿ"ಯ ಅಧ್ಯಕ್ಷರಾದರು. ಔದ್ಯೋಗಿಕ ಸಾಧನೆ, ಕೃಷಿ ಅಭಿವೃದ್ಧಿ, ಭೂಸುಧಾರಣೆ ಜಾರಿ ಮೂಲಕ ದೇವಮಾನವರಾಗಿ ಮೆರೆದರು.

ಕಾಂಗ್ರೆಸ್ ಪಕ್ಷ ಹೋಳಾಯಿತು. ಎಸ್ಸೆನ್ ಒಂದು ಕಡೆ ನಿಂತು ಮಹಾತ್ಮಾಜಿಯವರ ಕಂಡ ಭಾರತವನ್ನು ಕಟ್ಟುತ್ತೇನೆಂದು ಹೊರಟರು; ಶ್ರೀಮತಿ ಇಂದಿರಾಗಾಂಧಿ ಮತ್ತೊಂದು ಕಡೆ ನಿಂತರು. ಮುಂದೆ ಎಸ್ಸೆನ್ ರಾಜಕೀಯ ಸಂಪರ್ಕವನ್ನೇ ತ್ಯಜಿಸಿದರು.

ಉನ್ನತ ಹಾಗೂ ತಾಂತ್ರಿಕ ಶಿಕ್ಷಣದ ಕಡೆ ಹೆಚ್ಚು ಗಮನಹರಿಸಿ, ಪ್ರಾಥಮಿಕ ಶಿಕ್ಷಣಕ್ಕೂ ಸಹ ಹೆಚ್ಚಿನ ಆದ್ಯತೆಯನ್ನು ನೀಡಿ ಕಾರ್ಯೋನ್ಮುಖವಾಗಿದ್ದ ನಿಜಲಿಂಗಪ್ಪನವರ ಕಾಂಗ್ರೆಸ್ ಪಕ್ಷ ಹೋಳಾಯಿತು. ಮುಖ್ಯಮಂತ್ರಿಯಿಂದ ಅಧ್ಯಕ್ಷತೆಯ ದಾರಿ ಹಿಡಿದ ಎಸ್. ನಿಜಲಿಂಗಪ್ಪನವರು ತಮಗೆ ದೊರಕಿದ ಅಧಿಕಾರವನ್ನು ಔದ್ಯೋಗಿಕ ಸಾಧನೆಗಳಲ್ಲಿ ತೊಡಗಿಸಿಕೊಂಡು, ದೇಶದಲ್ಲಿ ಬಂದೊದಗಿದ ತುರ್ತುಪರಿಸ್ಥಿತಿಯನ್ನು ಎದುರಿಸಿದರು. ಮುಂದೆ ಇಂದಿರಾಗಾಂಧಿಯವರ ಸೋಲಿನ ನಂತರ ಪ್ರಥಮ ಕಾಂಗ್ರೆಸ್ಸೇತರ ಜನತಾಪಕ್ಷ ಕೇಂದ್ರದಲ್ಲಿ ಅಧಿಕಾರ ಹಿಡಿಯಿತು.

ನಿಜಲಿಂಗಪ್ಪನವರ ಗೆಳೆಯರ ಬಳಗ ದೊಡ್ಡದು. ಅವರು ಗಳಿಸಿದ್ದು, ಧನವಲ್ಲ, ಜನ. ವಿಜ್ಞಾನವನ್ನು ಓದಿದರೂ ವಿಚಾರವಾದಿ ಆದ ನಿಜಲಿಂಗಪ್ಪನವರಿಗೆ ಬಸವಣ್ಣನವರಲ್ಲಿ, ಶರಣರಲ್ಲಿ, ಭಗವಾನ್ ಬುದ್ಧನಲ್ಲಿ ಅಪಾರವಾದ ಗೌರವ.

ನಿಜಲಿಂಗಪ್ಪನವರು ನಮ್ಮ ನಡುವೆ ನಮಗೆ ಬೆಳಕಾಗಿ, ದಿಕ್ಕಾಗಿ, ಶಕ್ತಿಯಾಗಿ, ಚೈತನ್ಯವಾಗಿ ಹರಸುತ್ತಿರಲೆಂದು ವಿಶ್ವಶಕ್ತಿಗಳಲ್ಲಿ ಪ್ರಾರ್ಥನೆ. ❑

ಶ್ರೀಮಾನ್ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರನ್ನು
ನೆನೆದಾಗ ಏಕೀಕೃತ ಕರ್ನಾಟಕವೂ
ಕರ್ನಾಟಕವನ್ನು ನೆನೆದಾಗ ನಿಜಲಿಂಗಪ್ಪನವರೂ
ನೆನಪಿಗೆ ಬಂದರೆ ಆಶ್ಚರ್ಯವಿಲ್ಲ. ಕರ್ನಾಟಕ
ಏಕೀಕರಣವನ್ನು ಸಾಧಿಸಿ, ಸಾವಿರಾರು ವರ್ಷಗಳ
ಕನ್ನಡಿಗರ ಅಭೀಪ್ಸೆಯನ್ನು ಪೂರೈಸಿದವರಲ್ಲಿ
ನಿಜಲಿಂಗಪ್ಪನವರು ಅಗ್ರಗಣ್ಯರು. ಕರ್ನಾಟಕ ಶಿಲ್ಪಿ
ಎಂಬ ಪ್ರಶಸ್ತಿ ಅವರಿಗೆ ಸಮುಚಿತವಾಗಿ ಸಲ್ಲುತ್ತದೆ.

ಅವರು ರಾಜಕಾರಣಿಯಾಗಿಯೂ ಸತ್ಯಸಂಧರು
ತತ್ತ್ವನಿಷ್ಠರು, ಮುಖ್ಯಮಂತ್ರಿಯಾಗಿಯೂ
ದರ್ಪಾಹಂಕಾರ ವರ್ಜಿತರು ಹಾಗೂ
ಸರಳ ಜೀವಿಗಳು, ಕಾಂಗ್ರೆಸ್ ಅಧ್ಯಕ್ಷರಾಗಿ
ರಾಷ್ಟ್ರಮಟ್ಟದ ನಾಯಕರಾಗಿಯೂ ಅಧಿಕಾರ
ಲಾಲಸೆಯಿಂದ ಅನ್ಯಾಯಕ್ಕೆ ಮಣಿದವರಲ್ಲ.
ಬಸವೇಶ್ವರ, ಮಹಾತ್ಮ ಗಾಂಧೀಜಿಯವರ
ತತ್ತ್ವವನ್ನು ಅರಗಿಸಿಕೊಂಡು, ಅದರ ಬೆಳಕಿನಲ್ಲಿ
ಬದುಕನ್ನು ನೇರ್ಪಡಿಸಿಕೊಂಡು, ಆತ್ಮಗೌರವವನ್ನು
ಬಿಟ್ಟು ಕೊಡದೆ, ಹಸನಾಗಿ ಸಮಾಧಾನದಿಂದ ಬಾಳಿದವರು.
ಆ ಹಸನು ಸಮಾಧಾನಗಳು ಅವರ ನಡೆನುಡಿಗಳಲ್ಲಿ
ಅವರ ನಿಷ್ಕಪಟ ಮುಗ್ಧ ಮಂದಹಾಸದಲ್ಲಿ ಪ್ರತಿಬಿಂಬಿಸುತ್ತವೆ.

ಮುಂದೆ ಭಾರತೀಯ ಅಥವಾ ಕನ್ನಡನಾಡಿನ
ಇತಿಹಾಸವನ್ನು ರಚಿಸುವವರು ನಿಜಲಿಂಗಪ್ಪನವರನ್ನು
ಮರೆಯಲಾರರು

- ಕುವೆಂಪು